

ನೆಮ್ಮದಿಯ ನಾಳೆ ನಮ್ಮದು

# ಹೊಸತು




ಜೂನ್ ೨೦೦೭
ಬೆಲೆ : ರೂ. ೧೨



# ಬಹುಮುಖ ಪ್ರತಿಭೆಯ ಸಿ. ಎಸ್. ನಿರ್ಮಲ ಕುಮಾರಿ



**ಎಂ.** ವಿ. ಆಚಾರ್ಯರಿಂದ ಮೊದಲ ಪಾಠ. ನಂತರ ತುಮಕೂರಿನ ರವೀಂದ್ರ ಕಲಾಶಾಲೆಯಲ್ಲಿ ಡಿಪ್ಲೊಮ, ಕಲಾ ಶಿಕ್ಷಕರ ತರಬೇತಿ ಪದವಿ ಹಾಗೂ ಕಲಾ ಸ್ನಾತಕ ಪದವಿ ಪಡೆದು ಅದೇ ಶಾಲೆಯಲ್ಲಿ ಉಪನ್ಯಾಸಕ ರಾಗಿಯೂ ಕೆಲಸ ಮಾಡಿದ್ದಾರೆ.

'ಮಾನವೀಯತೆ', 'ನೆನಪುಗಳು', 'ಬೆಳಕಿನೆಡೆಗೆ' - ಹೀಗೆ ವಿವಿಧ ಶೀರ್ಷಿಕೆಗಳ ಸರಣಿ ಚಿತ್ರಗಳನ್ನು ರಚಿಸಿ ಪ್ರದರ್ಶಿಸಿದ್ದಾರೆ. ರೇಖಾಪ್ರಧಾನವಾದ ಅಕ್ರೆಲಿಕ್ ಹಾಗೂ ಮಿಶ್ರಮಾಧ್ಯಮದ ಇವರ ಚಿತ್ರಗಳಲ್ಲಿ ವರ್ಣಗಳ ಮೇಲಿನ ಪ್ರೌಢಿಮೆಯನ್ನು ಕಾಣಬಹುದು.



ತಂಜಾವೂರು, ಮೈಸೂರು ಸಾಂಪ್ರದಾಯಿಕ ಶೈಲಿ ಹಾಗೂ ಶಿಲ್ಪಕಲೆಯಲ್ಲೂ ಪರಿಣತರು. ಮಣ್ಣು, ಎಮ್‌ಸೀಲ್, ಪ್ಲಾಸ್ಟರ್ ಆಫ್ ಪ್ಯಾರಿಸ್ ಮತ್ತು ಪೇಪರ್ ಪಲ್ಪ್‌ನಿಂದ ತಯಾರಿಸಿದ ಶಿಲ್ಪಗಳಲ್ಲಿ ನೈಜತೆ ಸ್ಫುಟವಾಗಿ ತೋರುತ್ತೆ. ೧೯೮೮-೧೯೯೯ರ ಮೈಸೂರು ದಸರಾ ಚಿತ್ರಪ್ರದರ್ಶನ ಪ್ರಶಸ್ತಿ, ಬಿಜಾಪುರದಲ್ಲಿ ನಡೆದ ೧೯೯೪ರ ಅಖಿಲ ಭಾರತ ಕಲಾವಿದರ ಚಿತ್ರಪ್ರದರ್ಶನ ಪ್ರಶಸ್ತಿ ಇವರಿಗೆ ಸಂದಿವೆ. ೧೯೮೬ರಿಂದ ಅನೇಕ ಚಿತ್ರ ಪ್ರದರ್ಶನಗಳಲ್ಲಿ ಇವರ ಕಲಾಕೃತಿಗಳು ಬೆಳಕಿಗೆ ಬಂದಿವೆ. ಹಲವಾರು ಏಕವ್ಯಕ್ತಿ ಪ್ರದರ್ಶನಗಳನ್ನು ನಡೆಸಿದ್ದಾರೆ.

ಚಿತ್ರಕಲೆ, ಶಿಲ್ಪಕಲೆ, ಗಾಜು, ಬಟ್ಟೆಯ ಮೇಲೆ ಬಣ್ಣದ ರಚನೆ ಹೀಗೆ ಇತರ ಕರಕುಶಲ ಕಲೆಗಳನ್ನು ಆಸಕ್ತರಿಗೆ ಹೇಳಿಕೊಡುವುದು ಇವರ ಪ್ರೀತಿಯ ಕೆಲಸ.

– **ಸಹನ,** ನಂ. ೩, 'ಕೆರೆಮನೆ' ಅಪಾರ್ಟ್‌ಮೆಂಟ್ಸ್, 'ದೇವರಕೆರೆ' ಎಕ್ಸ್‌ಟೆನ್ಶನ್
ಇಸ್ರೋ ಲೇಔಟ್, ಬೆಂಗಳೂರು - ೫೬೦ ೦೭೮







# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಜಿ. ಎಂ. ಬೊಮ್ಮಳ್ಳಿ, ಕೆದಿಲಾಯ, ಬಿ. ವಿಲ್ಸನ್, ಶ್ರೀಹರಿ, ರಾಂಚಂದ್ರ ಕೊಪ್ಪಲು, ಮೋನಪ್ಪ

ಮುಖಚಿತ್ರ : ಕಳ್ಳಿಹೂವು

ವರ್ಣಚಿತ್ರ : ಕೆ. ಪಿ. ಸ್ವಾಮಿ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಕಾವೇರಿ ನೀರಿನ ಹಂಚಿಕೆಯನ್ನು ನಿಗದಿಗೊಳಿಸಿರುವ ನ್ಯಾಯಮಂಡಲಿಯ ತೀರ್ಪನ್ನು ಪ್ರಶ್ನಿಸಿ ಕರ್ನಾಟಕ ಸರ್ಕಾರವು ಕಡೆಗೂ ನ್ಯಾಯಾಲಯದ ಮೆಟ್ಟಿಲನ್ನು ಹತ್ತಿದೆ. ಆದರೂ ನಮ್ಮ ರಾಜ್ಯದ ವಾದ ವೇನೆಂಬುದನ್ನು ಸಾರ್ವಜನಿಕರಿಗೆ ಸ್ಪಷ್ಟವಾಗಿ ತಿಳಿಸಿಲ್ಲ. ಹಿಂದೆ ನ್ಯಾಯಮಂಡಲಿಯ ಮುಂದೆ ವಾದ ಮಂಡಿಸುವಾಗ ನಮ್ಮ ರಾಜ್ಯವು ಹಲವು ವಿಷಯಗಳಿಗೆ ಸಂಬಂಧಿಸಿದಂತೆ ತಪ್ಪು ಮಾಹಿತಿ ನೀಡಿದ್ದಿತೆಂದೂ, ಮಂಡಲಿಯು ಅದರ ಆಧಾರದ ಮೇಲೆ ನೀರಿನ ಹಂಚಿಕೆಯನ್ನು ಮಾಡಿದೆಯೆಂದೂ ಹೇಳಲಾಗಿದೆ. ಅಂದರೆ, ನಾವು ತಪ್ಪು ಲೆಕ್ಕ ಕೊಟ್ಟು ಈಗ ತಲೆ ಚಚ್ಚಿಕೊಳ್ಳು ತ್ತಿದ್ದೇವೆ ಎಂದರ್ಥ. ಉದಾಹರಣೆಗೆ, ಹೇಮಾವತಿ ನೀರಿನ ಬಳಕೆಯನ್ನು ವಿವರಿಸುವಾಗ, ಭತ್ತದ ಬೆಳೆಗೆ ಮೂರು ಬಾರಿ ನೀರು ಕಟ್ಟಬೇಕಾಗುತ್ತದೆಂದು ಹೇಳಿ, ಅದಕ್ಕೆ ಇಂತಿಷ್ಟು ನೀರು ಬೇಕಾಗುತ್ತದೆಯೆಂದು ಲೆಕ್ಕಾಚಾರ ಮಾಡಲಾಗಿದೆ. ಅಷ್ಟು ನೀರನ್ನು ಕೊಟ್ಟು ಉಳಿದುದನ್ನು ತಮಿಳುನಾಡಿಗೆ ಹರಿಸಿ, ಎಂದು ಮಂಡಲಿ ಹೇಳಿದೆ. ತಪ್ಪಿರುವುದು ನಮ್ಮಲ್ಲಿ. ಮೂರು ಬಾರಿ ನೀರು ಕಟ್ಟಿದರೆ ಸಾಕೆಂದು ನಮ್ಮ ಸರ್ಕಾರಕ್ಕೆ ಯಾವ ವ್ಯವಸಾಯ ತಜ್ಞರು ತಿಳಿಸಿದರೋ ಗೊತ್ತಿಲ್ಲ. ಇಂತಹ ಪ್ರಮಾದಗಳಿಂದ ನಮ್ಮ ವಾದವು ಕುಸಿಯುತ್ತದೆ. ಆದ್ದರಿಂದಲೇ ನ್ಯಾಯಾಲಯಕ್ಕೆ ನೀಡಲಾಗುವ ಮಾಹಿತಿ ಮತ್ತು ಮಂಡಿಸಲಾಗುವ ವಾದವನ್ನು ಸಾರ್ವಜನಿಕವಾಗಿ ತಿಳಿಯಪಡಿಸಬೇಕು. ಪರಿಣತರಲ್ಲದವರು ಸಹ ಎಷ್ಟೋ ಒಳ್ಳೆಯ ಸೂಚನೆಗಳನ್ನು ನೀಡಬಲ್ಲ ರೆಂಬುದು ಸುಳ್ಳಲ್ಲ. ನ್ಯೂನತೆಗಳಿಂದ ಕೂಡಿದ ಮಾಹಿತಿಯನ್ನು ಕೊಟ್ಟರೆ ನಮ್ಮ ರಾಜ್ಯಕ್ಕೆ ಅಗತ್ಯವಾದಷ್ಟು ನೀರು ದೊರೆಯುವುದಿಲ್ಲ. ಇನ್ನೊಂದು ಸ್ವಾರಸ್ಯದ ಸಂಗತಿಯೆಂದರೆ, ಕೃಷ್ಣರಾಜಸಾಗರವನ್ನು ನಿರ್ಮಿಸುವ ಮೊದಲು ಆಂಗ್ಲ ಸರ್ಕಾರಕ್ಕೆ ಮನವಿ ಸಲ್ಲಿಸಿ ಕಟ್ಟೆ ಕಟ್ಟಲು ಅನುಮತಿ ದೊರಕಿಸಿಕೊಳ್ಳಬೇಕಾಗಿತ್ತು. ಮದ್ರಾಸಿನಲ್ಲಿದ್ದ ಬ್ರಿಟಿಷ್ ಅಧಿಕಾರಿಯು ಸಮ್ಮತಿ ನೀಡುವ ಸೂಚನೆ ಇರಲಿಲ್ಲ. ಆಗ ನಮ್ಮ ರಾಜ್ಯದ ಮುಖ್ಯ ಇಂಜಿನಿಯರ್ ಆಗಿದ್ದ ಎಂ. ವಿಶ್ವೇಶ್ವರಯ್ಯನವರು ವಿವರವಾಗಿ ಒಂದು ಪತ್ರ ಬರೆದು ಅನುಮತಿ ಕೇಳಿದರು: ಕೋಲಾರದ ಚಿನ್ನದ ಗಣಿಗೆ ಶಿವನಸಮುದ್ರದಿಂದ ವಿದ್ಯುಚ್ಛಕ್ತಿ ನೀಡಬೇಕು; ಹಾಗೆ ನೀಡದಿದ್ದರೆ ಟೇಲರ್ ಕಂಪನಿಯು ಬೇರೆ ಮಾರ್ಗ ಹುಡುಕಿಕೊಳ್ಳುವುದಾಗಿ ತಿಳಿಸಿದೆ; ವರ್ಷದ ಎಲ್ಲ ತಿಂಗಳುಗಳಲ್ಲೂ ವಿದ್ಯುಚ್ಛಕ್ತಿ ಉತ್ಪಾದನೆಗೆ ಇಂತಿಷ್ಟು ನೀರು ಬೇಕಾಗುವುದರಿಂದ ಅನಿವಾರ್ಯವಾಗಿ ಕನ್ನಂಬಾಡಿ ಕಟ್ಟೆ ಕಟ್ಟಬೇಕಾಗಿದೆ, ಇತ್ಯಾದಿಯಾಗಿ ಅವರು ವಾದಿಸಿದ್ದರು. ೧೯೨೪ರ ಒಪ್ಪಂದವು ಸರ್ವಶ್ರೇಷ್ಠವೆಂದು ಹೇಳುವ ತಮಿಳುನಾಡು ಸರ್ಕಾರ ಮತ್ತು ಕಾವೇರಿ ನ್ಯಾಯಮಂಡಲಿ ಹೀಗೊಂದು ವಾದವನ್ನೇಕೆ ಹೂಡಬಾರದು ? ವಾದ ಹೀಗಿದೆ : ಈಗ ಚಿನ್ನದ ಗಣಿ ಇಲ್ಲದಿರುವುದರಿಂದ ವಿದ್ಯುಚ್ಛಕ್ತಿ ಉತ್ಪಾದಿಸಬೇಕಾಗಿಲ್ಲ, ಆದ್ದರಿಂದ ಕೃಷ್ಣರಾಜಸಾಗರದಲ್ಲಿ ನೀರಿನ ಶೇಖರಣೆ ಮಾಡಕೂಡದು !

ಈ ವಾದದಷ್ಟೇ ಮೂರ್ಖತನದ ಮಾತು ೧೯೨೪ರ ಒಪ್ಪಂದವು ಸದಾಕಾಲಕ್ಕೂ ಅನ್ವಯ ವಾಗುತ್ತದೆಂಬ ನ್ಯಾಯಮಂಡಲಿಯ ಮಾತು. ಆ ಒಪ್ಪಂದವನ್ನು ತಿರಸ್ಕರಿಸದೆ ರಾಜ್ಯದ ಅವಶ್ಯಕತೆಯನ್ನು ಪೂರೈಸುವುದು ಬಹಳ ಕಠಿಣ. ಏನೇ ಇರಲಿ, ಸಚಿವ ಈಶ್ವರಪ್ಪನವರು ಮುತ್ತಿನಂತಹ ಮಾತನ್ನಾಡಿದ್ದಾರೆ : ''ನ್ಯಾಯಾಲಯವು ನಮ್ಮ ರಾಜ್ಯದ ಅಹವಾಲನ್ನು ವಿಚಾರಣೆಗೆ ಸ್ವೀಕರಿಸಿರುವುದು ನಮಗೆ ಮೊಟ್ಟಮೊದಲ ವಿಜಯ'', ಎಂದು. ಇಂತಹ ಬಾಲಿಶವಾದ ತಿಳಿವಳಿಕೆಯೇ ನಮ್ಮ ರಾಜ್ಯದ ಬಿಕ್ಕಟ್ಟಿಗೆ ಕಾರಣವಿರಬೇಕು. ವಿಚಾರಣೆಗೆ ಸ್ವೀಕಾರವಾಗುವುದು ವಿಜಯ ಹೇಗಾಗುತ್ತದೆ ? ಹಾಗಿದ್ದರೆ, ಅರ್ಜಿ ಸಲ್ಲಿಸಿರುವ ಎಲ್ಲ ರಾಜ್ಯಗಳಿಗೂ ಅದು ಅನ್ವಯವಾಗಬೇಕಲ್ಲವೆ ? ಈಶ್ವರಪ್ಪನವರು ತಮ್ಮ ಖಾತೆಯಿಂದ ನಿರ್ಗಮಿಸಿ ರಾಜ್ಯಕ್ಕೆ ಉಪಕಾರ ಮಾಡಬೇಕೆಂದು ವಿನಂತಿಸಿಕೊಳ್ಳಬೇಕಾಗಿದೆ.

* * *

ದ್ರಾವಿಡ ಮುನ್ನೇತ್ರ ಕಳಗಂ ಪಕ್ಷವು ನಮ್ಮ ದೇಶದ ಅನೇಕ ರಾಜಕೀಯ ಪಕ್ಷಗಳಂತೆ ಯಾವ ಸಿದ್ಧಾಂತಕ್ಕೂ ಬದ್ಧವಾಗಿರದ ಕುಟುಂಬ ಕೇಂದ್ರಿತ ಪಕ್ಷ. ಅದಕ್ಕೆ ಬೇರೆ ಲಕ್ಷಣಗಳಿದ್ದ ಕಾಲವೂ ಒಂದಿತ್ತು. ಈಗ ಅದು ದ್ರಾವಿಡವಲ್ಲ; ಆದ್ದರಿಂದ ದ್ರಾವಿಡವನ್ನು ಮುನ್ನಡೆಸುವ ಪ್ರಶ್ನೆಯೂ ಇಲ್ಲ. ಕರುಣಾನಿಧಿಯನ್ನು ಮೀರಿಸುವ 'ದ್ರಾವಿಡ' ಪಕ್ಷ ಜಯಲಲಿತಾ ಅವರದು. ಈಚೆಗೆ ಅವರು ಉತ್ತರ ಪ್ರದೇಶದ ಚುನಾವಣಾ ಪ್ರಚಾರಕ್ಕೆ ತೆರಳಿದ್ದು ಅಲ್ಲಿ ಹಿಂದಿಯಲ್ಲಿ ಭಾಷಣ ಮಾಡಿ, ಸೋನಿಯಾ ಗಾಂಧಿಗೆ ತನಗೆ ಬರುವಷ್ಟು ಹಿಂದಿ ಬರುತ್ತದೆಯೇ, ಎಂದು ಪ್ರಶ್ನಿಸಿದರಂತೆ. ಬಾಳಠಾಕ್ರೆ ಪಕ್ಷದಲ್ಲಿ ಇಬ್ಬರು ಪುತ್ರರು ಕಚ್ಚಾಡಿ ಪಕ್ಷವನ್ನು ಒಡೆದಂತೆ ಈಗ ಕರುಣಾನಿಧಿಯವರ ಪಕ್ಷದಲ್ಲಿ ಸುಪುತ್ರರಿಬ್ಬರು ಸಿಂಹಾಸನಕ್ಕೆ ಕಲಹ ನಡೆಸಿದ್ದಾರೆ. ಇದು ಕೌಟುಂಬಿಕ ಕಲಹವಾಗಿದ್ದರೂ ರಾಜ್ಯದ ರಾಜಕೀಯಕ್ಕೆ ಸಂಬಂಧಿಸಿದ ವಿಷಯ. ತಮ್ಮ ಮಕ್ಕಳು ಸ್ವತಂತ್ರವಾಗಿ ರಾಜಕೀಯ ಮುನ್ನಡೆ ಸಾಧಿಸಿಕೊಳ್ಳುತ್ತಾರೆಂದು ಹೇಳುತ್ತಲೇ ಇಂದಿರಾ

೮ನೇ ಪುಟಕ್ಕೆ



ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೮ ಸಂಚಿಕೆ-೧೧ ಜೂನ್ ೨೦೦೭

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@vsnl.com
website : www.navakarnatakabooks.com


## ಸಾಧ್ಯತೆಗಳ ಸುಗ್ಗಿ

**ಸಂಪಾದಕೀಯ**

ಉತ್ತರ ಪ್ರದೇಶದ ಮುಖ್ಯಮಂತ್ರಿ ಮಾಯಾವತಿಯವರಿಗೆ ಎಷ್ಟು ಅಭಿನಂದನೆ ಸಲ್ಲಿಸಿದರೂ ಸಾಲದು. ಬಹುಜನ ಸಮಾಜ ಪಕ್ಷವು ಸರ್ವಜನ ಪಕ್ಷವಾಗಿ ಹೊಮ್ಮಿದೆ ಮತ್ತು ಅಂತೆಯೇ ನಡೆದುಕೊಳ್ಳುತ್ತದೆ ಎಂಬ ಅಭೂತಪೂರ್ವ ಆಶ್ವಾಸನೆಯನ್ನವರು ಕೊಟ್ಟಿದ್ದಾರೆ. ಭಾರತೀಯ ಜನತಾ ಪಕ್ಷವೇ ಆಗಲಿ, ಬೇರಾವ ಪಕ್ಷವೇ ಆಗಲಿ, ಅವರಿಗೆ ಬೆಂಬಲ ನೀಡಬೇಕಾದ ಅವಶ್ಯಕತೆ ಇಲ್ಲದಂತೆ ಒಂದು ಐತಿಹಾಸಿಕ ವಿಜಯವನ್ನು ಸಾಧಿಸಿರುವುದು ಭಾರತದ ಇಂದಿನ ರಾಜಕೀಯದಲ್ಲಿ ಅವರಿಗೆ ವಿಶೇಷ ಸ್ಥಾನವನ್ನು ಕಲ್ಪಿಸಿಕೊಟ್ಟಿದೆ. ಮನುವಾದಿಗಳೆಂದರೆ ಯಾವುದೇ ಒಂದು ನಿರ್ದಿಷ್ಟ ಜಾತಿಯವರಲ್ಲ, ಸೈದ್ಧಾಂತಿಕವಾಗಿ ಜಡ್ಡು ಸಂಪ್ರದಾಯಗಳಿಗೆ ಬದ್ಧರಾಗಿರುವ ಯಾವುದೇ ಜಾತಿಯವರೂ ಆಗಬಹುದೆಂಬ ಹೊಸ ವ್ಯಾಖ್ಯಾನವನ್ನು ತಾರ್ಕಿಕವಾಗಿ ನೀಡಲು ಸಾಧ್ಯವಾಗುವಂತೆ ಮಾಯಾವತಿಯವರು ಅಕ್ಷರಶಃ ಎಲ್ಲ ಜಾತಿಯವರನ್ನೂ ಒಂದೇ ಛತ್ರದಡಿಯಲ್ಲಿ ಒಗ್ಗೂಡಿಸಿದ್ದಾರೆ. ಅದೊಂದು ಅದ್ಭುತ ಸಾಹಸ. ಎಡಪಕ್ಷಗಳ ಅಭ್ಯರ್ಥಿಗಳೆಲ್ಲಾ ಸಾರಾಸಗಟಾಗಿ ಸೋಲು ಅನುಭವಿಸಿದ್ದರೂ, ಗೆದ್ದವರು ಮಾಯಾವತಿ ಆದ್ದರಿಂದ ಅವರ ಪರಾಭವವು ದುಗುಡಕ್ಕೆ ಕಾರಣವಾಗುವುದಿಲ್ಲ. ಮಂತ್ರಿಮಂಡಲದಲ್ಲಿ ಈಗ ಎಲ್ಲ ಜಾತಿಯವರೂ ಇದ್ದಾರೆ; ಆದ್ದರಿಂದ ಯಾವ ಜಾತಿವಲಯವೂ ಪರಕೀಯತೆಯ ಭಾವವನ್ನು ಬೆಳೆಸಿಕೊಳ್ಳಬೇಕಾಗಿಲ್ಲ. ಆಡಳಿತಾತ್ಮಕವಾಗಿ ಕೆಲವು ಗಟ್ಟಿ ನಿಲುವುಗಳನ್ನು ತಾಳುವ ಸೂಚನೆಯನ್ನೂ ಮಾಯಾವತಿ ನೀಡಿದ್ದಾರೆ. ಭಾರತೀಯ ಜನತಾ ಪಕ್ಷದಂತಹ ಸಮಾಜ-ವಿಭಜಕ ಫ್ಯಾಸಿಸ್ಟ್ ಪಕ್ಷಕ್ಕೆ ಪರ್ಯಾಯವನ್ನು ರಚಿಸುವ ಕ್ರಮವನ್ನು ಕಾರ್ಯತಃ ಅವರು ಮಾಡಿ ತೋರಿಸಿರುವುದು ಶ್ಲಾಘನೀಯ. ಇಡೀ ಭಾರತದ ರಾಜಕೀಯದಲ್ಲಿ ಅಗಾಧ ಸಾಧ್ಯತೆಗಳ ಸುಗ್ಗಿಯತ್ತ ತಿರುವು ನೀಡುವ ಅವಕಾಶ ಎಷ್ಟು ವಿಪುಲವಾಗಿದೆಯೆಂಬುದನ್ನು ಅವರ ವಿಜಯವು ಸೂಚಿಸುತ್ತದೆ. ಆದ್ದರಿಂದಲೇ ಅವರಿಂದ ದೇಶವು ಅಪೂರ್ವವಾದ ಸಾಮಾಜಿಕ-ಆರ್ಥಿಕ-ಸಾಂಸ್ಕೃತಿಕ ನೀತಿಗಳನ್ನು ನಿರೀಕ್ಷಿಸುತ್ತದೆ. ಜಾಗತೀಕರಣವನ್ನು ಎದುರಿಸುವುದಿರಬಹುದು, ಚಿದಂಬರಂ-ಅಹ್ಲುವಾಲಿಯ ದುಷ್ಟ ಯೋಜನೆಗಳ ದುರಂತವನ್ನು ಎದುರಿಸುವುದಿರಬಹುದು, ಸರ್ವಸಮಾಜದ ಶಿಕ್ಷಣ-ಆರೋಗ್ಯ-ವಸತಿ-ಉದ್ಯೋಗಗಳ ಪ್ರಶ್ನೆ ಇರಬಹುದು, ಎಲ್ಲದಕ್ಕೂ ಮಾಯಾವತಿ ಸರ್ಕಾರವು ಸೂಕ್ತ ಬದಲಿ ವ್ಯವಸ್ಥೆಯ ರೂಪುರೇಷೆಗಳನ್ನು ಹಾಕಿಕೊಡಬೇಕಾಗಿದೆ. ಮುಂದುವರಿದ ಜಾತಿಗಳಿಗೆ ಸೇರಿದ್ದು, ಆರ್ಥಿಕವಾಗಿ ಹಿಂದುಳಿದಿದ್ದರೆ, ಅಂತಹವರಿಗೆ ವಿಶೇಷ ಸೌಲಭ್ಯ ನೀಡುವುದು ಅಗತ್ಯವೆಂದು ಮಾಯಾವತಿ ಹೇಳಿದ್ದಾರೆ. ಇದನ್ನು ಕಾರ್ಯಗತಗೊಳಿಸಲು ರೂಪಿಸುವ ಕ್ರಮಗಳ ಸಂದರ್ಭದಲ್ಲಿ ನ್ಯಾಯಾಲಯವು ಎತ್ತಿರುವ ಆಕ್ಷೇಪಕ್ಕೂ ಉತ್ತರ ದೊರೆಯಬಹುದು. ಹಿಂದುಳಿದ ಜಾತಿಗಳಲ್ಲಿ ಪ್ರವರ್ಧಮಾನಕ್ಕೆ ಬಂದಿರುವವರಿಗೆ ಮೀಸಲಾತಿಯ ನಿರಾಕರಣೆಯು ಆರ್ಥಿಕ ಸೂತ್ರವನ್ನು ಅನ್ವಯ ಮಾಡುವುದು ಸಹಜವಾಗಿಯೇ ಅನಿವಾರ್ಯವಾಗುತ್ತದೆ. ಇದನ್ನು ಅನುಷ್ಠಾನಕ್ಕೆ ತಂದರೆ ಇಡೀ ಪ್ರಶ್ನೆಗೆ ಜಾತಿಯ ಆಧಾರವು ಮರೆಯಾಗಿ ವರ್ಗದ ಪ್ರಶ್ನೆಯು ಆದ್ಯತೆಯನ್ನು ಪಡೆಯುತ್ತದೆ. ಜಾಗತೀಕರಣದಂತಹ ಪ್ರಕ್ರಿಯೆಗಳಿಗೆ ಮೂಲಭೂತವಾದ ಉತ್ತರವಿರುವುದೇ ವರ್ಗದ ನೆಲೆಯಲ್ಲಿ. ಸ್ಯಾಮ್ ಪಿಟ್ರೋಡಾನ ಶಿಕ್ಷಣ ನೀತಿಯಾಗಲಿ, ಮುರಳಿ ಮನೋಹರ ಜೋಶಿಯವರ ಸಂಸ್ಕೃತಿ ನೀತಿಯಾಗಲಿ, ಅಂತಿಮವಾಗಿ ತಿರಸ್ಕಾರಯೋಗ್ಯವಾಗುವುದು ವರ್ಗ ದೃಷ್ಟಿಯಿಂದ. ಶ್ರೇಷ್ಠ-ಕನಿಷ್ಠರೆಂಬ ತಾರತಮ್ಯಗಳಿಗೆ ಸೊಪ್ಪುಹಾಕದೆ ಸಮಾಜದ ಎಲ್ಲ ವಿಭಾಗಗಳ ನೊಂದವರನ್ನು, ದುಡಿಯುವವರನ್ನು, ಅಸಡ್ಡೆಗೆ ಗುರಿಯಾಗಿರುವವರನ್ನು, ತುಳಿತಕ್ಕೆ ಸಿಲುಕಿರುವವರನ್ನು ಒಂದಾಗಿಸಿ ಮಾಯಾವತಿ ಚುನಾವಣೆಯಲ್ಲಿ ಗೆದ್ದಿದ್ದಾರೆ. ಅವರ ಪರವಾಗಿ ಸಿನಿಮಾ ನಟ-ನಟಿಯರು ಪ್ರಚಾರ ಮಾಡಲಿಲ್ಲ, ಅಂಬಾನಿ-ಅಮರ್ ಸಿಂಗ್ ರೀತಿಯ ಶ್ರೀಮಂತರು ಹಣ ಚೆಲ್ಲಲಿಲ್ಲ, ವಾಜಪೇಯಿ-ಅದ್ವಾನಿಗಳಂತಹ ಮುತ್ಸದ್ದಿಗಳು ಅಬ್ಬರದ ಘೋಷಣೆ ನೀಡಲಿಲ್ಲ, ರಾಹುಲ ಗಾಂಧಿಯಂತಹ ಅಶಿಕ್ಷಿತ ಬಾಲರಾಜಕಾರಣಿಗಳು ಶೋಭಿಸಲಿಲ್ಲ. ಯಾವ ಡಂಗೂರವೂ ಇಲ್ಲದೆ ಜನಸಾಮಾನ್ಯರ ಆಕಾಂಕ್ಷೆಗಳನ್ನು ಗುರುತಿಸಿ ಅವರ ಮನಸ್ಸನ್ನು ಮಾಯಾವತಿ ಗೆದ್ದಿದ್ದಾರೆ. ಇನ್ನು ಮುಂದೆ ಗೆಲ್ಲುವುದು ಇದಕ್ಕಿಂತಲೂ ಮಹತ್ವದ್ದು. ಉತ್ತರ ಪ್ರದೇಶದಲ್ಲಿ ಭೂಮಿಯ ಒಡೆತನವು ದುಡಿಯುವವರ ಹಿತಕ್ಕೆ ವಿರುದ್ಧ ದಿಕ್ಕಿನಲ್ಲಿದೆ, ನೈಸರ್ಗಿಕ ಮತ್ತು ಮಾನವಿಕ ಸಂಪತ್ತಿನ ವೈಜ್ಞಾನಿಕ ಬಳಕೆ ಆಗುತ್ತಿಲ್ಲ, ಶಿಕ್ಷಣ ಕ್ಷೇತ್ರವು ವ್ಯಾಪಕವಾಗಿ ಬೆಳೆದಿಲ್ಲ. ಹೀಗೆ ಅನೇಕ ಸವಾಲುಗಳಿವೆ. ಸಾರ್ವಜನಿಕ ಹಣ ಮತ್ತು ಸಂಪತ್ತನ್ನು ನಮ್ಮ ಅನರ್ಥ ಮಂತ್ರಿ ಯಡಿಯೂರಪ್ಪನವರಂತೆ ಮಠಾಧಿಪತಿಗಳಿಗೆ ಮತ್ತು ಆರೆಸ್ಸೆಸ್ ಅಧಿಪತಿಗಳಿಗೆ ಹಂಚುವ ಪದ್ಧತಿ ಮಾಯಾವತಿಯವರದ್ದಲ್ಲ. ದೇಶದ ನಿರೀಕ್ಷೆಗಳನ್ನು ಹುಸಿ ಮಾಡದೆ, ದೇಶದ ರಾಜಕೀಯಕ್ಕೆ ತಿರುವು ನೀಡುವ ಯಶೋಗಾಥೆ ಮಾಯಾವತಿ ಸರ್ಕಾರದ್ದಾಗಲಿ ಎಂದು ಆಶಿಸೋಣ.

ಇದಕ್ಕೆ ಪೂರಕವಾಗಿ ಒಂದು ಎಚ್ಚರಿಕೆಯ ಮಾತನ್ನು ಸಹ ಗಮನಿಸಬೇಕು. ವಿವಿಧ ಜಾತಿಗಳಿಗೆ ಸೇರಿದವರೆಲ್ಲಾ ಇಂದು ಸರ್ಕಾರದಲ್ಲಿ ಭಾಗಿಗಳಾಗಿದ್ದರೂ ಅವರೆಲ್ಲಾ ತಮ್ಮ ತಮ್ಮ ಪ್ರತ್ಯೇಕ ಜಾತಿ ಭಾವಗಳನ್ನು ಬಿಟ್ಟಿಲ್ಲ, ಅವನ್ನು ಮೀರಿ ಬೆಳೆದಿಲ್ಲ. ಹಿಂದಿನ ಸರ್ಕಾರಗಳು ತಮಗೆ ನೀಡಿದ್ದ ಆಶ್ವಾಸನೆಗಳನ್ನು ಪೂರೈಸಲಿಲ್ಲವೆಂಬ ಕಾರಣದಿಂದ ಇಂದು ಅವರು ಮಾಯಾವತಿಯವರೊಡನೆ ಕೈ ಜೋಡಿಸಿದ್ದಾರೆ. ಅವರ ನಿರಾಶೆ ಅಥವಾ ಇತರರಿಂದ ಅವರಿಗೆ ಬರಬಹುದಾದ ಪ್ರಲೋಭನೆಯು ಅವರನ್ನು ಬಹುಜನ ಸಮಾಜ ಪಕ್ಷದಿಂದ ವಿಮುಖರನ್ನಾಗಿಸಲು ಸಾಧ್ಯವಿದೆ. ಆದ್ದರಿಂದ ಚುನಾವಣೆಯ ಪೂರ್ವದಲ್ಲಿ ನೀಡಿದ್ದ ಭರವಸೆಗಳನ್ನು ಈಡೇರಿಸುವುದು ಅವಶ್ಯಕ. ಅಲ್ಲದೆ, ಮಾಯಾವತಿಯವರ ಪಕ್ಷದ ವತಿಯಿಂದ ಚುನಾಯಿತರಾಗಿರುವ ಶಾಸಕರಲ್ಲಿ ಕುಪ್ರಸಿದ್ಧರಾದ ಕೆಲವು ಅಪರಾಧಿಗಳಿದ್ದಾರೆ. ಕೊಲೆ ಆಪಾದನೆಯ ಮೇಲೆ ಅಪರಾಧಿಯೆಂದು ಸಾಬೀತಾಗಿರುವ ಒಬ್ಬ ವ್ಯಕ್ತಿ ಈಗಲೂ ಜೈಲಿನಲ್ಲಿದ್ದಾನೆ. ಅಲ್ಲಿಂದಲೇ ಶಾಸಕನ ಪಟ್ಟಕ್ಕೆ ಏರಿದ್ದಾನೆ. ಆ ನೆಪ ಹೂಡಿ ಆಸ್ಪತ್ರೆಗೆ ದಾಖಲಾಗಿ ಅಲ್ಲಿ ತನ್ನ ವಿಜಯೋತ್ಸವವನ್ನು ಆಚರಿಸಿಕೊಂಡಿದ್ದಾನೆ. ಇನ್ನೊಬ್ಬ ಚುನಾಯಿತ ಶಾಸಕನ ಮೇಲೆ ಹತ್ತಕ್ಕೂ ಹೆಚ್ಚು ಕೊಲೆ ಆಪಾದನೆಗಳಿವೆ. ಆತ ಮಂತ್ರಿಯಾಗುವ ಸಂಭವವೂ ಉಂಟೆಂದು ಹೇಳಲಾಗಿದೆ. ಹೀಗೆ ಇನ್ನೂ ಕೆಲವರು ಈ ಪಟ್ಟಿಗೆ ಸೇರುತ್ತಾರೆ. ಅಂತಹವರನ್ನು ಅಧಿಕಾರದಿಂದ ದೂರವಿಡದೆ ಮಾಯಾವತಿ ಸರ್ಕಾರವು ಜನಪರ ಆಡಳಿತ ನೀಡಲಾಗುವುದಿಲ್ಲ. ಇದನ್ನು ಹೇಗೆ ನಿಭಾಯಿಸಲಾಗುತ್ತದೆಂಬುದು ಸಹ ಮಾಯಾವತಿ ಸರ್ಕಾರದ ಭವಿಷ್ಯವನ್ನು ನಿರ್ಧರಿಸುತ್ತದೆ. ಜನಮನ್ನಣೆ ಗಳಿಸಿರುವ ಮಾಯಾವತಿಯವರಿಗೆ ಹೀನಾಯ ಅಪರಾಧಗಳ ಹಿನ್ನೆಲೆಯಿರುವ ಕೆಲಮಂದಿಯ ಬೆಂಬಲ ಬೇಕಾಗಲಾರದು.

# ಮುಂದುವರಿದ 'ಧರ್ಮಕಾರಣ'ದ ರಾಜಕಾರಣ

**ಡಾ॥** ಪಿ. ವಿ. ನಾರಾಯಣ ಅವರ ಕಾದಂಬರಿ 'ಧರ್ಮಕಾರಣ'ವು ಪ್ರಕಟವಾದ ತರುವಾಯದಲ್ಲಿ ಸಾಹಿತ್ಯ ಕೃತಿಯಾಗಿ ಮನ್ನಣೆ ಪಡೆದು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನವನ್ನು ಪಡೆಯಿತು. ಸಾಹಿತ್ಯದಲ್ಲಿ ಇತಿಹಾಸದ ಪೂರ್ಣ ಪ್ರತಿಫಲನ ಇರಲೇಬೇಕೆಂಬ ಮೌಢ್ಯವು ತುಂಬಿರುವ ಹಿನ್ನೆಲೆಯಲ್ಲಿ ಕೆಲವರು ಆ ಕೃತಿಯನ್ನು ತುಚ್ಛೀಕರಿಸಿ ಆರೋಪಿತ ಕೋಪ ಪ್ರಕಟಿಸಿದರು. ಅಂದರೆ, ಅವರಿಗೆ ಕೃತಿಯ ತತ್ತ್ವವು ಮುಖ್ಯವಾಗಿರಲಿಲ್ಲ; ಅದನ್ನು ವಿರೋಧಿಸಿ ಜಾತಿ ರಾಜಕೀಯ ಮಾಡುವುದು ಅವರ ಉದ್ದೇಶವಾಗಿತ್ತು. ವೀರಶೈವ ಧರ್ಮದ ಏಕೈಕ ಪ್ರತಿಪಾದಕರಾಗಿ, ಅದರ ಗುತ್ತಿಗೆ ಹಿಡಿದವರಂತೆ, ಒಬ್ಬ ಶಾಸಕರು ವಿಧಾನ ಪರಿಷತ್ತಿನಲ್ಲಿ ನುಡಿದಿದ್ದ ಮಾತುಗಳು ಇಂದಿಗೂ ಮರೆಯಲಾಗದಂತಹವು : ''ಅದನ್ನು ಬರೆದವನು ಇನ್ನೂ ಜೀವಂತವಿದ್ದಾನೆಯೇ ?'' ಹಿಂಸೆಗೆ ಪ್ರಚೋದನೆ ನೀಡುವ ಈ ಮಾತುಗಳನ್ನಾಡಿದ್ದ ವ್ಯಕ್ತಿಯ ಮೇಲೆ ಕಾನೂನು ಕ್ರಮ ಅಗತ್ಯವಾಗಿತ್ತು, ಆದರೆ ಸರ್ಕಾರ ಕ್ರಮ ಕೈಗೊಳ್ಳಲಿಲ್ಲ. ಬದಲಾಗಿ, ಕಾದಂಬರಿಯನ್ನು ಬಹಿಷ್ಕರಿಸುವ ಆಜ್ಞೆಯನ್ನು ಹೊರಡಿಸಿ ತನ್ನ ಜಾತಿ ರಾಜಕೀಯವನ್ನು ಪ್ರಕಟಿಸಿತು, ಸಾಂಸ್ಕೃತಿಕ ಕ್ಷೇತ್ರದಲ್ಲಿ ಗೂಂಡಾಗಿರಿಯನ್ನು ಮಾನ್ಯ ಮಾಡಿತು. ಕರ್ನಾಟಕದ ನ್ಯಾಯಾಲಯವು ಸರ್ಕಾರದ ತೀರ್ಮಾನವನ್ನು ಸರಿಯೆಂದು ಘೋಷಿಸಿತು. ಆ ತೀರ್ಪು ನಿಸ್ಸಂದೇಹವಾಗಿ ಸಿಂಧುವಾದದ್ದೆಂದು ಈಗ ದೆಹಲಿಯ ಸರ್ವೋಚ್ಚ ನ್ಯಾಯಾಲಯವು ದನಿಗೂಡಿಸಿದೆ. ಸಂವಿಧಾನದ ಬೇರೆ ಬೇರೆ ವಿಧಿಗಳ ಬಗ್ಗೆ ವ್ಯಾಖ್ಯಾನ ನೀಡಿರುವ ನ್ಯಾಯಪೀಠವು 'ಧರ್ಮಕಾರಣ'ವನ್ನು ಕೇವಲ ಸಾಹಿತ್ಯ ಮಾಧ್ಯಮದ ಒಂದು ಅಭಿವ್ಯಕ್ತಿಯೆಂದು ಗುರುತಿಸಿರುವಂತೆ ತೋರುವುದಿಲ್ಲ. ಕೃತಿಯನ್ನು ಮುಟ್ಟುಗೋಲು ಹಾಕಿಕೊಳ್ಳುವುದು ವ್ಯಕ್ತಿಯ ಸ್ವಾತಂತ್ರ್ಯದ ಮೊಟಕುಗೊಳಿಸುವಿಕೆಯೆಂದು ಒಪ್ಪಿರುವ ನ್ಯಾಯಾಲಯವು ಸಾರ್ವಜನಿಕ ಹಿತದ ದೃಷ್ಟಿಯಿಂದ ವ್ಯಕ್ತಿಯೊಬ್ಬನ ಅಭಿವ್ಯಕ್ತಿಗೆ ತೊಡಕುಂಟಾಗುವುದು ಅಸಹಜವೇನಲ್ಲವೆಂದು ತಿಳಿಸಿದೆ. ಕೆಲವರ ಧಾರ್ಮಿಕ ಭಾವನೆಗಳಿಗೆ ಪೆಟ್ಟು ಬೀಳುವುದನ್ನು ತಡೆಯಲು ಸರ್ಕಾರಕ್ಕೆ ಬಾಧ್ಯತೆ ಇದೆಯೆಂದು ನ್ಯಾಯಾಲಯವು ಹೇಳಿದೆ. ಇವೇ ನ್ಯಾಯಾಲಯಗಳು ಭೂಮಿ, ವ್ಯಾಪಾರ, ಉದ್ಯಮ, ಸಾರ್ವಜನಿಕ ಸಂಪತ್ತು ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ''ಸಾರ್ವಜನಿಕ ಹಿತ''ವನ್ನು ಆದ್ಯತೆಯ ಪ್ರಶ್ನೆಯಾಗಿ ಪರಿಭಾವಿಸಿಲ್ಲದಿರುವುದು ಅನೇಕ ತೀರ್ಪುಗಳಿಂದ ವ್ಯಕ್ತವಾಗುತ್ತದೆ. ಬೆಂಗಳೂರಿಗೆ ಅನಿಷ್ಟವಾದ 'ನೈಸ್' ಕಂಪನಿಯ ಕತೆಯನ್ನು ಬೇಕಾದರೆ ಒಂದು ಉದಾಹರಣೆಯನ್ನಾಗಿ ನೋಡಬಹುದು. ಮತಧರ್ಮದ ಹೆಸರಿನಲ್ಲಿ ಜನರನ್ನು ಭಾವೋದ್ರೇಕಕ್ಕೆ ಗುರಿಮಾಡುವುದು ಖಂಡಿತವಾಗಿಯೂ ಸಾರ್ವಜನಿಕ ಹಿತವಲ್ಲ. ಭೀಮಣ್ಣ ಖಂಡ್ರೆಯಂಥವರು 'ಧರ್ಮಕಾರಣ'ದ ಬಗ್ಗೆ ಹುಯಿಲೆಬ್ಬಿಸುವಾಗ ಮಾಡಿದ್ದು ಇದನ್ನೇ. ರಾಜ್ಯ ಸರ್ಕಾರವು ಅಂಥವರ ಪಿತೂರಿಯನ್ನು ಹತ್ತಿಕ್ಕಿದ್ದರೆ 'ಸಾರ್ವಜನಿಕರು' ಡಾ॥ ನಾರಾಯಣ ಅವರ ಕಾದಂಬರಿಯ ಬಗ್ಗೆ ಅಷ್ಟೇನೂ ಪ್ರತಿರೋಧ ಒಡ್ಡುತ್ತಿರಲಿಲ್ಲ. ನ್ಯಾಯಾಲಯಗಳು ಇಂತಹ ಅಂಶಗಳನ್ನು ವಿಶ್ಲೇಷಿಕೊಳ್ಳುವುದು ವಿರಳ.

ಜಾತಿ ರಾಜಕಾರಣ ಮಾಡುವವರು ಭಾವೋದ್ರೇಕಕ್ಕೆ ಪ್ರಚೋದನೆ ನೀಡಿರದಿದ್ದರೆ 'ಧರ್ಮಕಾರಣ'ವು ಯಾರದಾದರೂ ಧಾರ್ಮಿಕ ಭಾವನೆಗೆ ಪೆಟ್ಟು ನೀಡುತ್ತಿತ್ತೆ ಎಂಬ ಮೂಲಭೂತ ವಿಚಾರವನ್ನು ನ್ಯಾಯಾಲಯವು ಗಣನೆಗೆ ತೆಗೆದುಕೊಂಡಿಲ್ಲ. ''ಆನು ದೇವಾ ಹೊರಗಣವನು'' ಎಂಬ ಸಂಶೋಧನಾ ಕೃತಿಯೊಂದು ಹೊರಬಂದಿರುವ ಇಂದಿನ ಸಂದರ್ಭದಲ್ಲಿ 'ಧರ್ಮಕಾರಣ'ವು ನಿಜಕ್ಕೂ ಸರ್ವಥಾ ಅನಪಾಯಕಾರಿ ಕೃತಿಯೆಂದು ಹೇಳಬಹುದಾಗಿದೆ. ಬಸವಣ್ಣನವರ ದುರಂತವೆಂದರೆ ಅವರಿಗೆ ಇರುವ ತಥಾಕಥಿತ ಶಿಷ್ಯಕೋಟಿಯು ಅವರ ತತ್ತ್ವಗಳಿಗೆ ಕಿಂಚಿತ್ತೂ ಬೆಲೆ ಕೊಡದಿರುವುದು. ಬಸವಣ್ಣನ್ನೂ ಬಂಡವಾಳವಾಗಿ ಬಿಟ್ಟಿರುವ ಕ್ಷುದ್ರ ರಾಜಕಾರಣವು ನಮ್ಮಲ್ಲಿ ನಡೆಯುತ್ತಿರುವುದು ವೈಜ್ಞಾನಿಕ, ಸೈದ್ಧಾಂತಿಕ, ಜಿಜ್ಞಾಸೆಯ ಅಭಾವವಿರುವುದರಿಂದ ಎಂಬುದನ್ನು ಮನಗಾಣಬೇಕು. ಡಾ॥ ಬಂಜಗೆರೆ ಜಯಪ್ರಕಾಶ್ ಅವರ ವಿರುದ್ಧ ಏಳುತ್ತಿರುವ ಸೊಲ್ಲು ಸಹ ಇದನ್ನೇ ತೋರಿಸುತ್ತದೆ. ಜಾತಿಗಳನ್ನು ಧಿಕ್ಕರಿಸಿದ ಬಸವಣ್ಣ ಹುಟ್ಟಿನಿಂದ ಕೆಳಜಾತಿಯವನೆಂದು ಸಾಬೀತಾದರೆ ಅದರಿಂದ ರೊಚ್ಚಿಗೇಳ ಬೇಕಾದ ಪ್ರಮೇಯವಿಲ್ಲ. ಆದರೆ ಅವನು ಬ್ರಾಹ್ಮಣ ಕುಲಕ್ಕೆ ಸೇರಿದ್ದವನೆಂಬ ಕಲ್ಪನೆಯು ಈ ಬಸವ-ಪಥದವರಿಗೆ ಅದೇಕೋ ರುಚಿಸುತ್ತದೆ. ಬಸವಣ್ಣ ಜಾತಿಯನ್ನು ಗೌಣವಾಗಿರಿಸಿದರೆ ಇವರು ಇತಿಹಾಸವನ್ನು ಗೌಣವಾಗಿಸಬಯಸುತ್ತಾರೆ.

ನ್ಯಾಯಾಲಯದ ಇನ್ನೊಂದು ಪ್ರಕರಣವು 'ಧರ್ಮಕಾರಣ'ದ ಬಗೆಗಿನ ತೀರ್ಪಿಗಿಂತ ಭಿನ್ನವಾಗಿದೆ. ಪುಣೆಯ ಭಂಡಾರ್ಕರ್ ಸಂಶೋಧನಾ ಸಂಸ್ಥೆಯೊಳಕ್ಕೆ ನುಗ್ಗಿ ಬಾಳ ಠಾಕ್ರೆಯ ಶಿವಸೇನೆಯ ಮಂದಿ ಹಲ್ಲೆ ನಡೆಸಿದ್ದದ್ದು ಒಂದು ಪುಸ್ತಕದ ಸಂದರ್ಭದಲ್ಲಿ. ರಿಚರ್ಡ್ ಲೇನ್ ಎಂಬುವನು ಶಿವಾಜಿಯನ್ನು ಕುರಿತು ಬರೆದ ಪುಸ್ತಕ ಅದು. ಮಹಾರಾಷ್ಟ್ರ ಸರ್ಕಾರವು ಅದನ್ನು ಬಹಿಷ್ಕರಿಸಿತ್ತು, ಮುಂಬೈ ನ್ಯಾಯಾಲಯ ಅದನ್ನು ಎತ್ತಿಹಿಡಿದಿತ್ತು. ಆದರೆ ದೆಹಲಿಯ ಸರ್ವೋಚ್ಚ ನ್ಯಾಯಾಲಯವು ಆ ತೀರ್ಪನ್ನು ತಳ್ಳಿಹಾಕಿ ಪುಸ್ತಕವನ್ನು ಮಾರಾಟಕ್ಕೆ ಇಡಬಹುದೆಂದು ತಿಳಿಸಿದೆ. ಆದರೂ ಅದನ್ನು ಇಡಗೊಡುವುದಿಲ್ಲವೆಂದು ಘೋಷಿಸಿರುವ ಠಾಕ್ರೆಯನ್ನು ಸರ್ಕಾರವು ಬಂಧಿಸುವುದಿಲ್ಲ, ಆತನ ಮೇಲೆ ಕಾನೂನು ಕ್ರಮ ಜರುಗಿಸುವುದಿಲ್ಲ. ಆತನ ಘೋಷಣೆಯನ್ನು ನ್ಯಾಯಾಲಯವು ಕೇಳಿಸಿಕೊಳ್ಳುವುದೂ ಇಲ್ಲ! ಮರಾಠಿ ಜನರ ಭಾವನೆಗಳಿಗೆ ರಿಚರ್ಡ್ ಲೇನ್ ಪುಸ್ತಕವು ಧಕ್ಕೆಯುಂಟುಮಾಡುವುದಿಲ್ಲವೆಂದು ಹೇಳಿರುವ ನ್ಯಾಯಾಲಯವೇ ಡಾ॥ ಪಿ. ವಿ. ನಾರಾಯಣ ಅವರ 'ಧರ್ಮಕಾರಣ' ಪುಸ್ತಕದ ಬಗ್ಗೆ ಅನುಚಿತ ತೀರ್ಮಾನ ನೀಡಿರುವುದು ಪ್ರಶ್ನಾರ್ಹವಾಗಿದೆ. ಆದರೆ ಅದನ್ನು ಪ್ರಶ್ನಿಸಲು ಮೂರು ಅಥವಾ ಐವರು ನ್ಯಾಯಮೂರ್ತಿಗಳಿರುವ ಪೀಠದೆದುರು ವಾದ ಮಂಡಿಸಬೇಕು. ೧೯೯೮ರ ಕರ್ನಾಟಕ ನ್ಯಾಯಾಲಯದ ಬಗೆಗಿನ ತೀರ್ಪು ಹತ್ತು ವರ್ಷಗಳ ನಂತರ ಹೊರಬಿದ್ದಿದೆ; ಈಗ ಇನ್ನೊಂದು ನ್ಯಾಯಪೀಠದೆದುರು ಹೋದರೆ ತೀರ್ಪು ಬರಲು ಇನ್ನೆಷ್ಟು ಕಾಲ ಬೇಕಾಗುತ್ತದೋ ತಿಳಿಯದು. ಅದಕ್ಕೆಲ್ಲಾ ಯಾರಿಗೆ ವ್ಯವಧಾನವಿದೆ, ಸೌಕರ್ಯವಿದೆ! ಒಟ್ಟಿನಲ್ಲಿ ನಮ್ಮ ರಾಜ್ಯವು 'ಧರ್ಮಕಾರಣ'ದ ವಧೆಯನ್ನು ಕಂಡಿದೆಯೆಂದು ವ್ಯಸನದಿಂದ ಹೇಳಬೇಕಾಗಿದೆ. ಇದಕ್ಕೆ ಪರಿಹಾರವೇನಾದರೂ ಇದೆಯೆ ? ಮೊಕದ್ದಮೆಗೆ ಸಾಕ್ಷ್ಯಾಧಾರಗಳೆಂದು ಹಲವು ಇವೆ. ಅವುಗಳ ಪೈಕಿ ಪುಸ್ತಕದ ಇಂಗ್ಲಿಷ್ ಅನುವಾದವೂ ಒಂದು. ಎಲ್ಲ ಸಾಕ್ಷ್ಯಾಧಾರಗಳನ್ನೂ ತೀರ್ಪಿನ ಸಮೇತ ಇಂಗ್ಲಿಷ್‌ನಲ್ಲಿ ನ್ಯಾಯಾಲಯವೇ ಪ್ರಕಟಿಸಬಹುದು ಅಥವಾ ನ್ಯಾಯಾಲಯದ ನಿಯಮಗಳನ್ನು ಅನುಸರಿಸಿ ಬೇರೆ ಯಾರಾದರೂ ಅಷ್ಟನ್ನೂ ಪ್ರಕಟಿಸಬಹುದು.


ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
☎ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೨೨೪೩೦೨




### ಮೇ ಸಂಚಿಕೆ

'**ಹೊ**ಸತು' ಮೇ ತಿಂಗಳ ಸಂಚಿಕೆಯಲ್ಲಿ ರಾಷ್ಟ್ರಗೀತೆ ಹಾಗೂ ಇನ್ಫೋಸಿಸ್ ನಾರಾಯಣ ಮೂರ್ತಿ ಪ್ರಸಂಗ ಕುರಿತ ಸಂಪಾದಕೀಯ (ಪು. ೯) ಓದಿದಾಗ, ಅರ್ಧ ಶತಮಾನದ ಹಿಂದೆ ಜರುಗಿದ ಘಟನೆಯೊಂದು ನೆನಪಾಯಿತು.

ಸ್ವತಂತ್ರ ಭಾರತದ ಮೊಟ್ಟಮೊದಲ ಸಾರ್ವತ್ರಿಕ ಚುನಾವಣೆ ೧೯೫೨ರಲ್ಲಿ ಜರುಗಿತಷ್ಟೆ. ಚುನಾವಣಾ ಪ್ರಚಾರಕ್ಕಾಗಿ ಜನಪ್ರಿಯ ನೇತಾರ ಆಚಾರ್ಯ ಜೆ. ಬಿ. ಕೃಪಲಾನಿಯವರು ಮೈಸೂರಿಗೆ ಬಂದಿದ್ದರು. ಮಹಾರಾಜ ಕಾಲೇಜಿನ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಅವರು ಮಾತಾಡುವ ಕಾರ್ಯಕ್ರಮವೂ ಏರ್ಪಾಡಾಗಿತ್ತು. ಕಾರ್ಯಕ್ರಮ ಶುರುವಾಗುವ ಮುನ್ನ 'ನಾಡಗೀತೆ'ಯನ್ನು ಹಾಡುವ ಸಲುವಾಗಿ ಎಲ್ಲರೂ ಎದ್ದು ನಿಂತುಕೊಳ್ಳಬೇಕೆಂದು ಅಧ್ಯಕ್ಷರು ವಿನಂತಿಸಿದರು. 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಗೀತೆಯ ಧ್ವನಿಮುದ್ರಿತ ಹಾಡು ಗೊರಗುಟ್ಟುತ್ತಾ ಬಿತ್ತರವಾಯಿತು. ಅದನ್ನು ಆಲಿಸಿ ಭ್ರಮನಿರಸನರಾದ ಕೃಪಲಾನಿಯವರು ಒಡನೆಯೇ ಪ್ರತಿಕ್ರಿಯಿಸಿದರು: 'ಭಾರತದ ಎರಡು ಪ್ರಮುಖ ಸಂಗೀತ ಪದ್ಧತಿಗಳಲ್ಲಿ ಕರ್ನಾಟಕ ಸಂಗೀತವೂ ಒಂದು; ಈ ಭಾಗದ ಜನರಿಗೆ ಅದು ಹೆಮ್ಮೆ ಪಡುವಂತಹದ್ದಾಗಿರಬೇಕು. ನಿಮ್ಮ ಸ್ವಾಭಿಮಾನದ ಸಂಕೇತವಾದ ನಾಡಗೀತೆಯನ್ನು ಸುಶ್ರಾವ್ಯ ಹಾಗೂ ಧ್ವನಿಪೂರ್ವಕವಾಗಿ ಹಾಡುವ ಪರಿಜ್ಞಾನ ನಿಮಗಿರಬೇಡವೆ? ಅದರ ರೆಕಾರ್ಡ್ ನುಡಿಸುವ ಮೂಲಕ ನಾಡಗೀತೆಗೆ ಅವಮಾನ ಮಾಡಿದಂತಾಗಿದೆ' ಎಂದು ಸಂಘಟಕರನ್ನು ತರಾಟೆಗೆ ತೆಗೆದುಕೊಂಡರು.

ಇತ್ತೀಚಿನ ದಿನಗಳಲ್ಲಿ ಬುದ್ಧಿಜೀವಿಗಳು, ಕ್ರೀಡಾಪಟುಗಳೇ ಮುಂತಾದವರು ರಾಷ್ಟ್ರಧ್ವಜಕ್ಕೂ ಅವಮಾನ ಪಡಿಸುವ ರೀತಿಯಲ್ಲಿ ವರ್ತಿಸಿದ ಪ್ರಕರಣಗಳು ವರದಿಯಾಗಿವೆ. ಅಂದರೆ ರಾಷ್ಟ್ರದ ಘನತೆ, ಗೌರವ ಹಾಗೂ ಶಕ್ತಿಯ ಸಂಕೇತಗಳಾಗಿರುವ ರಾಷ್ಟ್ರಗೀತೆ, ರಾಷ್ಟ್ರಧ್ವಜಗಳಿಗೆ ಗೌರವ ತೋರುವಲ್ಲಿ ವ್ಯಾಪಕ ತಿಳುವಳಿಕೆಯ ಕೊರತೆಯಿದೆ. ಆ ದಿಸೆಯಲ್ಲಿ ಇನ್ನೂ ಹೆಚ್ಚಿನ ಪ್ರಚಾರವಾಗಬೇಕಿದೆ.

ಕುಪ್ಪಳ್ಳಿ — *ಡಾ।। ಎಚ್. ಡಿ. ಚಂದ್ರಪ್ಪಗೌಡ*

'ಯಜ್ಞಫಲ' ಸಂಪಾದಕೀಯವು ಅತ್ಯಂತ ಸೂಕ್ತವಾಗಿದೆ ಎನ್ನುವುದಕ್ಕಿಂತ ಸುಂದರ ವಿಡಂಬನೆಯಾಗಿದೆ. ಅದನ್ನು ಓದಿದೊಡನೆ ನಕ್ಕೂ ನಕ್ಕೂ ಸುಸ್ತಾದೆ. 'ಮಹೇಶ್ ಜೋಶಿಯ ದುರ್ದರ್ಶನ...' ಎಂಬ ಪದಗಳಂತೂ ಕಣ್‌ಕಟ್ಟಿದಂತಾಗಿ ನಗೆ ತಡೆಯದೆ ಹೊಟ್ಟೆ ಬಿರಿಯುವಂತಾಗಿದೆ. ಅದಕ್ಕಾಗಿ ತಮ್ಮಿಂದ ಕಾಂಪೆನ್ಸೇಷನ್ ಕೇಳಬೇಕೆಂದೆನಿಸಿದೆ. ಈ ಬಗೆಯ ವ್ಯಂಗ್ಯೋಕ್ತಿಯ ಸಂಪಾದಕೀಯಗಳನ್ನು ಇನ್ನಷ್ಟು-ಮತ್ತಷ್ಟು ನೀಡತಕ್ಕದ್ದು. ಕೇವಲ ಎಡಪಂಥೀಯ ಘನಗಂಭೀರ ಶೈಲಿಯ ಟೀಕಾ ಪ್ರಹಾರಕ್ಕಿಂತ ವ್ಯಂಗ್ಯೋಕ್ತಿಯೇ ಹೆಚ್ಚು ಶಕ್ತಿಶಾಲಿಯಾದೀತು. ಅಲ್ಲಾ ಮಾರಾಯ್ರೆ, ಯಾವ ಯಾವುದೋ ಪೌರಾಣಿಕ 'ಯಜ್ಞಫಲ'ಗಳ ಪೂರ್ವ ನಿರ್ದೇಶನ ಒಕ್ಕಣಿಸಿದ್ದೀರಿ. ಪರಂತು 'ಪುತ್ರ ಕಾಮೇಷ್ಟಿ ಯಜ್ಞ'ವನ್ನು ಹೆಸರಿಸಲಿಲ್ಲವಲ್ಲ? ಆ ಯಾಗದ ಫಲವತ್ತತೆಯ ಕುರಿತು ಬ್ರಹ್ಮಚಾರಿಗಳು ಬರೆಯಕೂಡದು ಎಂದು ನಿಷೇಧವೇನಾದರೂ ಇದೆಯೆ?

ಬೆಳಗಾವಿ — *ಅನಂತ ಕಲ್ಲೋಳ*

### ಮೂಢನಂಬಿಕೆಯ ನಿರ್ಮೂಲನೆ...

ಮಾನವನ ಬದುಕಿನಲ್ಲಿ ಹಾಸುಹೊಕ್ಕಾಗಿ ಬೆಳೆದು, ಶಕ್ತಿಯಾಗಿ ಇಂದು ನಂಬಿಕೆಯ ತಳಹದಿಯನ್ನೆ ಅಲ್ಲಾಡಿಸುತ್ತಿರುವ ಮೂಢನಂಬಿಕೆಯ ವಿಚಾರವನ್ನು ಸರಳಶಬ್ದಗಳಲ್ಲಿ ವಾಸ್ತವಾಂಶಗಳಿಂದ ಮೂಡಿಬಂದಿರುವ ಉಪಯುಕ್ತ




ಲೇಖನವಿದು. ಇರುವು ಮತ್ತು ಅರಿವುಗಳ ಸ್ಪಷ್ಟ ನಿಲುವಿಲ್ಲದೆ, ನಾವು ಏನನ್ನು ಹೇಗೆ ಮತ್ತು ಏಕೆ ಮಾಡುತ್ತೇವೆ ಎಂಬ ತಿಳಿವಳಿಕೆ ಇಲ್ಲದೆ ಇರುವುದರಿಂದಾಗಿ ಮನುಷ್ಯ ಕೆಟ್ಟು ಸಹಿಸುತ್ತಾನೆಯೇ ಹೊರತು ಕೊಟ್ಟು ಸಹಿಸುವುದಿಲ್ಲ. ಶಾಂತ, ಶಿಸ್ತುಬದ್ಧ ಹಾಗೂ ಸುಖಮಯ ಬದುಕಿಗಾಗಿ ಧಾರ್ಮಿಕ ವಿಧಿ ವಿಧಾನಗಳನ್ನು ಅಳವಡಿಸಿಕೊಂಡ ಮಾನವ ನಂತರದ ದಿನಗಳಲ್ಲಿ ಮತ, ಧರ್ಮ, ಭೇದಗಳನ್ನು ಬೆಳೆಸಿ, ದೇವರು ಹಾಗೂ ದೇವಾಲಯಗಳು ವ್ಯಾವಹಾರಿಕ ತಾಣಗಳಾಗಿ ಭಕ್ತಿ ಭಯೋತ್ಪಾದನೆಯಾಗಿ ಪರಿವರ್ತನೆಗೊಂಡಿದ್ದನ್ನು ನಾವು ಆಚರಣೆಯನ್ನಾಗಿಸಿದೆವು. ಸಮಾಜವನ್ನು ನಿರಂತರ ಹಿಂಸೆಗೆ ಬಲಿ ನೀಡಿದೆವು. ಇಂದು ಹಬ್ಬಗಳು ಅಂಧಾಭಿಮಾನದ ಸಡಗರಗಳಾಗಿ, ಜೀವನದ ಮೌಢ್ಯಗಳಾಗಿ, ಜನಾಂಗ ದ್ವೇಷಗಳ ಉತ್ಸವಗಳಾಗಿ ಅಟ್ಟಹಾಸವನ್ನು ಮೆರೆಯುತ್ತಿರುವುದನ್ನು ನಾವು ಕೃತಜ್ಞತಾಪೂರ್ವಕವಾಗಿ ನೋಡುತ್ತಿದ್ದೇವೆ ಎಂದರೆ ನಮ್ಮ ನವ್ಯ ನಾಗರಿಕತೆಯಲ್ಲಿ ಕಂಡುಕೊಂಡ ಸಾಮಾಜಿಕ ಕಳಕಳಿ, ವಿಶ್ವವೊಂದು ಕುಟುಂಬ ಎಂಬ ತತ್ತ್ವಗಳು ಎಲ್ಲಿ ಕಳೆದುಹೋದವು ಎಂಬುದನ್ನು ಗುರುತಿಸಲಾಗದಷ್ಟು ಮೂಢನಂಬಿಕೆಯಲ್ಲಿ ಬೆರೆತುಹೋಗಿದ್ದೇವೆ.

ಬೆಂಗಳೂರು — *ನರೇಂದ್ರ ಸಿರಕಜೆ*

ಈ ತಿಂಗಳ ಅತ್ಯುತ್ತಮ ಲೇಖನವೆಂದರೆ, ಪ್ರೊ।। ಕೆ. ಎಸ್. ಭಗವಾನ್ ಬರೆದ 'ಮೂಢನಂಬಿಕೆಯ...' ಲೇಖನ. ನಿಜವಾದ ನಿಸರ್ಗ ಕಾಳಜಿ ಉಳ್ಳವರು ಈ ಲೇಖನದಿಂದ ಪ್ರಭಾವಿತರಾಗೋದು ಗ್ಯಾರಂಟಿ. ಆದ್ರೆ 'ಮತಾಂಧರಿಗೆ' ಇದು ಹಿಡಿಸದಿರಬಹುದು. ಈ ಲೇಖನ ನಿಜಕ್ಕೂ ಉತ್ತಮ ನೀತಿಪಾಠವಾಗಿದೆ!

ಕಿತ್ತೂರು — *ಖುರ್ಷೀದ್ ಆಲಂ ಮೋಮಿನ*

### ಕನ್ನಡಕ್ಕೆ ಮಾರಕವಾಗುವ ಇಂಗ್ಲಿಷ್ ನಮಗೆ ಬೇಡ

ಇಂಗ್ಲಿಷ್‌ನವರು ಬಂದು ಭಾರತವನ್ನು ದೋಚಿಕೊಂಡು ಹೋಗುವುದರ ಜೊತೆಗೆ ಅವರ ಕುಸಂಸ್ಕೃತಿಯನ್ನು ಇಲ್ಲಿ ಬಿಟ್ಟುಹೋಗಿದ್ದಾರೆ. ನಾವು ಅದನ್ನು ನಮ್ಮದೇ ಎನ್ನುವಷ್ಟರಮಟ್ಟಿಗೆ ತಬ್ಬಿಕೊಂಡಿದ್ದೇವೆ. ಸಾಲದ್ದಕ್ಕೆ ಜಾಗತೀಕರಣದಿಂದ ಬಹುರಾಷ್ಟ್ರೀಯ ಕಂಪನಿಗಳು ನೂರಾರು, ಬಹುಶಃ ಸಾವಿರಾರೇ, ಸಾಮಾನುಗಳನ್ನು ನಮ್ಮ ದೇಶದೊಳಕ್ಕೆ ನೂಕಿದ್ದಾರೆ. ವಿವೇಚನೆ ಇಲ್ಲದೆ ಇವುಗಳನ್ನೆಲ್ಲಾ ಉಪಯೋಗಿಸುತ್ತಾ ನಮ್ಮ ಸಂಸ್ಕೃತಿಯನ್ನು ಮರೆತೇ ಹೋಗುವ ಮಟ್ಟಕ್ಕೆ ನಾವು ತಲುಪಿದ್ದೇವೆ. ಈ ರೀತಿ ಪಾಶ್ಚಿಮಾತ್ಯ ನಾಗರಿಕತೆಯನ್ನು ಅನುಕರಣೆ ಮಾಡುತ್ತಿರುವುದು ಶೋಚನೀಯ ಮತ್ತು ಖಂಡನಾರ್ಹವಾದುದು.

ಈಗ ನಮ್ಮ ರಾಜ್ಯದಲ್ಲಿ ಇಂಗ್ಲಿಷ್ ಬಗ್ಗೆ ಎದ್ದಿರುವ ವ್ಯಾಮೋಹ ಇದಕ್ಕೆ ಸೂಕ್ತ ಉದಾಹರಣೆಯಾಗಿದೆ. ಇದು ಕೆಲಸ ಕೊಡಿಸುತ್ತದೆ. ಪ್ರಪಂಚದಲ್ಲಿ ಎಲ್ಲೇ ಬೇಕಾದರೂ ಹೋಗಬಹುದು. ಭಾರತದಲ್ಲಂತೂ ಕಂಪ್ಯೂಟರ್ ಇಂಗ್ಲಿಷ್‌ನಲ್ಲೇ ಇರುತ್ತದೆಂದೇ ತಿಳಿದಿರಬಹುದು. ಯೂರೋಪಿನಲ್ಲಿ ಇಂಗ್ಲೆಂಡ್ ವಿನಾ ಬೇರೆ ಯಾವ ದೇಶವೂ ಇಂಗ್ಲಿಷ್ ಕಲಿಯದು. ರಷ್ಯಾ, ಚೈನಾ ಕೂಡ ಅವರ ಭಾಷೆಯನ್ನು ಬಿಟ್ಟುಕೊಡವು. ಇಂಗ್ಲಿಷ್ ಶಿಕ್ಷಣ ಮಕ್ಕಳ ಬಹಳ ಸಮಯವನ್ನು ತೆಗೆದುಕೊಳ್ಳುವುದರ ಜೊತೆಗೆ ಅವರ ಬುದ್ಧಿಬೆಳವಣಿಗೆ, ಕಲಿಕೆಯ ಗತಿ ಮತ್ತು ವೇಗ ಬಹಳ ಮಂದಗತಿಯಲ್ಲಿ ಸಾಗಿ ಅವರ ವಿಕಾಸ ನಿಧಾನವಾಗುತ್ತದೆ. ಅವರ ಮಾತೃಭಾಷೆಯಲ್ಲಿಯೇ ಆದರೆ ಇವಾವೂ ತೊಂದರೆ ಇಲ್ಲದೆ ಮಗುವಿನಿಂದ ಹಿಡಿದು ಯುವಕರಾದಿಯಾಗಿ ಗ್ರಹಿಕೆಯ ಪ್ರಮಾಣ ಬಹಳ ಉತ್ತಮವಾಗಿದ್ದು ವಿಕಾಸದ ತೀವ್ರತೆ ತುಂಬಾ ಹೆಚ್ಚಾಗಿರುತ್ತದೆ. ದಿವಂಗತ ಸರ್ ಸಿ. ವಿ. ರಾಮನ್‌ರ ಅಭಿಪ್ರಾಯದಂತೆ ಭಾರತದಲ್ಲಿ ವಿಜ್ಞಾನ ಶಿಕ್ಷಣ ಮಾತೃಭಾಷೆಯಲ್ಲಿ ನಡೆದಿದ್ದರೆ, ಇಡೀ ಪ್ರಪಂಚದಲ್ಲಿ ಭಾರತ ಈಗಾಗಲೆ ಅಗ್ರಗಣ್ಯ ರಾಷ್ಟ್ರವಾಗುತ್ತಿತ್ತು. ಇಂಗ್ಲಿಷ್ ಕಲಿತ ಅನೇಕರಿಗೆ ಅದನ್ನು ಕಲಿಯಲು ಪಟ್ಟ ಶ್ರಮ ಮತ್ತು ಆ ವೇಳೆಯಲ್ಲಿ ವಿಷಯವನ್ನು ಅರ್ಥಮಾಡಿಕೊಳ್ಳಲು ಆಗುತ್ತಿದ್ದ ತೊಂದರೆಯನ್ನು ಮರೆಯುವಂತಿಲ್ಲ. ಮುಂದಿನ ಪೀಳಿಗೆ ಈ ತೊಂದರೆಗೆ ಸಿಗದೆ ಅವರ ಭವಿಷ್ಯವಾದರೂ

ಸುಲಲಿತವಾಗಿ ನಡೆಯಲಿ ಎಂದು ಹಾರೈಸೋಣ.

ಹನುಮಂತಪುರ **ಅಶ್ವತ್ಥನಾರಾಯಣ ಸರ್ವೋದಯ**

**ಹೀಗೊಂದು ಕಿಡಿ**

ಕೆಲವೇ ಜನರ ಸುಖಕ್ಕಾಗಿ
ಹಳ್ಳಿ, ಹೊಲಗದ್ದೆಗಳ
ಬಂಜರಾಗಿಸುತ್ತ
ಐಲು ದೊರೆಗಳು ನಿರ್ಮಿಸುತ್ತಿರುವ
ಐಷಾರಾಮಿ ಗಗನ ಚುಂಬಿ ಕಟ್ಟಡಗಳು
ವಿಲಾಸಿ ಅಪಾರ್ಟ್‌ಮೆಂಟ್‌ಗಳು –
ಅವರ ಒಡಲಿನ ಹೆದ್ದಾರಿಗಳನ್ನೂ ಹಿಗ್ಗಿಸುತ್ತಿವೆ.

ಇವರಿಗಾಗಿ ನೆಲೆ ಕಳೆದುಕೊಂಡ
ಆ ಹಳ್ಳಿಗರು
ನಗರದ ಹಣ್ಣಿನಂಗಡಿಯ ಕೆಳಗೆ ಬಿದ್ದ
ಕೊಳೆತ ಸೇಬು,
ಮೂಸಂಬಿ, ದ್ರಾಕ್ಷಿಗಳಿಗಾಗಿ
ಕೈ ಚಾಚುತ್ತ,
ಬೀದಿಬೀದಿಗಳಲ್ಲಿ ಶಾಪಗ್ರಸ್ತರಂತೆ ತಿರುಗುತ್ತಿದ್ದಾರೆ.

ಇವರ ಜೈಲು ಸೇರಿಸಲು
ಸುಳ್ಳು ಅಪರಾಧಗಳನ್ನು
ಸೃಷ್ಟಿಸಲಾಗುತ್ತಿದೆ;
ಬೆಳಕಿನ ಕಿಡಿಯನ್ನು
ಮೇಣದ ಬತ್ತಿ ಹಿಡುಕುವಷ್ಟೇ
ಸಲೀಸಾಗಿ ಆರಿಸಲಾಗುತ್ತಿದೆ.

ಬೆಂಗಳೂರು **ನಾಗತಿಹಳ್ಳಿ ರಮೇಶ**

**ಬೀಸುತಿದೆ ಪಶ್ಚಿಮದ ಗಾಳಿ !**

ಬೀಸುತಿದೆ... ಪಶ್ಚಿಮದ ಗಾಳಿ
ವಿವಿಧ ರೂಪವ ತಾಳಿ,
ತಿಳಿಗಾಳಿ, ಸುಳಿಗಾಳಿ, ಸುಂಟರಗಾಳಿಯಾಗಿ
ಬೀಸುತಿದೆ ಪಶ್ಚಿಮದ ಗಾಳಿ.

ಮುತ್ತಿಡುವ ತಿಳಿಗಾಳಿಗೆ ಮನಸೋತು
ಮೈ ಮುಸುಕುಗಳ ಕಿತ್ತೊಗೆದು,
ನವ ಚೇತನವಿದೆಂದು ಭ್ರಮಿಸಿ, ಸ್ವಾಗತಿಸಿ,
ಬೆತ್ತಲಾಗುತ್ತಿರುವವರ ''ಸಮಾಜ ಸನ್ನಿ''ಯ ನಡುವೆ
ಬೀಸುತಿದೆ... ಪಶ್ಚಿಮದ ಗಾಳಿ.

ಹೊಸ ಗಾಳಿಯ ಆಹ್ವಾನಕ್ಕೆ, ಇದ್ದ
ಕಿಟಕಿ ಬಾಗಿಲುಗಳನ್ನು ಮುರಿದು,
ತಡೆಗೋಡೆಗಳನ್ನೂ ಹೊಡೆದುರುಳಿಸಿ
''ಜಾಗತೀಕರಣ''ವೆಂಬ ಜಾಣ ಹೆಸರಿಟ್ಟು,
ಬೀಳುವ ಕಿಟಕಿ, ಜಂತಿ, ಬಾಗಿಲುಗಳಿಂದಲೇ
ಬೇಳೆ ಬೇಯಿಸಿ ಮುಕ್ಕುವ
ಮನೆಮುರುಕರ ನಡುವೆ
ಬೀಸುತ್ತಿದೆ... ಪಶ್ಚಿಮದ ಗಾಳಿ.

ಮುರಿದ ಕಿಟಕಿ, ಬಾಗಿಲು,
ಒಡೆದ ಗೋಡೆ, ಹೀಗೆ, ಎಲ್ಲೆಂದರಲ್ಲಿ
ಬಿರುಗಾಳಿ ನುಗ್ಗಿ, ಮನೆಯ ಸರಕುಗಳನೆಲ್ಲಾ ಹಾರಿಸಿ,
ಧೂಳು ತುಂಬಿ ಮಸುಕಾಗಿಸಿ,
ಹಾದಿಬೀದಿಯ, ಮುರಿದ, ಹರಿದ ವಸ್ತುಗಳ ಜೊತೆ
ಕಸ-ಕಡ್ಡಿ, ಎಂಜಲೆಲೆಗಳನೆಲ್ಲಾ
ಮನೆಯಂಗಳಕೆ ತಂದು ತುಂಬುತ್ತಿದ್ದರೂ
''ಪ್ರಗತಿಪೂರ್ವದ ಸ್ಥಿತಿ'' ಇದೆಂದು ನಂಬಿಸಿ,
ನಗ್ನ ನರ್ತನ ಮಾಡುವವರ ನಡುವೆ
ಬೀಸುತ್ತಿದೆ... ಪಶ್ಚಿಮದ ಗಾಳಿ.

ಹಿರಿಯರು ಬಹುಕಾಲದಿಂದ, ಬಹು
ಶ್ರಮದಿಂದ ಸಾಕಿ ಬೆಳೆಸಿದ ''ಕಾಮಧೇನು''ಗಳನ್ನು
ಇಷ್ಟುದಿನ ಹಿಂಡಿ ಹಿಪ್ಪೆಮಾಡಿ,
ಮೂಳೆ ಚರ್ಮ ಮಾತ್ರ ಬಿಟ್ಟಿದ್ದು ಸಾಲದೆ,
ನಷ್ಟದ ಹಣೆಪಟ್ಟಿ ಕಟ್ಟಿ ''ಖಾಸಗೀಕರಣ''ದ ಹೆಸರಲ್ಲಿ
ಕಟುಕರಿಗೆ ಮಾರುವವರ ನಡುವೆ
ಬೀಸುತ್ತಿದೆ ಪಶ್ಚಿಮದ ಗಾಳಿ.

ಬಿರುಗಾಳಿಯ ಹೊಡೆತಕ್ಕೆ, ಸುಂಟರಗಾಳಿಯ ಸುಳಿಗೆ ಸಿಕ್ಕಿ,
ನಲುಗಿ ನುಗ್ಗಾಗಿ, ಜೀವ ತೆರುತ್ತಿರುವವರೆಷ್ಟೋ ಮಂದಿ.
ರೈತ, ಕಾರ್ಮಿಕ, ಸಣ್ಣ ಉತ್ಪಾದಕ... ಹೀಗೆ
ಸಣ್ಣವರನೆಲ್ಲಾ ಸಣ್ಣವರಾಗಿಸುವ
ದೊಡ್ಡವರನ್ನು ದೊಡ್ಡವರಾಗಿಸುವ ಈ
ಪರಮೌದಾರ್ಯದ ಪ್ರಕ್ರಿಯೆಯೆ
ಪ್ರಗತಿಗೆ ರಹದಾರಿಯೆಂದು ಬೊಗಳೆ ಬಿಡುವ
ಜಾಣ ಕುರುಡರ ನಡುವೆ
ಬೀಸುತಿದೆ ಪಶ್ಚಿಮದ ಗಾಳಿ.

ತುಮಕೂರು **ಜಿ. ಎನ್. ಕೆಂಪಯ್ಯ**

**ತೇಜಸ್ವಿಯವರ ಕೊನೆಯ ಪತ್ರ ಕುರಿತು...**

ಕೈಯ್ಯಲ್ಲೊಂದು ಸ್ಪಾನರ್, ಸಿತಾರ್, ಕ್ಯಾಮೆರಾ, ಲೇಖನಿ, ಮೀನುಗಾಳ, ಕುಂಚ, ಈಸಿಮೌಸ್ ಮುಂತಾದುವನ್ನು ಹಿಡಿದು ಆಯಾ 'ವಸ್ತು ನಿರ್ಮಾಣ' ಗಳನ್ನು ವಿಶ್ಲೇಷಣೆ ಮತ್ತು ಸಂಶ್ಲೇಷಣೆ ಮಾಡಬಲ್ಲ ಏಕಮಾತ್ರ ಪ್ರತಿಭೆಯೇ ಕೆ. ಪಿ. ಪೂರ್ಣಚಂದ್ರ ತೇಜಸ್ವಿ. ನವ್ಯ ಚಳುವಳಿಯ ಉತ್ಕರ್ಷಕಾಲದಲ್ಲಿ ವ್ಯಕ್ತಿವಿಶಿಷ್ಟ ಸಿದ್ಧಾಂತವೆಂಬ ಹೊಸನೀರು ಉಕ್ಕುಕ್ಕಿ ಹರಿಯುತ್ತಿತ್ತು. ಇಂಥ ಉಕ್ಕುವ ಸೊಕ್ಕುನೀರಿನಲ್ಲಿ ಸ್ವಂತಚಲನೆ ಸಾಧ್ಯವಾಗದೆ ಕೊಚ್ಚಿಕೊಂಡು ಹೋಗುವ ಕಸ-ಕಡ್ಡಿ ವ್ಯಕ್ತಿತ್ವ ತೇಜಸ್ವಿಯವರಲ್ಲಿ ಕಂಡುಬರುವುದಿಲ್ಲ. ಪ್ರವಾಹದ ವಿರುದ್ಧ ಈಜುತ್ತಾ ಹೊಸ ದಿಗಂತಗಳೆಡೆಗೆ ಸಾಗುವ ಜೀವಂತ ಚಲನೆಯುಳ್ಳ ಹತ್ತು ಮೀನಿನಂತೆ ತೇಜಸ್ವಿ ನನಗೆ ಕಂಡಿದ್ದಾರೆ. ಇಪ್ಪತ್ತನೇ ಶತಮಾನದ ಆಧುನಿಕ ಕನ್ನಡ ಸಾಹಿತ್ಯದ ಎಲ್ಲ ಬಗೆಯ ವರ್ಗೀಕರಣಗಳನ್ನು ಮೀರಿ, ಏಕಗ್ರಾಹಕವಾದ 'ನಿಜದುದಯ'ವನ್ನು ನಮ್ಮ ದೃಷ್ಟಿಯಲ್ಲಿಟ್ಟುಕೊಂಡು ಯೋಚಿಸಿದರೆ, 'ಮಾನವತಾವಾದ' ಮತ್ತು 'ಇಕಾಲಜಿ' ಗಳೆಂಬ ವಿರುದ್ಧ ಧ್ರುವಗಳು ಕಂಡುಬರುತ್ತವೆ. ಮಾನವತಾವಾದವನ್ನು ನಂಬಿ ಬರೆಯುವ ಲೇಖಕನ ಕಣ್ಣುಗಳು ಬಾವಿಕಪ್ಪೆಯಂತಿದ್ದರೆ, 'ಇಕಾಲಜಿ'ಯಲ್ಲಿ ನೆಲೆನಿಂತು ಬರೆಯುವ ಲೇಖಕನ ಕಣ್ಣುಗಳು ಬಾನಾಡಿಯಂತೆ ಅನಿಕೇತನವಾಗಿರುತ್ತವೆ. ತೇಜಸ್ವಿಯವರ ಹಿರಿಮೆಯೆಂದರೆ, ಮಾನವತಾವಾದವನ್ನು ಇಕಾಲಜಿಯ ಆತ್ಮವನ್ನಾಗಿ ಪರಿವರ್ತಿಸಿ, ವಿರುದ್ಧಧ್ರುವಗಳನ್ನು ಒಂದಾಗಿ ಬೆಸೆದದ್ದು. ತೇಜಸ್ವಿಯವರ ಕಥನಗಳು ನಿಜವಾದ ಅರ್ಥದಲ್ಲಿ ಪರಿಸರದ ಕತೆಗಳಾಗಿವೆ. ಇದು ಶುಷ್ಕವಾದ ಪರಿಸರಶಾಸ್ತ್ರವೆಂಬ ಅಂಕಿ-ಅಂಶಗಳಿಂದ ಹುಟ್ಟಿದ್ದಲ್ಲ. ಜೀವನಾನುಭವದ ಸಹಜಯೋಗದಿಂದ ಮೂಡಿದ ಮಧುಬನಿ ಕಲೆಯನ್ನು ತೇಜಸ್ವಿಯವರಲ್ಲಿ ನೋಡುತ್ತೇವೆ.

ಕುವೆಂಪು ಮತ್ತು ತೇಜಸ್ವಿಯವರ ಗ್ರಹಿಕೆ ಹಾಗೂ ಚಿಂತನಾಕ್ರಮಗಳಲ್ಲಿ ಸಾಮ್ಯವಿರುವಂತೆಯೇ ಮೂಲಭೂತವಾಗಿ ವಿಭಿನ್ನ ಆಯಾಮಗಳನ್ನು ಮನಗಾಣಬಹುದು. ಕಾನೂರು ಹೆಗ್ಗಡಿತಿಯ ಹೂವಯ್ಯ ಮತ್ತು ಮಲೆಗಳಲ್ಲಿ ಮದುಮಗಳು – ಮುಕುಂದಯ್ಯನಿಗಿರುವ ವಿಭಿನ್ನ ಆಯಾಮಗಳು ಕುವೆಂಪು ಮತ್ತು ತೇಜಸ್ವಿಯವರಲ್ಲಿ ಕಂಡುಬರುತ್ತವೆ. ಆದರ್ಶವಾದಿ ಹೂವಯ್ಯ ಮತ್ತು ವಾಸ್ತವವಾದಿ ಮುಕುಂದಯ್ಯನನ್ನು ಅರಿತುಕೊಂಡರೆ ಈ ತೌಲನಿಕ ರೂಪಕದ ಔಚಿತ್ಯ ಅರ್ಥವಾಗುತ್ತದೆ. ಕುವೆಂಪು ಮೈಸೂರಿನಲ್ಲಿ ಕಟ್ಟಿಕೊಂಡ ಮನೆಯ ಹೆಸರು ಉದಯರವಿ. ಇದು ಕೇವಲ ನಿಸರ್ಗದ ಸೂರ್ಯೋದಯವನ್ನು ಸೂಚಿಸುವುದಿಲ್ಲ. ಇಂಗ್ಲಿಷ್ ವಿದ್ಯಾಭ್ಯಾಸ, ದಾಸ್ಯ ವಿಮೋಚನೆ, ಸ್ವಾತಂತ್ರ್ಯ ಪ್ರಾಪ್ತಿಗಳ ಹಿನ್ನೆಲೆಯಲ್ಲಿ ನೋಡಿದರೆ ನಮ್ಮ ದೇಶ, ಸಂಸ್ಕೃತಿ, ವ್ಯಕ್ತಿತ್ವ ಮತ್ತು ನಾಗರಿಕತೆಗಳಿಗೆ ಸಂಭವಿಸಬೇಕಾದ ಒಂದು ಹೊಸ ಬೆಳಗಿನ ಕಾವ್ಯಪ್ರತಿಮೆಯಂತೆ 'ಉದಯರವಿ' ಎಂಬ ನಾಮಕರಣ ಕಂಡುಬರುತ್ತದೆ. ಆದರೆ, ಇಂಥ ಒಂದು ನವೋದಯ ಬರಬರುತ್ತಾ ನೆತ್ತಿ ಸುಡುವ ಉರಿಬಿಸಿಲಾಗಿ ಬದಲಾಯಿಸಿದೆ. ಜನಸಂಖ್ಯಾಸ್ಫೋಟ, ನಿರುದ್ಯೋಗ, ದಾರಿದ್ರ್ಯ, ಪರಿಸರನಾಶ ಮುಂತಾದ ಸಮಸ್ಯೆಗಳ ಸುಳಿಯಲ್ಲಿ ಸಿಕ್ಕು ಜನಜೀವನ ಜರ್ಜರಿತವಾಗಿವೆ. ಉಗುರುಸುತ್ತಿನ ಮೇಲೆ ಒನಕೆ ಏಟು ಎಂಬಂತೆ ಒಂದಾದ ಮೇಲೊಂದರಂತೆ ವಿಘ್ನಗಳು ಎರಗಿ ಬರುತ್ತಲೇ ಇವೆ. ಸರಕಾರದ ಒಂದೊಂದು ಇಲಾಖೆಯೂ ಬಿಳಿಯಾನೆಯಾಗಿ ಇದರ ಭಾರ ಹೊರುವ ಸಾಮರ್ಥ್ಯವಿಲ್ಲದೆ ಶ್ರೀಸಾಮಾನ್ಯ ಅಪ್ಪಚ್ಚಿಯಾಗಿದ್ದಾನೆ. ಇದಕ್ಕೆಲ್ಲ ಪರಿಹಾರವಿರಲಿ, ಸಮರ್ಪಕ ಉತ್ತರ ನೀಡುವವರೇ ಇಲ್ಲವಾಗಿದ್ದಾರೆ. ಇದಕ್ಕಾಗಿ ಯಾರೊಬ್ಬರನ್ನೂ ಹೊಣೆಗಾರನನ್ನಾಗಿ ಮಾಡಲು ಸಾಧ್ಯವಿಲ್ಲದಾಗಿದೆ. ನಮ್ಮ ದೇಶ ಕೆಟ್ಟುಹೋದ ಜೀಪಿನಂತೆಯೂ, ಇದರ ಕೆಳಗೆ ಮಲಗಿ ರಿಪೇರಿ ಮಾಡುತ್ತಿರುವವನ ಉಲ್ಟಾ ಕಣ್ಣುಗಳಲ್ಲಿ ವಸ್ತುಸ್ಥಿತಿಯನ್ನು ನೋಡಬೇಕಾಗಿದೆ. ಉತ್ತರ ಎಲ್ಲಿದೆಯೋ ಯಾರಿಗೆ ಗೊತ್ತು? ಇಂಥ ಪ್ರಶ್ನೆಗಳ ಹಿನ್ನೆಲೆಯಲ್ಲಿ ತೇಜಸ್ವಿಯವರು ಮೂಡಿಗೆರೆಯಲ್ಲಿ ಕಟ್ಟಿಕೊಂಡಿರುವ ಮನೆಯ ಹೆಸರು 'ನಿರುತ್ತರ' ಎಂಬುದನ್ನು ಗ್ರಹಿಸಬೇಕು. ಕುವೆಂಪು ಅವರ 'ಉದಯರವಿ' ಒಂದು ಸಾಂಸ್ಕೃತಿಕ ಸೂರ್ಯೋದಯವನ್ನು ಹೇಳುತ್ತಿದ್ದರೆ, ತೇಜಸ್ವಿಯವರ 'ನಿರುತ್ತರ' ನಮ್ಮ ಸಾಂಸ್ಕೃತಿಕ ಅಸ್ವಸ್ಥತೆ-ಗೊಂದಲಗೇರಿಯ ಜೀವನಾನುಭವಕ್ಕೆ ಕಲ್ಪಿಸಿದ

೯ನೇ ಪುಟಕ್ಕೆ

ಗಾಂಧಿ, ಚರಣ ಸಿಂಗ್, ಚೌಟಾಲಾ, ಕರುಣಾನಿಧಿ, ದೇವೇಗೌಡ ಮುಂತಾದವರೆಲ್ಲಾ ತಮ್ಮ ಮಕ್ಕಳನ್ನು ''ಮುಂದಕ್ಕೆ ತಂದಿದ್ದಾರೆ''. ಆದರೆ ಸಾಮಾನ್ಯವಾಗಿ ಟೀಕಿಸುವುದು ಇಂದಿರಾ ಗಾಂಧಿಯವರನ್ನು ಮಾತ್ರ! ಕರುಣಾನಿಧಿಯವರ ಮಗ ಮಧುರೈನ ಅನಭಿಷಿಕ್ತ ಮಹಾರಾಜನಂತೆ ನಡೆದುಕೊಳ್ಳುತ್ತಾ ಈಚಿನ ಪ್ರಸಂಗದಲ್ಲಿ ದಿನಪತ್ರಿಕೆಯ ಕಚೇರಿಗೆ ಬೆಂಕಿಯಿಟ್ಟು ಕೆಲವರನ್ನು ಕೊಲ್ಲಿಸಿರುವುದು ಅತ್ಯಂತ ಹೀನಾಯವಾದ ಅಪರಾಧ. ಆತನಿಗೇನಾದರೂ ಶಿಕ್ಷೆಯಾಗುತ್ತದೆಯೇ ಎಂಬುದನ್ನು ಕುತೂಹಲದಿಂದ ಕಾದು ನೋಡೋಣ. ಕರುಣಾನಿಧಿಯವರ ಕುಟುಂಬ ಮತ್ತು ಮುರಸೋಲಿ ಮಾರನ್ ಕುಟುಂಬ ನೆಂಟಸ್ತನ ಬೆಳೆಸಿವೆ. ಈಗಿನ ಪ್ರಕರಣದಲ್ಲಿ ದಯಾನಿಧಿ ಮಾರನ್ ಕೇಂದ್ರ ಮಂತ್ರಿಪದವಿಗೆ ರಾಜಿನಾಮೆ ನೀಡಿದ್ದಾರೆ. ಕುಟುಂಬದ ಕಲಹಕ್ಕೆ ತೇಪೆ ಹಾಕಿದ ನಂತರ ಅವರು ಮತ್ತೆ ಮಂತ್ರಿಯಾಗಬಹುದಲ್ಲ! ಅದೇನೇ ಇರಲಿ, ಸದ್ಯಕ್ಕೆ ಮಾರಕ ಶಕ್ತಿಯಾದ ಮಾರನ್ ತೆರಳಿರುವುದು ಆರೋಗ್ಯಕರ. ಈತ ''ಮ್ಯಾನೇಜ್‌ಮೆಂಟ್ ಚತುರ''. ಭಾರತದ ಸಾರ್ವಜನಿಕ ವಲಯದಲ್ಲಿ ಅತಿ ದೊಡ್ಡದಾದ ದೂರಸಂಪರ್ಕ ಇಲಾಖೆಯನ್ನು ಖಾಸಗೀಕರಿಸಿ ಯಾವುದೋ ಅಮೆರಿಕಾದ ಕಂಪನಿಯ ಜೊತೆಗೂಡಿ ತಾನೇ ಖರೀದಿಸ ಬೇಕೆಂಬ ಮಹತ್ವಾಕಾಂಕ್ಷೆ ಈತನದು. ನಮ್ಮ ದೇಶದ ದೂರವಾಣಿ ವಿಭಾಗದ ಒಟ್ಟು ಆಸ್ತಿ ಎಷ್ಟಿರಬಹುದು? ಒಂದು ಕೋಟಿ ಕೋಟಿ ರೂಪಾಯಿಗಳಿರಬಹುದೆ ಅಥವಾ ಇನ್ನೂ ಹೆಚ್ಚಿರಬಹುದೆ? ಅದನ್ನು ಹರಾಜಿಗಿಟ್ಟು ತಾನೇ ಲಪಟಾಯಿಸಬೇಕೆಂಬ ಚಪಲವುಳ್ಳ ಮಾರನ್ ಸ್ವಲ್ಪ ಕಾಲಕ್ಕಾದರೂ ನಿರ್ಗಮಿಸಿರುವುದು ಕರುಣಾನಿಧಿ ಕುಟುಂಬ ಕಲಹವು ದೇಶಕ್ಕೆ ಹಂಗಾಮಿಯಾಗಿ ನೀಡಿರುವ ಒಂದು ಕೊಡುಗೆಯೆಂದರೆ ತಪ್ಪಾಗಲಾರದು.

* * *

ಭಾರತೀಯ ಜನತಾ ಪಕ್ಷವು ಉತ್ತರ ಪ್ರದೇಶದಲ್ಲಿ ಸೋತಿದೆ, ಆದರೆ ಗುಜರಾತಿನಲ್ಲಿ ತನ್ನ ಸರ್ವಾಧಿಕಾರದ ಪಾತಕ ಮನೋಭಾವವನ್ನು ಎಳ್ಳಷ್ಟೂ ಬದಲಾಯಿಸಿಕೊಂಡಿಲ್ಲ. ಮಾಯಾವತಿ-ಮುಲಾಯಂ ಸಿಂಗರನ್ನು ಸೋಲಿಸಲು ಯಥಾಪ್ರಕಾರ ತನ್ನ ಕೀಳುಮಟ್ಟದ ಅನೈತಿಕ ಪ್ರಚಾರಕ್ರಮವನ್ನು ಅನುಸರಿಸಲು ಹೋಗಿ ಸ್ವಲ್ಪ ಆಯತಪ್ಪಿ ಕೆಳಗೆ ಬಿದ್ದಿದೆ. ತಾನು ಸಿದ್ಧಗೊಳಿಸಿದ್ದ ಒಂದು ಕಾಂಪ್ಯಾಕ್ಟ್ ಡಿಸ್ಕ್ ಜೊತೆ ತನ್ನದೇನೂ ಸಂಬಂಧವಿಲ್ಲವೆಂದು ಹಸಿಸುಳ್ಳು ಹೇಳಿಯೂ ಪೂರ್ತಿಯಾಗಿ ಪಶ್ಚಾತ್ತಾಪಪಟ್ಟಿಲ್ಲದಿರುವುದು ಆ ಪಕ್ಷದ ಅನನ್ಯ ಸಂಸ್ಕೃತಿಯಾಗಿದೆ. ಚುನಾವಣಾ ಆಯೋಗದ ಆಜ್ಞೆಯನ್ನು ಉಲ್ಲಂಘಿಸಲು ಸಾಧ್ಯವಿಲ್ಲದೆ ಆ ಸಿ.ಡಿ.ಯನ್ನು ಪತ್ರಿಕಾ ಹೇಳಿಕೆಯಲ್ಲಿ ಖಂಡಿಸಿದೆ, ಆದರೆ ಮಾನಸಿಕವಾಗಿ ಅಂತಹ ಪ್ರಚಾರ ಸಾಮಗ್ರಿಯ ಬಗ್ಗೆ ಆ ಪಕ್ಷಕ್ಕೆ ಏನೂ ಅಳುಕಿಲ್ಲ. ದ್ವೇಷವನ್ನು ಚುನಾವಣೆಯಲ್ಲಿ ಬಂಡವಾಳವನ್ನಾಗಿ ಮಾಡಿಕೊಳ್ಳುವವರಿಗೆ ಇಂತಹದ್ದರಲ್ಲಿ ಅಳುಕು ಹೇಗುಂಟಾಗುತ್ತದೆ!

ಗುಜರಾತ್ ಮಾದರಿಯನ್ನು ಹೊಗಳುವ ಅಡ್ವಾನಿಯವರು ದೇಶಕ್ಕೆ ವಿವರಣೆ ನೀಡಿ ಕ್ಷಮೆ ಯಾಚಿಸಬೇಕಾದ ಪ್ರಸಂಗ ಘಟಿಸಿದಾಗೆಲ್ಲಾ ದೀರ್ಘಕಾಲಿಕ ಮೌನವ್ರತ ಆಚರಿಸುವುದು ವಾಡಿಕೆಯಾಗಿದೆ. ಈಚೆಗೆ ಬರೋಡ ವಿಶ್ವವಿದ್ಯಾನಿಲಯದ ಕಲಾ ವಿಭಾಗದಲ್ಲಿ ಅಡ್ವಾನಿ ಯವರ ಪಕ್ಷದ ಕಾರ್ಯಕರ್ತರು ಪಕ್ಕಾ ಹಿಟ್ಲರ್ ಕೂಸುಗಳಂತೆ ವರ್ತಿಸಿದ್ದಾರೆ. ಅದನ್ನು ಸುಮ್ಮನೆ ಖಂಡಿಸಿದರೆ ನರೇಂದ್ರ ಮೋದಿಯವರಿಗೆ ಯಾವ ರೀತಿಯಲ್ಲೂ ಮುಜುಗರ ಉಂಟಾಗುವುದಿಲ್ಲ. ಅವರ ಚರ್ಮ ಯಾವ ಪ್ರಾಣಿಯದೆಂದು ಊಹಿಸುವುದು ಬೇಡ, ಏಕೆಂದರೆ ಅದು ಆ ಪ್ರಾಣಿಗೆ ಅಪಚಾರವೆಸಗಿದಂತಾಗುತ್ತದೆ. ಸಂಕ್ಷಿಪ್ತವಾಗಿ ಹೇಳುವು ದಾದರೆ, ಇಂದಿನ ಗುಜರಾತಿನ ವಾತಾವರಣವು ಜರ್ಮನಿಯಲ್ಲಿ ಹಿಟ್ಲರ್ ಅಧಿಕಾರಕ್ಕೆ ಬರುವ ಮುನ್ನಾದಿನಗಳಲ್ಲಿದ್ದ ವಾತಾವರಣದಿಂದ ಭಿನ್ನವಾಗಿಲ್ಲ. ಅಲ್ಲಿ ನಾಗರಿಕ ಹಕ್ಕುಗಳಿಗೆ ಬೆಲೆಯಿಲ್ಲ, ಸಾಂಸ್ಕೃತಿಕ ಸೃಜನಶೀಲತೆಗೆ ಸ್ಥಾನವಿಲ್ಲ ಮತ್ತು ಕಾನೂನು ವ್ಯವಸ್ಥೆಯೆಂಬುದು ಅಸ್ತಿತ್ವದಲ್ಲಿಲ್ಲ. ಭಾರತದ ಒಂದು ಭಾಗದಲ್ಲಿ ಇದೆಲ್ಲಾ ನಡೆಯುತ್ತಿರುವಾಗ ಪ್ರಧಾನಿ ಮನಮೋಹನ ಸಿಂಗರಿಗೆ ಅದರ ಬಗ್ಗೆ ನಿರಾಸಕ್ತಿ ಮೂಡಿರುವುದು ಆರೋಗ್ಯಕರವಲ್ಲ. ಅಮೆರಿಕಾವನ್ನು ಒಲೈಸುವುದಷ್ಟೇ ಭಾರತದ ಪ್ರಧಾನಿಯ ಕೆಲಸವೆಂದು ಅವರು ಭಾವಿಸಿದಂತಿದೆ. ಒಂದೆಡೆ ಕಲಾವಿದ ಎಂ. ಎಫ್. ಹುಸೇನ್‌ಗೆ ಸಂಘ ಪರಿವಾರದ ಕಾರ್ಯಕರ್ತರು ನೀಡುವ ಉಪಟಳವನ್ನು ತಡೆಯಲು ಅವರಿಗೆ ವ್ಯವಧಾನವಿಲ್ಲ; ಇನ್ನೊಂದೆಡೆ, ಬರೋಡ ವಿಶ್ವವಿದ್ಯಾನಿಲಯದ ಉಪಕುಲಪತಿಯು ನರೇಂದ್ರ ಮೋದಿ ಯೊಡನೆ ಕುಣಿಯಲಾರಂಭಿಸಿದರೆ ಅದು ಶೈಕ್ಷಣಿಕ ಸಂಸ್ಥೆಯೊಂದಕ್ಕೆ ಒಳ್ಳೆಯದಲ್ಲವೆಂದು ಹೇಳುವಷ್ಟು ಮುತುವರ್ಜಿಯೂ ಅವರಿಗಿಲ್ಲ. ಹಿಟ್ಲರನ ವಿಕಾಸಕ್ಕೆ ಇದಕ್ಕಿಂತಲೂ ಅನುಕೂಲಕರವಾದ ಸನ್ನಿವೇಶ ಬೇಕೆ?

ಬರೋಡ ವಿಶ್ವವಿದ್ಯಾನಿಲಯದ ಸ್ನಾತಕ ವಿಭಾಗದ ಒಬ್ಬ ವಿದ್ಯಾರ್ಥಿಯ ಕಲಾಕೃತಿಯ ಮೌಲ್ಯಮಾಪನ ಮಾಡಲು ಸಂಬಂಧಪಟ್ಟವರು ಮುಂದಾಗುವುದಕ್ಕೆ ಮುಂಚೆಯೇ ಅಡ್ವಾನಿ ಪಕ್ಷದ ಕಾರ್ಯಕರ್ತನೊಬ್ಬ ಅದನ್ನು ''ಮಾಪನ'' ಮಾಡಿ ವಿದ್ಯಾರ್ಥಿಯನ್ನು ಜೈಲಿಗೆ ಅಟ್ಟಿದ್ದಾನೆಂದರೆ ನಮ್ಮ ದೇಶದಲ್ಲಿ ಏನು ನಡೆಯುತ್ತಿದೆ, ಅಧಿಕಾರದಲ್ಲಿರುವವರು ಬಾಯಿ ಬಿಡುವುದಿಲ್ಲವೇಕೆ, ಕಾನೂನು ಕ್ರಮ ಕೈಗೊಳ್ಳುವುದಿಲ್ಲವೇಕೆ? ಆ ವಿದ್ಯಾರ್ಥಿಯ ಕಲಾಕೃತಿಯನ್ನು ಸಾರ್ವಜನಿಕ ಪ್ರದರ್ಶನಕ್ಕೆ ಇಟ್ಟಿರಲಾಗಿರಲಿಲ್ಲವೆಂದು ಹೇಳುವುದು ಅನುಚಿತ; ಏಕೆಂದರೆ, ಹಾಗೆ ಪ್ರದರ್ಶನಕ್ಕೆ ಇಟ್ಟಿದ್ದಿದ್ದರೆ ವಿದ್ಯಾರ್ಥಿಯನ್ನು ಜೈಲಿಗೆ ಕಳಿಸ ಬೇಕಾದ್ದು ಸರಿ, ಎಂದ ಹಾಗಾಗುತ್ತದೆ. ಆದರೆ ಅದು ಯಾವ ಕಾರಣಕ್ಕೂ ಸರಿಯಲ್ಲ, ಸಮರ್ಥನೀಯವಲ್ಲ. ದೇಶವನ್ನು ಅಮೆರಿಕಾಕ್ಕೆ ಬಳುವಳಿಯಾಗಿ ನೀಡಲು ಹೇಸದಿದ್ದ ವಾಜಪೇಯಿಯವರ ಪಕ್ಷದ ಕಾರ್ಯಕರ್ತರಿಗೆ ಅದೇನು ಅದ್ಭುತ ನೈತಿಕ ಪ್ರಜ್ಞೆ, ಅಶ್ಲೀಲತೆಯ ಬಗೆಗಿನ ಕಾಳಜಿ! ದಿನನಿತ್ಯ ದುರ್ದರ್ಶನದಲ್ಲಿ, ಹಲವು ದಿನಪತ್ರಿಕೆಗಳಲ್ಲಿ ಅಚ್ಚಾಗುವ ಚಿತ್ರಗಳನ್ನು ಈ ''ನೈತಿಕ ಪೊಲೀಸರು'' ಗಮನಿಸುವುದಿಲ್ಲವೇಕೆ? ಬಹಳ ದೂರ ಹೋಗುವುದು ಬೇಡ, ನಮ್ಮ ರಾಜ್ಯದಲ್ಲಿ ನಂಜನಗೂಡಿನ ಬಳಿ ಕಳಲೆಯಲ್ಲಿ ಇರುವ ಲಕ್ಷ್ಮೀಕಾಂತ ದೇವಸ್ಥಾನದಲ್ಲಿರುವ ಕೆತ್ತನೆಯ ಚಿತ್ರಗಳನ್ನಿವರು ನೋಡಿದ್ದಾರೆಯೆ? ಗುಡಿಯನ್ನು ಪ್ರವೇಶಿಸಿದ ಕೂಡಲೆ ಬಲಭಾಗದ ಎರಡು ಕಂಭಗಳಲ್ಲಿ ಸಂಭೋಗ ಕ್ರಿಯೆಯನ್ನು ಚಿತ್ರಿಸುವ ಕೆತ್ತನೆಗಳಿವೆ. ಒಂದರಲ್ಲಂತೂ ಒಬ್ಬ ಯುವಕ ಧೀರನು ಶೀರ್ಷಾಸನ ಮಾಡುತ್ತಲೇ ಸಂಭೋಗದಲ್ಲಿ ತೊಡಗಿದ್ದಾನೆ! ಬರೋಡದ ಫ್ಯಾಸಿಸ್ಟ್ ನೈತಿಕತೆಯ ಪೊಲೀಸರು ಈ ಕಂಭಗಳನ್ನು ಒಡೆದುಹಾಕಿ ಅದನ್ನು ಕೆತ್ತಿದವನನ್ನು ಜೈಲಿಗೆ ಕಳಿಸುತ್ತಾರೇನು? ಹಾಗೆ ಮಾಡಲು ಉಪಕ್ರಮಿಸಿದರೆ ನಮ್ಮ ಜೈಲುಗಳಲ್ಲಿ ಜಾಗವೇ ಸಾಲುವುದಿಲ್ಲ. ಕಲೆಯ ಅನಾದರವು ಈ ಮಟ್ಟಕ್ಕೆ ಕುಸಿದಿರುವುದು ಗುಜರಾತಿಗೆ ಒಳ್ಳೆಯದಲ್ಲ, ದೇಶಕ್ಕೆ ಶ್ರೇಯಸ್ಕರವೂ ಅಲ್ಲ. ನರೇಂದ್ರ ಮೋದಿಯವರು ಕಲೆ-ಸಾಹಿತ್ಯ-ಸಂಸ್ಕೃತಿಗಳಿಗೆ ಗೌರವ ಕೊಡುವುದನ್ನು ಕಲಿಯಬೇಕು, ಇಲ್ಲವೆ ಮುಖ್ಯಮಂತ್ರಿ ಪದವಿಯನ್ನು ತ್ಯಜಿಸಿ ಹಲ್ಲೆಕೋರರ ಬಣ ಸೇರಿಕೊಳ್ಳಬೇಕು.

* * *

ಕರ್ನಾಟಕದಲ್ಲಿ ಭೂಮಿಯನ್ನು ನುಂಗುವ ರಾಕ್ಷಸರು ಹೆಚ್ಚಿಕೊಂಡಿದ್ದಾರೆ. ಸರ್ಕಾರದ ಭೂಮಿಯನ್ನು ಒತ್ತುವರಿ ಮಾಡಿಕೊಂಡಿದ್ದರೆಂದು ಬಡಜನರ ಗುಡಿಸಲು ಕಿತ್ತುಹಾಕಿ ಭೂಮಿಯನ್ನು ಹರಾಜು ಮಾಡುವ ಕಳ್ಳರ ಸಂತೆ ನೆರೆದಿದೆ. ಸರ್ಕಾರದ ಆಸ್ತಿಯ ಲೂಟಿಗೆ ಇದೊಂದು ಉದಾಹರಣೆ ಮಾತ್ರ. ಸದ್ಯದಲ್ಲೇ ವಿಧಾನಸೌಧವನ್ನು ಹರಾಜು ಮಾಡುವ ಹಂತ ಮುಟ್ಟಬಹುದು. ಅತ್ತಕಡೆ ದೇವನಹಳ್ಳಿ ವಿಮಾನ ನಿಲ್ದಾಣಕ್ಕೆಂದು ವಶಪಡಿಸಿ ಕೊಂಡಿದ್ದ ರೈತರ ಭೂಮಿಯಲ್ಲಿ ನೂರಾರು ಎಕರೆ ಉಳಿದುಹೋಗಿದೆಯಂತೆ; ಅದನ್ನು ಹರಾಜು ಮಾಡಿ ಮಂತ್ರಿಗಳು ಜೇಬು ತುಂಬಿಕೊಳ್ಳುತ್ತಾರೆ. ಅಗತ್ಯಕ್ಕಿಂತ ಹೆಚ್ಚು ಭೂಮಿ ವಶಪಡಿಸಿಕೊಂಡಿದ್ದೇ ಈ ಅವ್ಯವಹಾರಗಳನ್ನು ನಡೆಸಲು ಇರಬೇಕು. ಆ ಭೂಮಿಯನ್ನು ರೈತರಿಗೆ ಹಿಂದಿರುಗಿಸಬೇಕೇ ವಿನಾ ಲಂಚಕೋರ ವ್ಯವಹಾರಗಳಿಗೆ ಆಸ್ಪದ ನೀಡುವಂತಿರ ಕೂಡದು. ನ್ಯಾಯ ವಿತರಣೆ ಮಾಡುವ ನ್ಯಾಯಾಲಯಗಳು ಯಾರ ಅರ್ಜಿ ಅಥವಾ ಮರ್ಜಿಗೂ ಕಾಯದೆ ರೈತರ ಪರವಾಗಿ ಮಧ್ಯಪ್ರವೇಶ ಮಾಡಬಹುದಲ್ಲವೆ?

* * *

ಬೆಂಗಳೂರಿನ ಜೈಲಿನಲ್ಲಿರುವ ಕೈದಿಗಳಿಗೆ ಇನ್ನು ಮುಂದೆ ಇಸ್ಕಾನ್ ನೇತಾರರಿಂದ ಶ್ರೀಕೃಷ್ಣನ ಪ್ರಸಾದ ಕೊಡಿಸಲಾಗುತ್ತದೆಂದು ಸಚಿವ ಶ್ರೀ ಎಂ. ಪಿ. ಪ್ರಕಾಶ್ ಹೇಳಿದ್ದಾರೆ. ಅದಕ್ಕೆ ಸಾಕಷ್ಟು ಹಣ ಪಡೆದು ಲಾಭವನ್ನು ಗಿಟ್ಟಿಸಿಕೊಳ್ಳುವ ಬುದ್ಧಿವಂತಿಕೆ ಈ. ಕೃಷ್ಣ ದಾಸರಿಗಿದೆ. ಊಟದ ಜೊತೆ ಒಂದಷ್ಟು ಅಫೀಮನ್ನೂ ಕೊಡುವುದು ಇಸ್ಕಾನ್ ಪರಂಪರೆ. ಆಮೇಲೆ ಜೈಲಿನಲ್ಲಿರಬೇಕಾದ ಇಸ್ಕಾನ್‌ನ ಕೆಲವು ಕೃಷ್ಣ-ಬಲರಾಮ ಭಕ್ತರು ಶಾಸನ ಸಭೆ ಮತ್ತು ವಿಧಾನ ಪರಿಷತ್ತಿನ ಸದಸ್ಯರಿಗೆಲ್ಲಾ ಊಟ ಉಣಿಸಬಹುದು. ಮಾನ್ಯ ಪ್ರಕಾಶ್ ಅವರ ಯೋಜನೆಯಡಿ ಮಂತ್ರಿಗಳಿಗೆಲ್ಲಾ ಇಸ್ಕಾನ್ ಊಟ ತಿನ್ನಿಸಬಹುದು. ಈಗಾಗಲೆ ಬಿಸಿಯೂಟದ ಯೋಜನೆಯ ರುಚಿ ಕಂಡಿರುವ ಇಸ್ಕಾನ್ ''ಕೃಷ್ಣ ಕ್ಯಾಟರಿಂಗ್ ಕಂಪನಿ''ಯಾಗಿ ಪರಿವರ್ತನೆ ಹೊಂದಿ ಸರ್ಕಾರದ ಖಜಾನೆಯಿಂದ ಬೇಕಾದಷ್ಟು ಹಣವನ್ನು ದೋಚಬಹುದು. ಈರುಳ್ಳಿ-ಮೊಟ್ಟೆ-ಮಾಂಸ ಏನೂ ನೀಡದೆ ಅಫೀಮು ಮಿಶ್ರಿತ ''ಪುಳಿ-ಚಾರು'' ನೀಡಿ ನಮ್ಮ ಶಾಲಾ ಮಕ್ಕಳನ್ನು ಮಂದಬುದ್ಧಿಯವರನ್ನಾಗಿಸಲು ಸರ್ಕಾರವು ಇಸ್ಕಾನ್‌ಗೆ ಗುತ್ತಿಗೆ ನೀಡುತ್ತಿದೆ. ನಾಚಿಕೆಗೂ ಬರಗಾಲ ಬಂದಂತಾಯಿತು!

* * *

ಆಸ್ಟ್ರೇಲಿಯಾದ ಪ್ರಧಾನಿ ತನ್ನ ದೇಶದ ಕ್ರಿಕೆಟ್ ಆಟಗಾರರನ್ನು ಜಿಂಬಾವೆಗೆ ಕಳಿಸುವುದಿಲ್ಲವೆಂದು ಕಟ್ಟಾಜ್ಞೆ ಹೊರಡಿಸಿದ್ದಾರೆ. ಆ ದೇಶದ ಅಧ್ಯಕ್ಷ ಮುಗಾಬೆ ವಿರುದ್ಧದ

ಕ್ರಮ ಇದು. ಏಳು ಲಕ್ಷ ಇರಾಕಿಯರನ್ನು ಕೊಂದಿರುವ ಬುಷ್ ಬಗ್ಗೆ ಅಭಿಮಾನವಿರಿಸಿಕೊಂಡಿರುವ ಆಸ್ಟ್ರೇಲಿಯಾ ಪ್ರಧಾನಿಯವರಿಗೆ ಬಿಳಿಯರು ಲಪಟಾಯಿಸಿದ್ದ ಜಮೀನನ್ನು ದೇಶದ ರೈತರಿಗೆ ಹಿಂದಿರುಗಿಸಿದ ಮುಗಾಬೆ ಕ್ರಮವು ಸಿಟ್ಟು ಬರಿಸುತ್ತದೆ. ಇದೇ ಅವರ ಪ್ರಜಾಪ್ರಭುತ್ವದ ಮೂಲ ಲಕ್ಷಣ. ಆಸ್ಟ್ರೇಲಿಯಾ ತಂಡದೊಡನೆ ಕ್ರಿಕೆಟ್ ಆಡುವುದಕ್ಕಿಂತ ಜಿಂಬಾವೆಯ ರೈತರಿಗೆ ಜಮೀನು ನೀಡುವುದು ಹೆಚ್ಚು ಯೋಗ್ಯವಾದ ಕೆಲಸ. ಅದನ್ನು ಅರಿತುಕೊಳ್ಳದೆ ನಮ್ಮ ಕೆಲವು ಮಾಧ್ಯಮದ ಪಂಡಿತರು ಹೆಂಡ ಕುಡಿದಿರುವವರಂತೆ ಒದರುತ್ತಿರುವುದನ್ನು ನೋಡುವುದೇ ಒಂದು ಮೋಜು.

* * *

ಕ್ಯೂಬದ ಎಪ್ಪತ್ತಮೂರು ಕ್ರೀಡಾಪಟುಗಳು, ಹಲವು ವಿದ್ಯಾರ್ಥಿಗಳು ಮತ್ತು ವಿವಿಧ ದೇಶಗಳ ನಾಗರಿಕರು ಪ್ರಯಾಣಿಸುತ್ತಿದ್ದ ವಿಮಾನವೊಂದನ್ನು ಮಾರ್ಗ ಮಧ್ಯದಲ್ಲಿ ಸಿಡಿಸಿದ್ದ ಲೂಯಿ ಪೊಸಾದ ಕರೀಲ್ಸ್ ಎಂಬುವವನು ಅಮೆರಿಕಾದ ನ್ಯಾಯಾಲಯದಲ್ಲಿ ಆಪಾದನೆಯಿಂದ ಮುಕ್ತನೆಂಬ ತೀರ್ಪು ಪಡೆದಿದ್ದಾನೆ. ಕ್ಯೂಬದ ಜನರನ್ನು ಕೊಲ್ಲುವುದು ಭಯೋತ್ಪಾದಕ ಕೃತ್ಯವಲ್ಲ, ಅದು ಪ್ರಜಾಪ್ರಭುತ್ವದ ರಕ್ಷಣೆ !! ಇಂತಹ ತೀರ್ಪು ನೀಡಿರುವ ಅಮೆರಿಕಾದ ನ್ಯಾಯಾಲಯವನ್ನು ಕಸದ ತೊಟ್ಟಿಗೆ ಹಾಕುವುದು ಘನವಾದ ಕೆಲಸ. ಕರೀಲ್ಸ್ ಮೇಲೆ ಕೊಲೆ ಅಥವಾ ಭಯೋತ್ಪಾದಕ ಕೃತ್ಯದ ಆಪಾದನೆಯನ್ನು ಅಮೆರಿಕಾ ಹೊರಿಸಲಿಲ್ಲ; ಕಾನೂನು ಕ್ರಮವನ್ನು ಉಲ್ಲಂಘಿಸಿ ಅಮೆರಿಕಾಕ್ಕೆ ಪ್ರವೇಶಿಸಿದ ಎಂಬುದಷ್ಟೇ ಅವನ ಮೇಲಿನ ಆಪಾದನೆ ! ಗುಟ್ಟಾಗಿ ಅವನನ್ನು ಅಮೆರಿಕಾಕ್ಕೆ ಕರೆಸಿಕೊಂಡಿದ್ದದ್ದೂ ಅಮೆರಿಕಾದ ಸರ್ಕಾರವೇ ಎಂಬುದು ಈಗ ಜಗಜ್ಜಾಹೀರಾಗಿದೆ. ಭಯೋತ್ಪಾದನೆಯನ್ನು ಪ್ರಚೋದಿಸುವ ''ರೋಗ್ ಸ್ಟೇಟ್'' ಅಮೆರಿಕಾ ಎಂಬುದಕ್ಕೆ ಇದು ಇನ್ನೊಂದು ನಿದರ್ಶನ.

*ಪತ್ರಗಳು (೭ನೇ ಪುಟದಿಂದ)*

ಕಾವ್ಯಪ್ರತಿಮೆಯಂತೆ ಕಾಣುತ್ತದೆ. ಇತ್ತೀಚೆಗೆ ಬಂದ 'ಮಾಯಾಲೋಕ-೧' ಎಂಬ ತೇಜಸ್ವಿಯವರ ಗ್ರಾಫಿಕ್ ಕಾದಂಬರಿ ನಿರುತ್ತರಗಳ ತುದಿಶಿಖರವೆನ್ನಬಹುದು. ಇದನ್ನು ಕುರಿತು ನಾನು ಬರೆದ ಇಪ್ಪತ್ತೇಳು ಪುಟಗಳ ಸುದೀರ್ಘ ಲೇಖನ ಹಾಗೂ 'ಕನ್ನಡದಲ್ಲಿ ಚಾರಣ ಸಾಹಿತ್ಯ – ಒಂದು ಸಾಂಸ್ಕೃತಿಕ ಅಧ್ಯಯನ' – ಎಂಬ ನನ್ನ ಪಿಎಚ್.ಡಿ. ಮಹಾಪ್ರಬಂಧದ ಆರನೇ ಅಧ್ಯಾಯ (= ತೇಜಸ್ವಿ ಸಮಗ್ರಸಾಹಿತ್ಯ ಕುರಿತದ್ದು)ಗಳನ್ನು ಜೆರಾಕ್ಸ್ ಮಾಡಿಸಿ ಶ್ರೀ ತೇಜಸ್ವಿ ಅವರಿಗೆ ಓದುವ ಪ್ರೀತಿಗಾಗಿ ಕಳುಹಿಸಿಕೊಟ್ಟಿದ್ದೆ. ಇದನ್ನೋದಿದ ತೇಜಸ್ವಿಯವರು ನನಗೋಸ್ಕರ ಬಿಡುವು ಮಾಡಿಕೊಂಡು ತುಂಬುಹೃದಯದ ಪ್ರೀತಿಯಿಂದ ಐದು ಪುಟಗಳ ಉತ್ತರವನ್ನು ಬರೆದಿದ್ದಾರೆ. ಈ ಅನಿರೀಕ್ಷಿತ ಉತ್ತರ ನನಗೆ ಸಂದ ಅಪೂರ್ವ ಬಹುಮಾನವಾಗಿದೆ.

ಒಬ್ಬ ಲೇಖಕ ಮತ್ತು ವಿಮರ್ಶಕರ ನಡುವಣ ಮುಕ್ತ ಮನಸ್ಸಿನ ಮಾತುಕತೆಗೆ ನಿದರ್ಶನವಾಗಿರುವ ತೇಜಸ್ವಿಯವರ ಪತ್ರ ಬಹುಶಃ ಸಮಕಾಲೀನ ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಪಟ್ಟಂತೆ ಕೊನೆಯ ದಾಖಲೆಯಿರಬಹುದು. ತೇಜಸ್ವಿಯವರ ಪತ್ರದಲ್ಲಿ ವಿಮರ್ಶೆಯ ಸ್ವರೂಪ ಮತ್ತು ವಿಮರ್ಶಕನ ಕರ್ತವ್ಯಗಳನ್ನು ಕುರಿತು ಮೌಲಿಕ ವಿವೇಚನೆಯಿಂದ ಸೃಷ್ಟಿಶೀಲ ಸಾಹಿತ್ಯದ ಆರೋಗ್ಯವನ್ನು ಹೇಗೆ ಕಾಪಾಡಿಕೊಳ್ಳಬೇಕೆಂಬ ಧನ್ವಂತರಿ ಚಿಕಿತ್ಸೆಯಿದೆ. ಈ ಪತ್ರದ ಮೇಲೆ ಸೆಗಣಿ ಉಂಡೆಯನ್ನು ತಳ್ಳುತ್ತಿರುವ ಎರಡು ಸೆಗಣಿ ಹುಳುಗಳ ಗ್ರಾಫಿಕ್ ಚಿತ್ರವಿದೆ. ಇದನ್ನೊಂದು ಜೀವನಾನುಭವದಂತೆ ತಟಸ್ಥ ತಲ್ಲೀನತೆಯಿಂದ ನೋಡಬಹುದು. ಆದರೆ, ಸೆಗಣಿ ಹುಳುವಿನ ಹೋರಾಟದಿಂದ ಸ್ಫೂರ್ತಿ ಪಡೆಯುವ ನಾಯಿಗುತ್ತಿಯಂತೆ ಆಲೋಚಿಸುವ ನನ್ನ ಬಗೆಗಣ್ಣಿಗೆ ನಿಸರ್ಗದ ಕಲಾಕೃತಿಯಾದ ಸೆಗಣಿಉಂಡೆ ಒಂದು 'ವಸ್ತು ನಿರ್ಮಾಣ'ದಂತೆಯೂ ಅದನ್ನು ತಳ್ಳುತ್ತಿರುವ ಎರಡು ಸೆಗಣಿ ಹುಳುಗಳ ಹೋರಾಟವು ಕವಿ ಮತ್ತು ಸಹೃದಯರ ಹೊಕ್ಕು ಬಳಕೆಯಂತೆಯೂ ಕಂಡುಬಂದಿದೆ.

*ಹೊಸಕೋಟೆ* — ***ವಿ. ಚಂದ್ರಶೇಖರ ನಂಗಲಿ***

### ಫ್ಯಾಸಿಸಂ ಸೋಲಿಸುವಲ್ಲಿ ಸ್ಟಾಲಿನ್ ಪಾತ್ರ

ಎರಡನೇ ಜಾಗತಿಕ ಮಹಾಯುದ್ಧದ ಪ್ರಥಮ ಹಂತವು ಸಾಮ್ರಾಜ್ಯಶಾಹಿ ಯುದ್ಧವಾಗಿದ್ದಾಗ ಮೇ ದಿನಗಳನ್ನು ಯುದ್ಧವಿರೋಧಿ ದಿನಗಳನ್ನಾಗಿ ಆಚರಿಸಲಾಗುತ್ತಿತ್ತು. ಆದರೆ ಹಿಟ್ಲರನ ಸೈನ್ಯವು ಸೋವಿಯತ್ ಒಕ್ಕೂಟದ ಮೇಲೆ ವಿಶ್ವಾಸಘಾತುಕ ಧಾಳಿ ನಡೆಸಿದಾಗ ಯುದ್ಧದ ಸ್ವರೂಪವು ಬದಲಾಗಿ ಅದು ಫ್ಯಾಸಿಸ್ಟ್‌ವಿರೋಧಿ ಜನತಾಯುದ್ಧವಾಗಿ ಪರಿವರ್ತನೆಗೊಂಡಾಗ, ಫ್ಯಾಸಿಸ್ಟ್ ಶಕ್ತಿಗಳನ್ನು ಸೋಲಿಸಲು ಶಸ್ತ್ರಾಸ್ತ್ರಗಳನ್ನೂ, ಇತರೆ ಸಾಮಗ್ರಿಗಳನ್ನೂ ಹೆಚ್ಚು ಹೆಚ್ಚಾಗಿ ಉತ್ಪಾದನೆ ಮಾಡಿ ಕೆಂಪು ಸೇನೆಗೆ ಸಹಾಯಮಾಡುವ ದೃಢ ನಿರ್ಧಾರದೊಂದಿಗೆ ಮೇ ದಿನಗಳನ್ನು ಆಚರಿಸಲಾಗುತ್ತಿತ್ತು.

ಮೇ ದಿನಕ್ಕಿಂತ ಮೊದಲು ಹಿಟ್ಲರ್‌ನನ್ನು ಸೋಲಿಸುವ ಹಾಗೂ ಮೇ ದಿನದಂದು ಜರ್ಮನ್ ರೈಚ್‌ಸ್ಟಾಗ್ (ಪಾರ್ಲಿಮೆಂಟ್ ಭವನ) ಮೇಲೆ ಕೆಂಬಾವುಟ ಹಾರಿಸುವ ಗುರಿಯು ಇಡೀ ದೇಶದ ಜನತೆ ಮತ್ತು ಸೇನಾಧಿಕಾರಿಗಳ ಸಮೇತ ರಷ್ಯನ್ ಸೈನ್ಯವು ಮೇ ದಿನದ ಸಂದೇಶದಿಂದ ಸ್ಫೂರ್ತಿಗೊಂಡಿದ್ದಿತು.

''ರೆಮಿನಿಸೆನ್ಸಸ್ ಅಂಡ್ ರಿಫ್ಲೆಕ್ಷನ್ಸ್'' ಎಂಬ ಕೃತಿಯಲ್ಲಿ ರಷ್ಯಾದ ಮಾರ್ಷಲ್ ಜಿ. ಝುಕೋವ್ ಈ ರೀತಿ ಬರೆದದ್ದಾರೆ :

ಬರ್ಲಿನ್ ಕದನವು ತನ್ನ ಉನ್ನತ ಶಿಖರಕ್ಕೆ ತಲುಪಿದೆ. ಬರ್ಲಿನ್ ಗುಂಪನ್ನು ಮೇ ಒಂದರೊಳಗೆ ಮುಗಿಸಿಬಿಡಲು ರಷ್ಯನ್ ಸೈನ್ಯವು ಬಯಸಿದೆ. ಶತ್ರುವು ದಿಗ್ಭ್ರಾಂತರಾಗಿದ್ದರೂ ಸಹ ಆತನ ಪ್ರತಿಯೊಂದು ಮನೆ, ಉಗ್ರಾಣ, ಮಹಡಿಗಾಗಿ ಹೋರಾಟವನ್ನು ಸೋವಿಯೆತ್ ಸೈನಿಕರು ಮುಂದುವರಿಸಿದ್ದಾರೆ.

ಏಪ್ರಿಲ್ ೩೦, ೧೯೪೫ ಸೋವಿಯತ್ ಜನತೆ ನೆನಪಿನಲ್ಲಿ ನಾಝಿ ಜರ್ಮನಿ ವಿರುದ್ಧ ಹೋರಾಟದಲ್ಲಿ ಎಂದೆಂದಿಗೂ ಅಚ್ಚಳಿಯದೆ ಉಳಿಯಬಹುದು.

ರೈಚ್‌ಸ್ಟಾಗ್‌ಗಾಗಿ ನಡೆದ ಚಾರಿತ್ರಿಕ ಹೋರಾಟವನ್ನು ಸ್ವತಃ ನೋಡಿ ಮೂರನೇ ಖಾರ್ ಸೈನ್ಯದ ಕಮಾಂಡರ್ ಕುಜ್ನೆತ್ಸೋವ್ ನನ್ನನ್ನು ಕೂಡಲೇ ಕಮಾಂಡ್ ಪೋಸ್ಟ್‌ಗೆ ಕರೆದು ಹರ್ಷೋಲ್ಲಾಸದಿಂದ ವರದಿ ಮಾಡಿದ ವಾಕ್ಯಗಳು ಹೀಗಿವೆ :

ಶತ್ರುವಿನ ಮೇಲೆ ಅಂತಿಮ ವಿಜಯ ಸಾಧಿಸುವ ಗಳಿಗೆಯು ಸನ್ನಿಹಿತವಾಗುತ್ತಿವೆ. ಸೋವಿಯತ್ ಬಾವುಟವು ಈಗಾಗಲೆ ಬರ್ಲಿನ್ ಕೇಂದ್ರದಲ್ಲಿರುವ ರೈಚ್‌ಸ್ಟಾಗ್ ಮುಖ್ಯ ಕಟ್ಟಡದ ಮೇಲೆ ಹಾರುತ್ತಿದೆ.

ಮೇ ದಿನದ ಒಂದರಂದು ಕೊನೆಯ ವೇಳೆಗೆ ರೈಚ್‌ಸ್ಟಾಗ್‌ನಲ್ಲಿ ನಾಜಿಗಳಿಗೆ ಸೋವಿಯತ್ ಧಾಳಿ ತಡೆಯಲು ಸಾಧ್ಯವಾಗದೆ ಶರಣಾಗತರಾದರು.

ಏಪ್ರಿಲ್ ೩೦ರಂದು ನಾನು ಮಾಸ್ಕೋವನ್ನು ಫೋನಿನಲ್ಲಿ ನೇರವಾಗಿ ಸಂಪರ್ಕಿಸಿ ಕಾಮ್ರೇಡ್ ಸ್ಟಾಲಿನ್‌ರೊಡನೆ ಮಾತನಾಡಬಯಸಿದೆ. ಸ್ವಲ್ಪ ಸಮಯದಲ್ಲೇ ಸ್ಟಾಲಿನ್ ಫೋನಿನಲ್ಲಿ ಮಾತನಾಡಿದರು. ನಾನು ಅವರಿಗೆ ಹಿಟ್ಲರ್ ಆತ್ಮಹತ್ಯೆ ಮಾಡಿಕೊಂಡ ಸುದ್ದಿಯನ್ನು ವರದಿಮಾಡಿದೆ. ಯುದ್ಧ ನಿಲುಗಡೆ ಸೂಚಿಸಿ ಗೋಬಲ್ಸ್ ಬರೆದ ಪತ್ರ ಕುರಿತೂ ಸಹ ವರದಿಮಾಡಿದೆ. ಸ್ಟಾಲಿನ್ ಉತ್ತರಿಸಿದರು : 'ಈಗ ಅವ ಹಾಗೆ ಮಾಡಿದ್ದಾನೆ ಬರಿ ಹಾಳು; ಅವನನ್ನು ಜೀವಂತ ಹಿಡಿಯಬಹುದಿತ್ತು? ಹಿಟ್ಲರ್ ಹೆಣ ಎಲ್ಲಿತ್ತು? ಜನರಲ್ ಪ್ರೆಬೆಯ ಪ್ರಕಾರ ಹಿಟ್ಲರ್ ಹೆಣ ಸುಡಲಾಗಿತ್ತು.

'ಸಕೋಲೋವ್‌ಸ್ಕಿಯೊಡನೆ ಹೇಳಿರಿ, ಯಾವುದೇ ಮಾತುಕತೆ ಇರಲು ಸಾಧ್ಯವಿಲ್ಲ ಕ್ರೆಬ್ಸ್‌ನೊಡನಾಗಲಿ ಇತರೆ ಯಾವುದೇ ಹಿಟ್ಲರೈಟ್‌ನೊಡನೆ ಆಗಲಿ ಶರಣಾಗತಿ ಮಾತ್ರವೇ ನಾವು ಬಯಸುವುದು,' ಸುಪ್ರೀಂ ಕಮಾಂಡರ್ ಹೇಳಿದರು.

'ವಿಶೇಷವಾದದ್ದೇನೂ ಸಂಭವಿಸದಿದ್ದರೆ ಬೆಳಗ್ಗಿನವರೆಗೆ ನನ್ನನ್ನು ಕರೆಯಬೇಡಿರಿ, ನಾಳಿನ ಮೇ ದಿನದ ಪೆರೇಡಿಗೆ ಮೊದಲು ನಾನು ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳ ಬಯಸುತ್ತೇನೆ ಎಂದು ಸೋವಿಯೆತ್ ಒಕ್ಕೂಟದ ಮಾರ್ಷಲ್, ಸರ್ವೋಚ್ಚ ದಂಡನಾಯಕ ಸ್ಟಾಲಿನ್ ಹೇಳಿದರು.'

ಮೇ ದಿನದ ಭವ್ಯ ಪೆರೇಡನ್ನು ಕೆಂಪು ಚೌಕದಲ್ಲಿ ನಡೆಸಲಾಯಿತು. ಕಾಮ್ರೇಡ್ ಸ್ಟಾಲಿನ್ 'ಆರ್ಡರ್ ಆಫ್ ದಿ ಡೇ' ಓದಿ ಹೇಳಿದರು. ಅದರಲ್ಲಿ ಹೀಗೆ ಹೇಳಲಾಗಿದೆ :

''ಮಹಾನ್ ದೇಶಪ್ರೇಮಿ ಯುದ್ಧದ ವಿಜಯೀ ಸಮಾಪ್ತಿಯೊಂದಿಗೆ ಈ ವರ್ಷ ಮೇ ೧, ೧೯೪೫ರಂದು ನಮ್ಮ ಮಾತೃಭೂಮಿ ಜನರು ಮೇ ಒಂದನೇ ದಿನವನ್ನು ಆಚರಿಸುತ್ತಿದ್ದಾರೆ. ಮಹಾನ್ ದೇಶಪ್ರೇಮಿ ಯುದ್ಧದಲ್ಲಿ ಸೋವಿಯತ್ ಸೇನೆಗಳು ಗಳಿಸಿದ ಭವ್ಯ ವಿಜಯಗಳು ಕೆಂಪು ಸೇನೆಯ ಅಪರಿಮಿತ ಶಕ್ತಿಯನ್ನು, ಉನ್ನತ ಮಟ್ಟದ ಸೈನ್ಯವೊಂದನ್ನು, ನಮ್ಮ ಮಾತೃಭೂಮಿಯು ಪಡೆಯಿತು.''

ಫ್ಯಾಸಿಸಂ ಸೋತು ಇಂದಿಗೆ ೬೨ ವರ್ಷಗಳಾದವು. ಆ ಕಾಲದ ನಂತರ ಜಗತ್ತಿನ ಮುಖವೇ ಬದಲಾಗಿದೆ. ಜನಸಂಖ್ಯೆಯಲ್ಲಿ ಅತ್ಯಂತ ದೊಡ್ಡ ದೇಶವಾದ ಚೈನಾ ಜನತಾ ಪ್ರಜಾಪ್ರಭುತ್ವ ಕ್ರಾಂತಿ ಮೂಲಕ ಸಮಾಜವಾದ ಸ್ಥಾಪಿಸಿದೆ. ಸಮಾಜವಾದದ ಪ್ರಭಾವವು ಏಷ್ಯಾ, ಆಫ್ರಿಕಾ, ಲ್ಯಾಟಿನ್ ಅಮೆರಿಕಾ ಒಳಗೊಂಡಂತೆ ಜಗತ್ತಿನಾದ್ಯಂತ ತೀವ್ರವಾಗಿ ಹರಡುತ್ತಿರುವುದು ಮೇ ದಿನದ ಸ್ಮರಣೆ.

ತುಮಕೂರು — ***ಕೆ. ರವೀಂದ್ರ ನಾಯಕ್***

# ಭೂಮಿಯ ಲೂಟಿ : ಜನ ಬೆಂಕಿಗೆ

**ಈ**ಗ ರಾಜ್ಯದೆಲ್ಲೆಡೆ ಭೂಕಬಳಿಕೆಯದೇ ಸುದ್ದಿ. ಕಬಳಿಸಲು ಅಷ್ಟೊಂದು ಭೂಮಿ ಇನ್ನೂ ಲಭ್ಯವಿತ್ತೇ ಎನಿಸಿದರೆ ಸರ್ಕಾರಿ ಹರಾಜಿನಲ್ಲಿ ಅಷ್ಟೊಂದು ಬಿಳಿ ಹಣವನ್ನಿತ್ತು ಕೊಂಡುಕೊಳ್ಳಲು ನೂಕುನುಗ್ಗಲು! ಸರ್ಕಾರಿ ಭೂಮಿಯನ್ನು ತೆರವುಗೊಳಿಸಿದ ಮೇಲೆ ಅದನ್ನು ನಗರಾಭಿವೃದ್ಧಿ ಮಂಡಲಿಗೋ, ಕೈಗಾರಿಕಾಭಿವೃದ್ಧಿ ಮಂಡಲಿಗೋ ಕೊಡದೆ ಹರಾಜು ಹಾಕುವುದೇಕೆ ? ಸರ್ಕಾರಕ್ಕೆ ಈ ಹರಾಜಿನಿಂದ ಬರುವ ಹಣದ ತುರ್ತು ಅಗತ್ಯವೇನೂ ಇಲ್ಲ. ಕಾರಣ ಮಾನ್ಯ ವಿತ್ತಮಂತ್ರಿಯೂ, ಉಪ ಮುಖ್ಯಮಂತ್ರಿಯೂ ಸರ್ಕಾರಕ್ಕೆ ವರಮಾನ ಈಗಿರುವ ತೆರಿಗೆಯ ದರದಲ್ಲೇ ಹೊಳೆಯಾಗಿ ಹರಿದುಬರುತ್ತಿದೆ, ಒಂದೆರಡು ಕೋಟಿ ರೂಪಾಯಿಯನ್ನು ಮಠಕ್ಕೋ, ದೇವಸ್ಥಾನಕ್ಕೋ ದಾನ ಮಾಡಿದರೇನಂತೆ ಎಂದು ಹೇಳಿದರಲ್ಲವೆ ? ಸರ್ಕಾರ ಸ್ವಂತ ಭೂಮಿಯನ್ನು ಹರಾಜು ಮಾಡಿ ಲಾಭ ಮಾಡುತ್ತಿದ್ದರೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಕೈಗಾರಿಕಾ ಅಭಿವೃದ್ಧಿ ಪ್ರಾಧಿಕಾರಗಳು ಸರ್ಕಾರದ ಅಧಿಕಾರವನ್ನು ಪ್ರಯೋಗಿಸಿ, ಬಲವಂತವಾಗಿ ಮಾರುಕಟ್ಟೆಯ ಬೆಲೆ ನೀಡುತ್ತೇವೆ ಎಂದು ಜಾಣತನದಿಂದ ರೈತರ ಭೂಮಿಯನ್ನು ವಶಪಡಿಸಿಕೊಳ್ಳುವುದು, ನಂತರ ನಿವೇಶನಗಳನ್ನು ಅತ್ಯಧಿಕ ಬೆಲೆಗೆ ಮಾರುವುದು ಮತ್ತೆ ಮೂಲೆಯ ನಿವೇಶನಗಳನ್ನು ಹರಾಜು ಮಾಡುವುದು – ಹೀಗೆಲ್ಲ ಸರ್ಕಾರದ ಮತ್ತು ರಿಯಲ್ ಎಸ್ಟೇಟ್ ಏಜೆಂಟರು ಕೂಡಿ ನಡೆಸುತ್ತಿರುವ ದಂಧೆಯಾಗಿಬಿಟ್ಟಿದೆ ಈ ಭೂ ಕಬಳಿಕೆಯ ಪ್ರಕ್ರಿಯೆ. ಸರ್ಕಾರಿ ಭೂಮಿಯನ್ನು ರಿಯಲ್ ಎಸ್ಟೇಟ್ ಡೆವಲಪರ್‌ಗಳು ಹರಾಜಿನಲ್ಲಿ ಕೊಂಡುಕೊಳ್ಳುವುದು ಒಂದು ಕಡೆ. ಕೈಗಾರಿಕೆಗಳ ವಿಕಾಸಕ್ಕೆ ಭೂಮಿ ಬೇಕು ಎಂಬ ನೆಪದಲ್ಲಿ ವಿಶೇಷ ಆರ್ಥಿಕ ವಲಯಗಳನ್ನು ಸ್ಥಾಪಿಸುವ ದಂಧೆಯನ್ನು ಅದೇ ಡೆವಲಪರ್‌ಗಳಿಗೆ ಹಲವು ರೀತಿಯಲ್ಲಿ ವಿನಾಯಿತಿ, ಪ್ರೋತ್ಸಾಹಧನಗಳೊಂದಿಗೆ ಸರ್ಕಾರಕ್ಕೆ ಬರಬೇಕಾದ ಆದಾಯವನ್ನೂ ಬಿಟ್ಟುಕೊಟ್ಟು ಒಪ್ಪಿಸಿಬಿಡುವುದು, ಸರ್ಕಾರಿ ಭೂಮಿಯಲ್ಲಿ ತಲೆ ತಲಾಂತರದಿಂದ ನೆಲೆಸಿ ಹೇಗೋ ಜೀವನ ಸಾಗಿಸುತ್ತಿರುವ ಲಕ್ಷಾಂತರ ಕುಟುಂಬಗಳನ್ನು ಉಚ್ಚಾಟಿಸುವುದು, ವಿಶೇಷ ಆರ್ಥಿಕ ವಲಯದ ನೆಪದಲ್ಲಿ ಲಕ್ಷಾಂತರ ರೈತ ಕುಟುಂಬಗಳನ್ನು ಒಕ್ಕಲೆಬ್ಬಿಸಿ ಪರದೇಶಿಗಳಾಗಿಸುವುದು ಈ ಹೊತ್ತಿನ ಮತ್ತೊಂದು ಬೆಳವಣಿಗೆ. ಇವೆಲ್ಲವನ್ನೂ ಪ್ರಜಾಪ್ರಭುತ್ವದ ಹೆಸರಿನಲ್ಲೇ ಕಾನೂನುಬದ್ಧವಾಗಿ ಪಟ್ಟಭದ್ರರು ನಡೆಸುತ್ತಿರುವುದು ನಾಚಿಕೆಗೇಡಿನ ವಿಷಯ. ಸರ್ಕಾರಿ ಜಮೀನನ್ನು, ಅರಣ್ಯ ಪ್ರದೇಶಗಳನ್ನು ದೊಡ್ಡ ಪ್ರಮಾಣದಲ್ಲಿ ಆಕ್ರಮಿಸಿರುವ ಶ್ರೀಮಂತರನ್ನು ಉಚ್ಚಾಟನೆ ಮಾಡದೆ ಅವರೊಂದಿಗೆ ಚರ್ಚಿಸಿ ಒಪ್ಪಂದಕ್ಕೆ ಬರುತ್ತಿದ್ದು, ಅದೇ ಸರ್ಕಾರ ೧೧೨,೫೫೪ ಸಂಸಾರಗಳನ್ನು ತಲೆತಲಾಂತರದಿಂದ ಅನುಭವಿಸುತ್ತಿರುವ ೯೮,೯೭೮ ಹೆಕ್ಟೇರು ಭೂಮಿಯಿಂದ ಉಚ್ಚಾಟಿಸುತ್ತಿರುವ ಈ ಸರ್ಕಾರಗಳು ಯಾರನ್ನು ಪ್ರತಿನಿಧಿಸುತ್ತವೆ ? ಇದು ಪ್ರಜಾಪ್ರಭುತ್ವವೆ ? ವಿಶೇಷ ಆರ್ಥಿಕ ವಲಯಗಳಲ್ಲಿ ಕೆಲವಲ್ಲಿ ಮಾತ್ರ ಉದ್ದೇಶಗಳು ಸ್ಪಷ್ಟವಾಗಿವೆ. ಆಟೋ ಉಪಕರಣಗಳ ವಲಯದಲ್ಲಿ ಯಾವ ಕೈಗಾರಿಕೆಗಳು ಬರುತ್ತವೆ ಎಂಬುದು ಸ್ಪಷ್ಟ. ಆದರೆ ಬಹುತೇಕ ವಲಯಗಳಲ್ಲಿ ನಿಗದಿತ ಕೈಗಾರಿಕಾ ಪ್ರದೇಶಗಳಲ್ಲಿ ಬರುವ ಕೈಗಾರಿಕೆಗಳನ್ನು ಗುರುತಿಸಿಲ್ಲ. ಅವು ಎಷ್ಟು ಬೇಗ ಬರಬೇಕೆಂಬುದರ ಬಗ್ಗೆಯೂ ಖಚಿತತೆಯಿಲ್ಲ. ಈ ವಲಯಗಳಿಗೆ ಬೇಕಾದ ನೀರು, ವಿದ್ಯುಚ್ಛಕ್ತಿಯನ್ನು ಯಾರು ಒದಗಿಸುತ್ತಾರೆ ಎಂಬುದೂ ಸ್ಪಷ್ಟವಿಲ್ಲ. ಅಲ್ಲಿಯ ಪರಿಸರ ಸಂರಕ್ಷಣೆ, ನಗರದ ತ್ಯಾಜ್ಯ ವಸ್ತುಗಳನ್ನು ಹೇಗೆ ನಿರ್ವಹಿಸುತ್ತಾರೆ ಎಂಬುದೂ ಸ್ಪಷ್ಟವಿಲ್ಲ. ಹಾಗಾಗಿ ಬಹುತೇಕ ಇದೆಲ್ಲ ರಿಯಲ್ ಎಸ್ಟೇಟ್ ದಂಧೆಯಲ್ಲಿ ನಿರತರಾಗಿರುವ ಡೆವಲಪರ್‌ಗಳಿಗೆ ಲಾಭದಾಯಕವಾಗಬಹುದೇ ವಿನಾ ಅಲ್ಲಿಯ ಕೈಗಾರಿಕಾ ಪ್ರದೇಶ, ಕೈಗಾರಿಕೆಗಳ ಸ್ಥಾಪನೆಯೊಡನೆ ವಿಕಾಸವಾಗುವ ಖಾತರಿ ಏನೂ ಇಲ್ಲ. ನೀರು, ವಿದ್ಯುತ್ ಮತ್ತು ಸಾರಿಗೆ ವ್ಯವಸ್ಥೆಗಳನ್ನು ಸರ್ಕಾರವೇ ಪರಿಹರಿಸದೆ ಇವು ಖಾಸಗಿಯವರಿಂದ ಆಗುವುದೆಂದು ನಿರೀಕ್ಷಿಸಲಾಗುವುದಿಲ್ಲ. ನಗರ ಪ್ರದೇಶದಲ್ಲಿ ಬಡಜನರು ವಾಸಿಸುವ ಕೊಳೆಗೇರಿಗಳ ಲಕ್ಷಾಂತರ ಕುಟುಂಬಗಳೂ ಈ ಬೆಳವಣಿಗೆಯಲ್ಲಿ ಒಕ್ಕಲೇಳುತ್ತಿವೆ. ಇವರಿಗೆ ಪುನರ್ವಸತಿಯ ಯಾವ ನೀತಿಯೂ ಸ್ಪಷ್ಟವಿಲ್ಲ. ಹೊಸ ರೀತಿಯ ನಗರೀಕರಣದಲ್ಲಿ ಈ ಜನರಿಗೆ ಸೂಕ್ತ ಉದ್ಯೋಗಗಳೇನೂ ದೊರಕುವುದಿಲ್ಲ. ಉದಾರೀಕರಣದ ಬಿರುಸಿನಲ್ಲಿ ಮತ್ತಷ್ಟು ವ್ಯಾಪಕ ನಿರುದ್ಯೋಗವೂ ಸೃಷ್ಟಿಯಾಗುತ್ತಿದೆ. ಸಗಟು ಮತ್ತು ಚಿಲ್ಲರೆ ಮಾರುಕಟ್ಟೆಯ ಬಹುರಾಷ್ಟ್ರೀಕರಣದಿಂದಾಗಿ ಕೈಗಾಡಿಯ ಮೂಲಕ ಬೀದಿ ಬೀದಿಯಲ್ಲಿ ಮನೆ ಮುಂದೆ ಬಂದು ಸೇವೆ ನೀಡುವ ಲಕ್ಷಾಂತರ ಸಣ್ಣಪುಟ್ಟ ವ್ಯಾಪಾರಿಗಳು ಕಸುಬು ಕಳೆದುಕೊಳ್ಳುತ್ತಿದ್ದಾರೆ. ಮನೆಯ ಮಗ್ಗುಲಲ್ಲೇ ಇರುವ ಕಿರಾಣಿ ಅಂಗಡಿಗಳೂ ಮುಚ್ಚಿಕೊಂಡು ಈ ಎರಡು ಕ್ಷೇತ್ರದಲ್ಲೇ ೬-೭ ಕೋಟಿ ಜನರು ತಮ್ಮ ಸ್ವಯಂನಿರ್ಭರ ಉದ್ಯೋಗವನ್ನು ಕಳೆದುಕೊಳ್ಳುತ್ತಿದ್ದಾರೆ. ಅಲ್ಲಲ್ಲೇ ಹೈಟೆಕ್ ಉದ್ಯೋಗಗಳು ಸೃಷ್ಟಿಯಾದರೂ, ಉದ್ಯೋಗ ಕಳೆದುಕೊಂಡವರಿಗೆ ಹೊಸ ರೀತಿಯ ವಾಣಿಜ್ಯ ಲೋಕದಲ್ಲಿ ಉದ್ಯೋಗ ಪಡೆಯಲು ಅಗತ್ಯವಾದ ತರಪೇತಿ ಅಥವಾ ಕೌಶಲವಿಲ್ಲದೆ, ನಿರುದ್ಯೋಗ ಹೆಚ್ಚಾಗುವುದು ಅನಿವಾರ್ಯ. ಸರ್ಕಾರದ ಈ ಮೇಲ್ಪಂಕ್ತಿಯನ್ನೇ ಅನುಕರಿಸಿ, ಸಣ್ಣ ಪುಟ್ಟ ಪಟ್ಟಣಗಳು, ಪಂಚಾಯಿತಿಗಳು, ಮುನಿಸಿಪಾಲಿಟಿಗಳು ತಮ್ಮ ವಶದಲ್ಲಿರುವ ಸರ್ಕಾರಿ ಭೂಮಿಗಳನ್ನು ಇದೇ ರೀತಿ ಮಾರಲು ಮುಂದಾಗಬಹುದು. ಈ ಪ್ರಕ್ರಿಯೆಯಲ್ಲಿ ಉಂಟಾಗುತ್ತಿರುವ ನಿರುದ್ಯೋಗ ಗುಣಾತ್ಮಕವಾಗಿ ಬಂಡವಾಳಶಾಹಿ ವ್ಯವಸ್ಥೆಯ ಏರುಪೇರಿನ ವಾಣಿಜ್ಯ ವರ್ತುಲದಲ್ಲಿ ಸಹಜವಾಗಿ ಉಂಟಾಗುವ ತಾತ್ಕಾಲಿಕ ನಿರುದ್ಯೋಗ ಎಂದು ಹೇಳಲಾಗುವುದಿಲ್ಲ. ದೇಶಾದ್ಯಂತ ಕೋಟ್ಯಂತರ ಜನ ಅತಿ ಸ್ವಲ್ಪ ಕಾಲದಲ್ಲಿಯೇ ತಾವು ಹೊಂದಿರುವ ಗೌರವಯುತ ಸ್ವಯಂನಿರ್ಭರ ಲಘು ಜೀವನ ಕ್ರಮವನ್ನು ಕಳೆದುಕೊಂಡು ನಿರುದ್ಯೋಗಿಗಳೋ, ಅಲೆಮಾರಿಗಳೋ, ಕೂಲಿಕಾರರೋ ಆಗಿ ಮುಂದೇನು ಎಂಬುದು ಕಾಣದಾದಾಗ, ಇದೊಂದು ರಾಜಕೀಯ ಮತ್ತು ಸಾಮಾಜಿಕ ಕ್ಷೋಭೆಯಾಗಿ ಪರಿಣಮಿಸುವುದಿಲ್ಲವೆ ? ಈ ಹಿಂದೆಯೂ ಭೂಮಿಗಾಗಿ ಎಲ್ಲಿಲ್ಲದ ಧಾವಂತ ಬಂಡವಾಳ ವ್ಯವಸ್ಥೆಯಲ್ಲಿ ಕಂಡು ಬಂದಿದೆ. ಕ್ಷಿಪ್ರದಲ್ಲೇ ಸಾಮಾನ್ಯ ಕುಸಿತ ಉಂಟಾಗಿ ಬಂಡವಾಳ ವ್ಯವಸ್ಥೆಯ ವಾಣಿಜ್ಯ ಲೋಕ ತಳಮಳಗೊಂಡು, ಅಪಾರ ನಷ್ಟವಾಗುವ ಸೂಚನೆ ಸಿಕ್ಕಾಗ, ಉದ್ಯಮಿಗಳು, ಹಣವಂತರು, ಕಷ್ಟ ಕಾಲಕ್ಕೆಂದು ಭೂಮಿ, ಚಿನ್ನದಂಥ ಸ್ಥಿರಾಸ್ತಿಗಳಲ್ಲಿ ತಮ್ಮ ಹಣವನ್ನು ಹೂಡುವುದು ಪರಿಪಾಠ. ಇಂದಿನ ಈ ಪರಿಸ್ಥಿತಿಗೆ ಇದೂ ಒಂದು ಆಯಾಮವಿರಬಹುದೇ ಎಂದರೆ ಅದನ್ನು ಶೇಕಡ ೧೦ರ ಬೆಳವಣಿಗೆಯ ಸಮ್ಮೋಹಕ್ಕೆ ಮಾರು ಹೋದವರು ನಂಬದಿರಬಹುದು. ಇದಕ್ಕೆ ಮತ್ತೂ ಒಂದು ಆಯಾಮವೆಂದರೆ ಬೇಡಿಕೆಗೆ ಹೋಲಿಸಿದರೆ ಲಭ್ಯವಿರುವ ಭೂಮಿಯ ಪ್ರಮಾಣ ನಮ್ಮಲ್ಲಂತೂ ತೀರ ಕಡಿಮೆಯಾಗಿದ್ದು, ಇರುವ ಭೂಮಿಯ ಬೆಲೆ ಗಗನಕ್ಕೇರಿದೆ. ಬೆಂಗಳೂರಿನಲ್ಲಿ ಅತಿ ಹೆಚ್ಚು ಬೆಲೆ ತೆತ್ತು ಸ್ಥಿರಾಸ್ತಿಯನ್ನು ಕೊಳ್ಳುತ್ತಿರುವವರು ಈ ನಗರದಲ್ಲಿ ಮೂಲಭೂತ ಸೌಕರ್ಯಗಳಿಲ್ಲದೆ, ಬದುಕಲಾಗದೆ ವಲಸೆ ಹೋಗುವ ಪರಿಸ್ಥಿತಿ, ಭೂಮಿಯಲ್ಲಿ ಹಣ ಹೂಡಿದವರು ದಿವಾಳಿಯಾಗುವ ಪರಿಸ್ಥಿತಿ ಕೆಲವೇ ವರ್ಷಗಳಲ್ಲಿ ಕಾಣಿಸಿಕೊಂಡರೆ ಆಶ್ಚರ್ಯವಿಲ್ಲ. ಆಗಲೂ ನಷ್ಟಕ್ಕೆ ಒಳಗಾಗುವವರು ದಲ್ಲಾಳಿಗಳಲ್ಲ, ಡೆವಲಪರ್‌ಗಳಲ್ಲ, ಬಂಡವಾಳಗಾರರಲ್ಲ, ಈಗಾಗಲೆ ಅಗತ್ಯಕ್ಕೆ ಮೀರಿದಷ್ಟು ನಿವೇಶನಗಳು, ಫ್ಲಾಟ್‌ಗಳು ಬೆಂಗಳೂರು, ಮೈಸೂರು ನಗರಗಳಲ್ಲಿ ಲಭ್ಯವಿದ್ದು ಬಡ್ಡಿದರ ಮೊದಲಾದವು ವಿಪರೀತ ಹೆಚ್ಚಿ ಹೊಸ ನಿವೇಶನಗಳು, ಮನೆಗಳ ಬೆಲೆ ಕೈಗೆ ನಿಲುಕದೆ, ಅವುಗಳನ್ನು ಬೇಡುವವರೇ ಇಲ್ಲವಾಗಿದೆ ಎಂಬ ಸುದ್ದಿಯೂ ಈಗೀಗ ಹರಡುತ್ತಿದೆ. ಕಸುಬು ಕಳಕೊಂಡವರ ಏರುತ್ತಿರುವ ನಿರುದ್ಯೋಗ ಹಾಗೂ ವಿವಿಧ ರೀತಿಯ ಭೂಕಬಳಿಕೆಯ ಹಾವಳಿ ಇವೆಲ್ಲಾ ಬೆಳೆಯುತ್ತಿರುವ ಬಂಡವಾಳ ವ್ಯವಸ್ಥೆಯ ಅಂತರ್ಗತ ಬಿಕ್ಕಟ್ಟಿನ ಸೂಚನೆ. ಈ ನಿರುದ್ಯೋಗಿಗಳ ಸಮೂಹ ಅಸಂಘಟಿತವಾಗಿದೆ. ಹಾಗಾಗಿ ಪ್ರಸಕ್ತ ರಾಜಕೀಯ ಅವರ ಭಾವನೆಗಳಿಗೆ ಪ್ರತಿಸ್ಪಂದಿಸುವುದಿಲ್ಲ. ಪ್ರಗತಿಪರ ಹೋರಾಟಗಳಲ್ಲಿ ತೊಡಗಿರುವವರು ಹಲವು ರೀತಿಯಲ್ಲಿ ಭೂಮಿ ಕಳಕೊಂಡವರನ್ನು, ಕಸುಬು ಕಳಕೊಂಡವರನ್ನು ಸಂಘಟಿಸುವತ್ತ ಗಮನ ನೀಡುವುದು ಅನಿವಾರ್ಯ.

# ಪ್ರಗತಿಪರ ಶಕ್ತಿ ರಾಜಕೀಯದ ಕರ್ನಾಟಕ ಮಾದರಿ



ಕರ್ನಾಟಕ ರಾಜಕೀಯಕ್ಕೆ ತನ್ನದೇ ಆದ ಪ್ರಗತಿಪರ ಪರಂಪರೆ ಇದೆ ಎಂಬುದು ಸರ್ವವಿದಿತ. ಕರ್ನಾಟಕ ಇಂದು ಆಲೋಚಿಸಿದ್ದನ್ನು ಭಾರತ ಒಂದು ದಶಕದ ನಂತರ ಆಲೋಚಿಸುತ್ತದೆ ಎಂಬ ನಾಣ್ಣುಡಿ ನಿಜಕ್ಕೂ ಈ ಸಂದರ್ಭದಲ್ಲಿ ಸ್ತುತ್ಯರ್ಹ. ಕ್ರಾಂತಿಕಾರಿ ಬಸವಣ್ಣ, ಡಾ॥ ಲೋಹಿಯಾ, ಜಯಪ್ರಕಾಶ ನಾರಾಯಣ, ಡಾ॥ ಅಂಬೇಡ್ಕರರ ಆಲೋಚನೆಗಳಿಂದ ಪ್ರಭಾವಿತವಾಗಿ ಅವರ ಯೋಚನೆಗಳ ಸತ್ವಪರೀಕ್ಷೆಯ ಕರ್ಮಭೂಮಿ ಈ ಕರ್ನಾಟಕ.

ಆದರೆ ಇತ್ತೀಚಿನ ರಾಜಕೀಯ ಬೆಳವಣಿಗೆಗಳಿಂದ ರಾಜಕೀಯ ಸೈದ್ಧಾಂತಿಕ ವಾಹಿನಿಯ ಬಗ್ಗೆ ಜಿಜ್ಞಾಸೆ ಮೂಡದಿರದು. ನಮ್ಮ ವ್ಯವಸ್ಥೆಯಲ್ಲಿ ಅನೇಕ ಸಾಮಾಜಿಕ ಆರ್ಥಿಕ ಗುಂಪುಗಳು ತಮ್ಮದೇ ಆದ ರಾಜಕೀಯ ಪಕ್ಷಗಳ ಮೂಲಕ ತಮ್ಮ ಹಿತಾಸಕ್ತಿಗಳನ್ನು ಚಾಣಾಕ್ಷತನದಿಂದ ಸಾಧಿಸಿಕೊಳ್ಳುತ್ತವೆ. ಆದರೆ ಸಮಾಜದ, ವಿಶೇಷವಾಗಿ ನಿರ್ಲಕ್ಷಿತ ಸಮಾಜ ಗುಂಪುಗಳ ಸಮಗ್ರ ಬದಲಾವಣೆಯಾಗಬೇಕಾದರೆ ಪ್ರಸಕ್ತ ರಾಜಕೀಯ ಶಕ್ತಿಗಳ ಧ್ರುವೀಕರಣ ಅವಶ್ಯಕವೆನಿಸುತ್ತದೆ. ಈ ಸಂದರ್ಭದಲ್ಲಿ ರಾಜ್ಯದಲ್ಲಿರುವ ಪ್ರಮುಖ ರಾಜಕೀಯ ಶಕ್ತಿಗಳ ಸ್ಥೂಲ ಅವಲೋಕನ ಮಾರ್ಗದರ್ಶಿಯಾಗಬಹುದು. ಪ್ರಥಮವಾಗಿ, ದಶಕಗಳಿಂದ ಅಧಿಕಾರ ನಡೆಸಿದ ಸೆಂಟ್ರಿಸ್ಟ್ ಪಕ್ಷ ತನ್ನದೇ ಆದ ಪ್ರಗತಿಪರ ಧೋರಣೆ, ಸಿದ್ಧಾಂತಗಳನ್ನು ಹೊಂದಿದ್ದರೂ ದಿನಕಳೆದಂತೆ ಸೂಕ್ತ ರಾಜಕೀಯ ಜ್ಞಾನ/ತಿಳುವಳಿಕೆ ಇಲ್ಲದೆ ಬೆಳೆದುಬಂದ ಸ್ವಾರ್ಥ ಅವಕಾಶವಾದಿ ರಾಜಕೀಯ ಹಾಗೂ ವಂಶಪಾರಂಪರ್ಯದ ಕರಿನೆರಳಿನಿಂದ ಆ ಪಕ್ಷದ ಚಟುವಟಿಕೆಗಳು ಸಿದ್ಧಾಂತದಿಂದ ದೂರ ಸರಿದಿವೆ.

ಆದಾಗ್ಯೂ ಅದರ ಮೂಲ ಸಿದ್ಧಾಂತ ದಶಕಗಳಲ್ಲಿ ಗಾಢವಾಗಿ ಬೇರೂರಿರುವುದರಿಂದ ದಲಿತ, ಹಿಂದುಳಿದ ಹಾಗೂ ಅಲ್ಪಸಂಖ್ಯಾತರು ಇಂದಿಗೂ ಹೆಚ್ಚಿನ ಸಂಖ್ಯೆಯಲ್ಲಿ ಅದನ್ನು ಬೆಂಬಲಿಸುತ್ತ ಬಂದಿದ್ದಾರೆ. ದಲಿತ, ಹಿಂದುಳಿದ ಹಾಗೂ ಅಲ್ಪಸಂಖ್ಯಾತರ ಪಕ್ಷವಾಗಿ ಅದು ಬಹು ಹಿಂದೆಯೇ ಹೊರಹೊಮ್ಮಿದೆ ಹಾಗೂ ರಾಜ್ಯದ ಒಂದು ಬಲಿಷ್ಠ ರಾಜಕೀಯ ಶಕ್ತಿಯಾಗಿ ಉಳಿದಿದೆ. ಇದಕ್ಕೆ ಪರ್ಯಾಯವಾಗಿ ಡಾ॥ ರಾಮ ಮನೋಹರ ಲೋಹಿಯಾ, ಜಯಪ್ರಕಾಶ ನಾರಾಯಣ, ಗೋಪಾಲ ಗೌಡರ ಸಮಾಜವಾದಿ ವಿಚಾರಧಾರೆಯಿಂದ ಪ್ರಭಾವಿತವಾದ ಕರ್ನಾಟಕ ತನ್ನದೇ ಪರ್ಯಾಯವನ್ನು ಬೆಳೆಸುತ್ತ ಬಂದಿದೆ. ಸಮಾಜವಾದಿ ವಿಚಾರ ಹಾಗೂ ಚಟುವಟಿಕೆಗಳಿಂದ ಪ್ರಗತಿಪರ ಪರಂಪರೆಯನ್ನು ಕರ್ನಾಟಕದಲ್ಲಿ ಬೆಳೆಸುವ ಪ್ರಯತ್ನಗಳು ನಡೆದಿವೆ. ಈ ವಿಚಾರಧಾರೆಯಿಂದ ಮೂಡಿಬಂದ ಜನತಾ ಪಕ್ಷದ ವಿವಿಧ ರೂಪಗಳು, ಅವು ಅಧಿಕಾರದ ಹೊರಗಿದ್ದಾಗ ಸಂಘಟಿತವಾಗಿ, ಅಧಿಕಾರಕ್ಕೆ ಬಂದ ತಕ್ಷಣ ಆಂತರಿಕ, ವಿಶೇಷವಾಗಿ ವ್ಯಕ್ತಿಗತ ಭಿನ್ನಾಭಿಪ್ರಾಯಗಳಿಂದ ಕುಸಿದದ್ದೇ ಹೆಚ್ಚು. ದಮನಿತ ಜನಸಮುದಾಯಗಳ ಕಲ್ಯಾಣವನ್ನು ಘೋಷಿಸುತ್ತಲೇ ಪರೋಕ್ಷವಾಗಿ ಅಧಿಕಾರವನ್ನು ಮೇಲ್ವರ್ಗಕ್ಕೆ ಹಂಚಿಕೊಟ್ಟಿದ್ದೊಂದು ದುರಂತ. ಅದು ಇಂದಿಗೂ ಮುಂದುವರಿಯುತ್ತಿದೆಯೆಂದರೆ ತಪ್ಪಾಗಲಾರದು.

ಸಮಗ್ರ ಜನಸಮುದಾಯದ ಒಳಿತಿಗಾಗಿ ಸಮಾಜವಾದಿ ತತ್ವಾಧಾರಿತ ಶಕ್ತಿ ರಾಜಕೀಯದ ಒಂದು ಪ್ರಯತ್ನ ಇಂದು ಮತ್ತೆ ನಡೆಯಬೇಕಾಗಿದೆ. ಮೇಲ್ವರ್ಗಗಳ ಪಟ್ಟಭದ್ರ ಹಿತಾಸಕ್ತಿಗಳನ್ನು ಹೊರತುಪಡಿಸಿ ದಲಿತ, ಹಿಂದುಳಿದ, ಅಲ್ಪಸಂಖ್ಯಾತ, ರೈತ ಚಳುವಳಿ ಪರಿಸರ ಚಳುವಳಿ ಹಾಗೂ ಮಹಿಳಾ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡ ಕಾರ್ಯಕರ್ತರ ಹೊಸ ಪಡೆಯನ್ನು ಸಂಘಟಿಸುವ ಅವಶ್ಯಕತೆ ಇದೆ. ಸಮಾಜವಾದಿ ದಾರಿ ಅನೇಕ ಸಲ ಬಲಾಢ್ಯ ರೈತರ, ಬಂಡವಾಳಗಾರರ, ಪರವಾಗಿ ಮತ್ತು ಕೆಲವೇ ಕೆಲವು ಬಲಿಷ್ಠ ಮೇಲ್ಜಾತಿಗಳ ಪರವಾಗಿಯೂ ನಿಲ್ಲುವ ಸಾಧ್ಯತೆಗಳಿದ್ದು, ಅವು ಕೃಷಿ ಕಾರ್ಮಿಕರ, ಸಣ್ಣ ರೈತರ, ಶೂದ್ರಾತಿಶೂದ್ರ ಸಮುದಾಯಗಳನ್ನು ನಿರ್ಲಕ್ಷಿಸುವ ಸಾಧ್ಯತೆಗಳಿವೆ.

ಎಡಪಂಥೀಯ ಪಕ್ಷಗಳು ಇಲ್ಲಿಯವರೆಗೆ ಎಡಪರ ಅಥವಾ ಲೆಫ್ಟ್ ಆಫ್ ಸೆಂಟರ್ ಪಕ್ಷಗಳಿಗೆ ತತ್ವಾಧಾರಿತ ಬೆಂಬಲ ನೀಡುತ್ತ ಬಂದಿವೆ. ಜನಪರ ಕಳಕಳಿಯಿಂದ ಆ ದಿಶೆಯಲ್ಲಿ ಕಾರ್ಯಪ್ರವೃತ್ತವಾಗಿದ್ದು ಜಾತಿ-ಧರ್ಮಗಳೆನ್ನದೆ ಶೋಷಿತರ ಪರ ತಮ್ಮ ಧ್ವನಿ ಎತ್ತಿವೆ. ಆದಾಗ್ಯೂ ಇಲ್ಲಿಯ ಐತಿಹಾಸಿಕ ಹಾಗೂ ಸಾಮಾಜಿಕ ಪರಿಸ್ಥಿತಿಗಳಿಗನುಗುಣವಾಗಿ ಅವುಗಳು ಹೆಚ್ಚಿನ ಶಕ್ತಿಯನ್ನು ಪಡೆದುಕೊಳ್ಳಲು ಸಾಧ್ಯವಾಗಿಲ್ಲ. ಸಾಮ್ಯವಾದಿ ಸಮಾಜ ನಿರ್ಮಾಣದ ಕನಸನ್ನು ಹೊತ್ತು ಅದನ್ನು ನನಸಾಗಿಸಲು ಕಾದುಕುಳಿತಿವೆ. ಪಕ್ವ ಪರಿಸ್ಥಿತಿ ನಿರ್ಮಾಣವಾದಾಗ ಪ್ರಜಾತಾಂತ್ರಿಕ ಕ್ರಾಂತಿಯನ್ನು ಕೈಗೆತ್ತಿಕೊಳ್ಳದೆ ಬಿಡುವುದಿಲ್ಲ. ಅಂತರರಾಷ್ಟ್ರೀಯ, ತನ್ಮೂಲಕ ರಾಷ್ಟ್ರ-ರಾಜ್ಯಗಳ ಬಂಡವಾಳಶಾಹಿ ವ್ಯವಸ್ಥೆ ಹಣ್ಣಾಗುವುದಕ್ಕಾಗಿ ಅವು ಕಾದುಕುಳಿತಿವೆ. ಇಲ್ಲಿಯೂ ಕೂಡ ಸೈದ್ಧಾಂತಿಕ ಓರೆಕೋರೆಗಳು, ವೈಜ್ಞಾನಿಕ ಸಮಾಜವಾದವನ್ನು ಅರಗಿಸಿಕೊಳ್ಳದ ಮುಂದಾಳತ್ವ ಇಂತಹ ಕೊರತೆಗಳಿವೆ. ಸಧ್ಯದ ಸಂದರ್ಭದಲ್ಲಿ ಪ್ರಗತಿಪರ ಚಳುವಳಿ ಅಥವಾ ಶಕ್ತಿ ರಾಜಕಾರಣವನ್ನು ಅವು ಬೆಂಬಲಿಸುವ ಸಾಧ್ಯತೆಗಳಿದ್ದು ಅದನ್ನು ಸಮರ್ಪಕವಾಗಿ ಬಳಸಿಕೊಳ್ಳುವ ಚಾಕಚಕ್ಯತೆಯನ್ನು ಪ್ರಗತಿಪರ ಶಕ್ತಿಗಳು ಪ್ರದರ್ಶಿಸಬೇಕಾಗಿದೆ.

ಸಮಾಜವಾದಿ ಶಕ್ತಿಗಳೆಂದು ತಮ್ಮನ್ನು ತಾವು ಕರೆದುಕೊಳ್ಳುವ ಪ್ರಭಾವಶಾಲಿ ಪರಿಣಾಮಗಳನ್ನು ಬೀರದ ಗುಂಪುಗಳೂ ಕೂಡ ರಾಜ್ಯದಲ್ಲಿ ಕಾರ್ಯಪ್ರವೃತ್ತವಾಗಿವೆ. ಅವು ಕೇವಲ ವ್ಯಕ್ತಿಯಾಧಾರಿತ, ಮೇಲ್ವರ್ಗಗಳ ಪಟ್ಟಭದ್ರರ ಹಿತಾಸಕ್ತಿಗಳನ್ನು

ಅಂಬೇಡ್ಕರ್‌ವಾದಿ ದಲಿತ ಗುಂಪುಗಳು ಲೋಹಿಯಾ ಅಥವಾ ಜಯಪ್ರಕಾಶ ವಿಚಾರಧಾರೆಯ ಶಕ್ತಿಗಳೊಂದಿಗೆ ಸಹಜ ಸಂಬಂಧ ಹೊಂದಲು ಸಾಧ್ಯವಾಗಿಲ್ಲ. ಸಮಾಜವಾದಿ ಶಕ್ತಿಗಳನ್ನು ಇಂದಿಗೂ ಅಂಬೇಡ್ಕರ್ ವಾದಿಗಳು, ಗಾಂಧೀವಾದಿಗಳು, ಸನಾತನವಾದದ ಸಮರ್ಥಕರು ಎಂಬ ರೀತಿಯಲ್ಲಿಯೇ ಬಿಂಬಿಸಿವೆ. ಉತ್ತರ ಪ್ರದೇಶದಲ್ಲಿ ಹಿಂದೊಮ್ಮೆ ಬಿದ್ದುಹೋಗಿದ್ದ ಮುಲಾಯಂ-ಮಾಯಾವತಿ ಹೊಂದಾಣಿಕೆ ಇದಕ್ಕೊಂದು ಜೀವಂತ ನಿದರ್ಶನ. ಇನ್ನು ದಲಿತ-ಹಿಂದುಳಿದ ಹಾಗೂ ಅಲ್ಪಸಂಖ್ಯಾತರ ನಡುವಿನ ಸಂಬಂಧವನ್ನು ವಿಶ್ಲೇಷಿಸಿದರೆ ದಲಿತರು ಹಿಂದುಳಿದವರು ತಾವು ಹಿಂದೂಗಳೆಂದು ಹೇಳಿಕೊಳ್ಳುತ್ತ ಬಲಪಂಥೀಯ ಶಕ್ತಿಗಳ ಬೆನ್ನೆಲುಬಾಗಿ ನಿಂತಿರುವುದು ದುರಂತ.

ಡಾ॥ ರಾಜೇಂದ್ರ ಪೋದ್ದಾರ

ರಕ್ಷಣೆ ಮಾಡಿಕೊಳ್ಳುತ್ತ, ಆ ಮೂಲಕ ತಮ್ಮ ಆರ್ಥಿಕ ಹಾಗೂ ರಾಜಕೀಯ ಭದ್ರತೆಯನ್ನು ಕಾಪಾಡಿಕೊಂಡು ಬರುವಲ್ಲಿ ನಿರತವಾಗಿವೆ. ಅವುಗಳ ಸಾಮಾಜಿಕ ರಾಜಕೀಯ ಬುನಾದಿ ಶೂದ್ರಾತಿಶೂದ್ರ ಜನ ಸಮುದಾಯಗಳೇ ಆಗಿದ್ದರೂ ಅಲ್ಲಿ ಅವುಗಳಿಗೆ ಯಾವುದೇ ಸಹಜ ಸಹಭಾಗಿತ್ವ ದೊರೆತಿಲ್ಲ. ಪ್ರಸ್ತುತ ಪ್ರಗತಿಪರ ಚಳುವಳಿಗಳು ಇಂತಹ ಗುಂಪುಗಳ ಮತ ಬುನಾದಿಗೆ ಲಗ್ಗೆ ಇಡಬೇಕಾಗಿದೆ.

ಈ ಹಿಂದೆ ರಾಜ್ಯದಲ್ಲಿ ಮೂಡಿಬಂದ ರೈತ, ದಲಿತ, ಪರಿಸರ ಚಳುವಳಿಗಳು ಐತಿಹಾಸಿಕವಾದ ಛಾಪನ್ನು ಮೂಡಿಸಿದ್ದರೂ ಆಳುವ ವರ್ಗಗಳ ಷಡ್ಯಂತ್ರಗಳಿಗೆ ಬಲಿಯಾಗಿ ಛಿದ್ರವಾಗಿ ಹೇಳಹೆಸರಿಲ್ಲದಂತಾಗಿವೆ. ಆ ಕಾಲಘಟ್ಟದಲ್ಲಿ ಹೊರಹೊಮ್ಮಿದ ನಿಸ್ವಾರ್ಥ, ನಿಷ್ಠಾವಂತ ಕಾರ್ಯಕರ್ತರನೇಕರು ಇನ್ನೊಂದು ಐತಿಹಾಸಿಕ ಚಳುವಳಿಗಾಗಿ ಕಾದು ಕೂತಂತಿದೆ. ಮಣ್ಣಲ್ಲಿ ಮಣ್ಣಾಗಿ ಹೋದ ಈ ಕಾರ್ಯಕರ್ತರಿಗೆ ಸೂಕ್ತ ವೇದಿಕೆಯನ್ನು ಒದಗಿಸುವುದು ಹೊಸ ಪ್ರಯತ್ನದ ಭಾಗವಾಗಬೇಕು.



'ಶೀಘ್ರ' ಅಂದ್ರೆ ಯಾವಾಗ ? ಅಂತ ಕೇಳಲು ಲೋಕಾಯುಕ್ತರೇ ಬಂದಿದ್ದಾರೆ... ಸಾರ್ ! ಅವರನ್ನು ಒಳಗೆ ಕಳಿಸಲೇ ?

ಇನ್ನು ಜನಸಮುದಾಯಗಳು ತಮ್ಮ ಸಾಮಾಜಿಕ ಆರ್ಥಿಕ ಸ್ಥಾನಮಾನಗಳಲ್ಲಿ ಈ ಮೂಲಕ ಆಮೂಲಾಗ್ರ ಬದಲಾವಣೆಗಳ ಸಾಧ್ಯತೆಗಳನ್ನು ಕಂಡುಕೊಳ್ಳಬೇಕು. ಶೋಷಣೆ ಮುಕ್ತರಾಗಿ ಮಾನವೀಯ ಘನತೆಯಿಂದ ಬಾಳಲು ಸಾಧ್ಯ ಎಂಬ ವಿಶ್ವಾಸ ಅವರಲ್ಲಿ ಮೂಡಿಸಬೇಕಾಗಿದೆ. ಇಂದಿಗೂ ಕೂಡ ಸಮಾಜದ ಆಯಕಟ್ಟಿನ ಸ್ಥಳಗಳಲ್ಲಿ ಆಳುವ ವರ್ಗಗಳು ಬಲಾಢ್ಯವಾಗಿರುವುದರಿಂದ ಅವುಗಳನ್ನು ಎದುರಿಸಿ ವ್ಯವಸ್ಥೆಯಲ್ಲಿ ಬದಲಾವಣೆ ತರಬೇಕಾದರೆ ತ್ಯಾಗ ಅನಿವಾರ್ಯ. ಆಳುವ ವರ್ಗಗಳನ್ನು ಎದುರಿಸುವಾಗ ಬರುವ ಮುಖ್ಯಪ್ರಶ್ನೆ ಆಸ್ತಿ ಹಾಗೂ ಅವಕಾಶಗಳ ಮರುಹಂಚಿಕೆ.

ಆಳುವ ವರ್ಗಗಳನ್ನು ಎದುರಿಸುವಾಗ ಪ್ರಗತಿಪರ ಶಕ್ತಿಗಳ ಬಲಾಬಲದ ಪರೀಕ್ಷೆ ಅತ್ಯವಶ್ಯ. ಈ ಶಕ್ತಿಗಳ ಪ್ರಾಬಲ್ಯ ಹಾಗೂ ಅವುಗಳಲ್ಲಿಯ ಆಂತರಿಕ ಏಕತೆಯನ್ನು ಅಳೆಯುವಾಗ ಬಡವರು, ಅಲ್ಪ ಸಂಖ್ಯಾತರು, ಹಿಂದುಳಿದ ಹಾಗೂ ದಲಿತ ವರ್ಗಗಳ ಆಂತರಿಕ ಭೇದಗಳಿಗೆ ನಾವು ಕುರುಡರಾಗಬಾರದು.

ಅಂಬೇಡ್ಕರ್‌ವಾದಿ ದಲಿತ ಗುಂಪುಗಳು ಲೋಹಿಯಾ ಅಥವಾ ಜಯಪ್ರಕಾಶ ವಿಚಾರಧಾರೆಯ ಶಕ್ತಿಗಳೊಂದಿಗೆ ಸಹಜ ಸಂಬಂಧ ಹೊಂದಲು ಸಾಧ್ಯವಾಗಿಲ್ಲ. ಸಮಾಜವಾದಿ ಶಕ್ತಿಗಳನ್ನು ಇಂದಿಗೂ ಅಂಬೇಡ್ಕರ್‌ವಾದಿಗಳು, ಗಾಂಧೀವಾದಿಗಳು, ಸನಾತನವಾದದ ಸಮರ್ಥಕರು ಎಂಬ ರೀತಿಯಲ್ಲಿಯೇ ಬಿಂಬಿಸಿವೆ. ಉತ್ತರ ಪ್ರದೇಶದಲ್ಲಿ ಹಿಂದೊಮ್ಮೆ ಬಿದ್ದುಹೋಗಿದ್ದ ಮುಲಾಯಂ-ಮಾಯಾವತಿ ಹೊಂದಾಣಿಕೆ ಇದಕ್ಕೊಂದು ಜೀವಂತ ನಿದರ್ಶನ. ಇನ್ನು ದಲಿತ-ಹಿಂದುಳಿದ ಹಾಗೂ ಅಲ್ಪಸಂಖ್ಯಾತರ ನಡುವಿನ ಸಂಬಂಧವನ್ನು ವಿಶ್ಲೇಷಿಸಿದರೆ – ದಲಿತರು ಹಿಂದುಳಿದವರು ತಾವು ಹಿಂದೂಗಳೆಂದು ಹೇಳಿಕೊಳ್ಳುತ್ತ ಬಲಪಂಥೀಯ ಶಕ್ತಿಗಳ ಬೆನ್ನೆಲುಬಾಗಿ ನಿಂತಿರುವುದು ದುರಂತ. ಅದೇ ವೇಳೆ ಅಲ್ಪಸಂಖ್ಯಾತರೂ ಅಲ್ಲಿನ ಆಂತರಿಕ ಮೂಲಭೂತವಾದಿಗಳಿಂದಾಗಿ ಪ್ರಜಾಸತ್ತಾತ್ಮಕ ಅಥವಾ ಉದಾರ ಧೋರಣೆಯನ್ನು ತೋರದೆ, ರಾಜಕೀಯ ಮುಖ್ಯವಾಹಿನಿಯೊಂದಿಗೆ ಗುರುತಿಸಿಕೊಳ್ಳದೆ, ಚುನಾವಣೆ ಬಂದಾಗ ಒಂದು ಪಕ್ಷ/ಅಭ್ಯರ್ಥಿಯ ಸೋಲು ಗೆಲುವನ್ನು ನಿರ್ಧರಿಸುವ 'ವೋಟ್ ಬ್ಯಾಂಕ್' ಆಗಿ ಮಾತ್ರ ಕಾರ್ಯನಿರ್ವಹಿಸಿ ಮತ್ತೆ ಮುಂದಿನ ಚುನಾವಣೆವರೆಗೆ ನೇಪಥ್ಯಕ್ಕೆ ಸರಿಯುತ್ತವೆ. ತಾವು ಹಿಂದುಗಳೆಂದು ಪರಿಗಣಿಸಿಕೊಳ್ಳುವ ದಲಿತ ಹಿಂದುಳಿದ ಜನ ತಮ್ಮ ವಿಮೋಚನೆಗಾಗಿ ಹೋರಾಡುತ್ತ, ಶತಮಾನಗಳಿಂದ ಈ ಜನಾಂಗವನ್ನು ಶೋಷಿಸಿದ, ಈಗ ಅಲ್ಪಸಂಖ್ಯಾತರನ್ನು ಹುರಿದು ಮುಕ್ಕುವ, ಬಲಪಂಥೀಯ ವೈದಿಕ ಶಕ್ತಿಗಳೊಂದಿಗೆ ಕೈಜೋಡಿಸಿದರೆ ಅದಾವ ಐಕ್ಯತೆಯನ್ನು ನಾವು ಕಾಣಬಹುದು ? ಇಲ್ಲಿ ಹೇಗೆ ಐಕ್ಯತೆಯನ್ನು ಸಾಧಿಸಬಹುದು ಎಂಬುದು ಚಿಂತನಾರ್ಹ. ಈ ವಿವಿಧ ಗುಂಪುಗಳ ಮಧ್ಯೆ ಇರುವ ಭಿನ್ನಾಭಿಪ್ರಾಯಗಳು ವಸ್ತುನಿಷ್ಠ ಹಾಗೂ ಸಹಜವಾಗಿರುವುದರಿಂದ ಐಕ್ಯತೆ ಮರೀಚಿಕೆಯಾಗಬಹುದೆ ? ಅಥವಾ ಶೋಷಿತರ ಸಮಾನ ವರ್ಗ ಹಿತಾಸಕ್ತಿಗಳ ರಕ್ಷಣೆ ಹಿತದೃಷ್ಟಿಯಿಂದ, ಸೂಕ್ತ ರಾಜಕೀಯ ತರಬೇತಿಯಿಂದ ಹಾಗೂ ಚಟುವಟಿಕೆಗಳಿಂದ ಈ ಐಕ್ಯತೆಯನ್ನು ಸಾಧಿಸಬಹುದೆ ?

ಇನ್ನೊಂದು ಮುಖ್ಯ ಅಂಶ ವಿವಿಧ ಹಿತಾಸಕ್ತಿ ಹಾಗೂ ಆಂತರಿಕ ಭಿನ್ನಾಭಿಪ್ರಾಯಗಳನ್ನು ಹೊಂದಿರುವ ಗುಂಪುಗಳನ್ನು ವರ್ಗ ಸಂಘರ್ಷದ ಮಾದರಿಯಲ್ಲಿ ಸಂಘಟಿಸಬೇಕೇ ವಿನಾ ಜಾತಿಯಾಧಾರದ ಮೇಲಲ್ಲ. ಈಗ ಅಸ್ತಿತ್ವದಲ್ಲಿರುವ ವಿವಿಧ ಜಾತಿ-ಉಪಜಾತಿಗಳ ಆಧಾರದ ಮೇಲೆಯೇ ಸಂಘಟನೆ ಕಟ್ಟುವುದಾದರೆ ಅದು ಕೇವಲ ಗುಂಪುಗಳ ಹಾಗೂ ಆ ಗುಂಪುಗಳ ಪ್ರಭಾವಿ ವ್ಯಕ್ತಿಗಳ ಕೊಡುಕೊಳ್ಳುವ ಶಕ್ತಿಯನ್ನು ಹೆಚ್ಚಿಸಲು ಆಸ್ಪದ ಮಾಡಿ ಕೊಡುವ ಷಡ್ಯಂತ್ರವಾಗುತ್ತದೆ ವಿನಾ ನಿಜವಾದ ಸಾಮಾಜಿಕ ನ್ಯಾಯದ ಸಾಧನವಾಗದು. ಇನ್ನೂ ಒಂದು ಹೆಜ್ಜೆ ಮುಂದೆ ಹೋದರೆ ಅದು ಜನಾಂಗೀಯ ಸಂಘರ್ಷಕ್ಕೆ ಎಡೆ ಮಾಡಿ ಕೊಡಲೂಬಹುದು. ಇಂತಹ ಆಂತರಿಕ ಕಾಂಟ್ರಡಿಕ್ಷನ್‌ಗಳನ್ನು ಪರಿಹರಿಸಿ ಎಡಪಂಥೀಯ, ಸಮಾಜವಾದಿ ಶಕ್ತಿ ಹಾಗೂ ರಾಜಕೀಯ ಸಂಘಟನೆ ಇಂದು ಕರ್ನಾಟಕಕ್ಕೆ ಐತಿಹಾಸಿಕ ಅವಶ್ಯಕತೆಯಾಗಿದೆ. ಈ ಕೂಗಿಗೆ ಓಗೊಟ್ಟು ಶೋಷಿತ ಜನಸಮುದಾಯದ ಕಲ್ಯಾಣ ಬಯಸುವ ಸಮಾಜವಾದಿಗಳು, ಪ್ರಗತಿಪರರು, ರೈತ, ಮಹಿಳಾ ಹಾಗೂ ಪರಿಸರ ಚಳುವಳಿಗಾರರು ಒಂದೆಡೆ ಸೇರಿ ತಳಮಟ್ಟದಿಂದ ಸಂಘಟನೆಗೆ ಒಂದಾಗಬೇಕಿದೆ.

ವೈಜ್ಞಾನಿಕವಾದ ಚಳುವಳಿ ಹಾಗೂ ಶಕ್ತಿ ರಾಜಕಾರಣಕ್ಕೆ ಕೆಲವು ಸ್ಪಷ್ಟ ಉದ್ದೇಶ ಹಾಗೂ ಕಾರ್ಯಕ್ರಮಗಳಿರಬೇಕಾಗುತ್ತದೆ. ಅವು ಈ ರೀತಿಯಾಗಿರಬಹುದು :

೧. ಆಸ್ತಿ ಒಡೆತನ ಹಾಗೂ ಅವಕಾಶಗಳ ಮರುಹಂಚಿಕೆಯ ಉದ್ದೇಶ ಹಾಗೂ ಸೂಕ್ತ ಕಾರ್ಯವಿಧಾನಗಳನ್ನು ಸ್ಪಷ್ಟಪಡಿಸಬೇಕು.
೨. ಜಾಗತೀಕರಣ ಹಾಗೂ ಉದಾರೀಕರಣದ ಸಂದರ್ಭದಲ್ಲಿ ಈ ಚಳುವಳಿ ಆರ್ಥಿಕ ನೀತಿಯ ಬಗ್ಗೆ ನಿಲುವನ್ನು ಸ್ಪಷ್ಟಪಡಿಸಬೇಕು.
೩. ಮುಖಂಡರುಗಳು ಯಾವುದೇ ಜಾತಿ-ಉಪಜಾತಿಗಳ ಸಮಾವೇಶ, ಸಮಾರಂಭಗಳಲ್ಲಿ ಭಾಗವಹಿಸತಕ್ಕದ್ದಲ್ಲ.
೪. ಜಾತ್ಯತೀತ ವಿವಾಹಗಳ ಪ್ರಚೋದನೆ ಹಾಗೂ ರಕ್ಷಣೆಗೆ ಕಂಕಣಬದ್ಧರಾಗಿರಬೇಕು.
೫. ವರ್ಗ ಸಂಘರ್ಷದ ಐಕ್ಯತೆಗೆ ಮಾರಕವಾಗುವ ಐತಿಹಾಸಿಕ ವ್ಯಕ್ತಿ ಹಾಗೂ ಘಟನೆಗಳು ಮತ್ತು ಅವುಗಳಲ್ಲಿರಬಹುದಾದ ಭಿನ್ನಾಭಿಪ್ರಾಯಗಳ ವೈಭವೀಕರಣ ನಿಲ್ಲಬೇಕು.
೬. ಸಮಾಜದ ಎಲ್ಲ ಜಾತಿ, ಧರ್ಮಗಳಲ್ಲಿರುವ ಕಡುಬಡವರನ್ನು ಹಾಗೂ ಶೋಷಿತರನ್ನು ವರ್ಗ ಸಂಘರ್ಷದ ವಾಹಿನಿಯಲ್ಲಿ ಸೇರಿಸಿಕೊಳ್ಳಬೇಕು.
೭. ಪ್ರಗತಿಪರರು ಹಾಗೂ ಪ್ರಜ್ಞಾವಂತರು ಅವಕಾಶ ವಂಚಿತ ಶೋಷಿತನ ಆಂತರ್ಯದಲ್ಲಿ ಸುಪ್ತಾವಸ್ಥೆಯಲ್ಲಿ ಹುದುಗಿ ಕುಳಿತಿರುವ ಶೋಷಕನ ಬಗ್ಗೆ ಜಾಗೃತರಾಗಬೇಕು.
೮. ಜಾತಿ ರಾಜಕಾರಣದ ಮೂಲಕ ದಮನಿತ ಜಾತಿ ಜನರಲ್ಲಿ ಜಾತಿಪ್ರಜ್ಞೆಯನ್ನು ಜೀವಂತವಾಗಿರಿಸಿ ಸಾಮಾಜಿಕ ಅಭದ್ರತೆ ಮೂಡಿಸುತ್ತ ಆ ಸಮುದಾಯಗಳನ್ನು ಕಪಿಮುಷ್ಟಿಯಲ್ಲಿ ಹಿಡಿದುಕೊಂಡಿರುವ ಪುಢಾರಿಗಳ ಬಗ್ಗೆ ನಿರ್ಭಿಡೆಯಿಂದ ಜನಜಾಗೃತಿ ಮೂಡಿಸಬೇಕು.
೯. ಎಲ್ಲ ಉದ್ದೇಶಿತ ಗುರಿಗಳನ್ನು ಅಹಿಂಸಾತ್ಮಕ ಚಳುವಳಿಗಳ ಚೌಕಟ್ಟಿನೊಳಗೆ ಸಾಧಿಸತಕ್ಕದ್ದು.

ಭಾರತ ಮುಂದಿನ ದಶಕಗಳಲ್ಲಿ ಮಾದರಿಯನ್ನಾಗಿಸಿಕೊಳ್ಳಬಹುದಾದ ಒಂದು ಪ್ರಗತಿಪರ ರಾಜಕೀಯ ಶಕ್ತಿ ಸಂಘಟನೆಯನ್ನು ಇಂದು ಹುಟ್ಟುಹಾಕುವ ಶಕ್ತಿ ಕರ್ನಾಟಕದ ಈ ಮಣ್ಣಿನಲ್ಲಿದೆ ಎಂದು ಇತಿಹಾಸ ಸಾರಿ ಹೇಳುತ್ತಿರುವಂತೆಯೇ ಆ ವಿಶ್ವಾಸ ಕೂಡ ನಮ್ಮಲ್ಲಿ ಬೆಳೆಸಿಕೊಳ್ಳಬೇಕಾಗಿದೆ.

**ಡಾ|| ರಾಜೇಂದ್ರ ಪೋದ್ದಾರ**
ಕೃಷಿ ಮಹಾವಿದ್ಯಾಲಯ, ವಿಜಾಪುರ - ೫೮೬ ೧೦೧

# ಮತಶ್ರದ್ಧೆಯ ಆಧುನಿಕ ಸ್ವರೂಪ

ಇಂದು ಮತಶ್ರದ್ಧೆ ಜಗತ್ತಿನ ಪ್ರಮುಖ ಧರ್ಮಾವಲಂಬಿಗಳಲ್ಲಿ ಸಂಸ್ಕೃತಿಯ ಒಂದಂಗವಾಗಿದೆ, ವರ್ತಮಾನ ಕಾಲದ ಆಗುಹೋಗುಗಳನ್ನು ಪ್ರಭಾವಿಸುವ ಹಾಗೂ ನಿಯಂತ್ರಿಸುವ ಕಾರ್ಯದಲ್ಲಿ ನಿರತವಾಗಿದೆ, ಬಹುಸಂಸ್ಕೃತಿಗಳ ನಾಡಿನ ಸಮಾಜದಲ್ಲಿ ಸರ್ವ ಸಮುದಾಯಗಳ ಪ್ರತ್ಯೇಕ ಅಸ್ತಿತ್ವ, ವಿಶಿಷ್ಟತೆಗಳಿಗೆ ಧಕ್ಕೆ ಒದಗದ, ಸ್ವಾತಂತ್ರ್ಯ-ಹಕ್ಕುಗಳಿಗೆ ಚ್ಯುತಿಬಾರದ ಚಿಂತನಾಕ್ರಮ ಕಟ್ಟಿಕೊಳ್ಳಬೇಕಾದ ಅಗತ್ಯವನ್ನು ಸಾರಿಹೇಳುತ್ತಿದೆ.

**ಡಾ|| ಶ್ರೀಧರ ಪಿಸ್ಸೆ**

**ಆ**ಧುನಿಕ ಜಗತ್ತು ಮೇಲುನೋಟಕ್ಕೆ ಧರ್ಮ ನಿರಪೇಕ್ಷ ಜಗತ್ತು. ಆದರೆ ಇಂದು ಜರುಗುತ್ತಿರುವ ಘಟನೆಗಳು ವಾಸ್ತವ ಸ್ಥಿತಿ ಭಿನ್ನವೆಂದು ಹೇಳುತ್ತಿವೆ. ತೋರಿಕೆಯ ಸತ್ಯಕ್ಕೂ ವಾಸ್ತವ ಸತ್ಯಕ್ಕೂ ಅಂತರ ಉಂಟುಮಾಡಿವೆ. ಈ ಗೊಂದಲ ಸ್ಥಿತಿ ಭ್ರಮಾಧೀನ ಸತ್ಯಗಳನ್ನೇ ವಾಸ್ತವ ಸತ್ಯವೆಂದು ನಂಬಿಸಲಿದೆ. ಗೊಂದಲ ನಿವಾರಣೆ ಮೂಲಕ ತೋರಿಕೆಯ ಭ್ರಮಾಧೀನ ಸತ್ಯದಿಂದ ದಾರಿ ತಪ್ಪುವ ಸ್ಥಿತಿ ದೂರ ಮಾಡಿಕೊಳ್ಳಬಹುದು, ನಮ್ಮ ಜೀವನ ವಾಸ್ತವ ನೆಲೆಗಟ್ಟನ್ನು ಆಧರಿಸಿದೆ ಎಂದು ನಂಬಬಹುದು; ನಾಳೆ ಕುರಿತ ಚಿಂತನೆ ವಾಸ್ತವ ಹಳಿಯ ಮೇಲೆ ನಡೆಸಲು ಸಾಧ್ಯವೆಂದು ಭರವಸೆ ತಾಳಬಹುದು. ಆದರೂ ಇದು ಅಷ್ಟು ಸರಳವಾದ ಸಮಸ್ಯೆಯಲ್ಲ. ಗೊಂದಲ-ಸ್ಪಷ್ಟತೆ, ಮೇಲುನೋಟದ ಸತ್ಯ – ವಾಸ್ತವ ಸತ್ಯ, ಆಧುನಿಕತೆ-ಆಧುನಿಕವಲ್ಲದ್ದು, ಧರ್ಮನಿರಪೇಕ್ಷ-ಮತೀಯತೆ, ಜೀವನ ಶ್ರದ್ಧೆ-ಮತಶ್ರದ್ಧೆಗಳ ವಿರುದ್ಧ ಸೆಳೆತದಲ್ಲಿ ಸರಿ ಬದುಕು ಅರಿವುದಾದರೂ ಹೇಗೆ? ಈ ಹಿನ್ನೆಲೆಯಲ್ಲಿ ಕ್ರಿಶ್ಚಿಯನ್, ಇಸ್ಲಾಂ ಮತ್ತು ಹಿಂದೂ ಮತ-ಧರ್ಮಗಳ ಸ್ಥಿತಿಗತಿಗಳನ್ನು ಆಲೋಚಿಸಬಹುದಾಗಿದೆ.

**ಕ್ರೈಸ್ತ ಮತಶ್ರದ್ಧೆ:** ಜಾಗತಿಕ ಮಟ್ಟದಲ್ಲಿ ಇಂದು ವಿಧ್ವಂಸಕ ಕೃತ್ಯಗಳು ನಿರಂತರವಾಗಿ ನಡೆಯುತ್ತಿವೆ. ಕ್ರಿಶ್ಚಿಯನ್ ಮತ ವಿವಾದಕ್ಕೆ ಎಡೆಯಿಲ್ಲದಂತೆ ಮತ ಪ್ರಚಾರವನ್ನು ಎಚ್ಚರದಿಂದ ಅನುಸರಿಸುತ್ತಿದೆ. ಯೋಜಿತ ಹಾಗೂ ಕ್ರಮಬದ್ಧ ರೀತಿಯಲ್ಲಿ ಮಧ್ಯ ಯುಗದಲ್ಲಿ ಸಕ್ರಿಯವಾಗಿದ್ದಷ್ಟೇ ಪ್ರಮಾಣದಲ್ಲಿ ಇಂದಿಗೂ ನಡೆಸುತ್ತಿದೆ. ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಜಾಗತಿಕ ಮಟ್ಟದ ಹಿಂಸಾಕೃತ್ಯಗಳಿಗೆ ಕಾರಣವಾಗಿದೆ. ಕ್ರೈಸ್ತಮತದ ವರಿಷ್ಠ ಧರ್ಮಾಧಿಕಾರಿ ಎರಡನೆಯ ಜಾನ್ ಪಾಲ್ ಪೋಪ್ ಐದು ವರ್ಷಗಳ ಹಿಂದೆ ಭಾರತಕ್ಕೆ ಭೇಟಿ ನೀಡಿದ್ದರು. ಇಪ್ಪತ್ತೊಂದನೆಯ ಶತಮಾನದಲ್ಲಿ ಏಷ್ಯಾ ಖಂಡವನ್ನು ಕ್ರಿಶ್ಚಿಯನ್ ಖಂಡವನ್ನಾಗಿ ಪರಿವರ್ತನೆ ಮಾಡುವ ಮಾತಾಡಿದರು. ಯೂರೋಪಿನ ಅನ್ವೇಷಕರು ಪ್ರಪಂಚದ ಭೂಭಾಗಗಳನ್ನು ಕಂಡುಹಿಡಿದ ಸಂದರ್ಭದಲ್ಲಿ ಕ್ರೈಸ್ತ ಮತದ ಈ ಪ್ರವೃತ್ತಿ ಜಗತ್ತಿನ್ನೆಲ್ಲೆಡೆ ವ್ಯಾಪಕವಾಯಿತು. ಅಮೆರಿಕಾ, ಆಸ್ಟ್ರೇಲಿಯಾ, ಆಫ್ರಿಕಾ ಖಂಡಗಳಲ್ಲದೆ ವೆಸ್ಟ್ ಇಂಡೀಸ್‌ನಂಥ ಸಣ್ಣಪುಟ್ಟ ದ್ವೀಪಗಳನ್ನು ಒಳಗೊಂಡು ಕ್ರೈಸ್ತರು ಪ್ರಪಂಚದ ಯಾವುದೇ ಭೂಭಾಗಕ್ಕೆ ಹೋದರೂ ಅಲ್ಲಿಯ ಸ್ಥಳೀಯರನ್ನು ಕ್ರೈಸ್ತಮತಕ್ಕೆ ಮತಾಂತರಿಸಿದರು. ಅವರಿಗೊಂದು ಚರ್ಚ್ ಸ್ಥಾಪಿಸಿ, ಪಾದ್ರಿಯನ್ನು ನೇಮಿಸಿ ಹಿಂತಿರುಗಿದರು. ಕ್ರೈಸ್ತಮತ ಪ್ರಚಾರದ ಭರಾಟೆ ಯೂರೋಪಿನ ರಾಜಕೀಯ ಯಶಸ್ಸಿನೊಂದಿಗೆ ತಳಕು ಹಾಕಿಕೊಂಡಿತು. ಕ್ರೈಸ್ತಮತ ತನ್ನ ರಾಜಕೀಯ ಬಲದಿಂದ ಪ್ರಪಂಚದ ನಾನಾ ಧರ್ಮಗಳನ್ನು, ಸಂಸ್ಕೃತಿಗಳನ್ನು ನಿರ್ನಾಮ ಮಾಡಿ ಅಲ್ಲಿ ಸ್ವಮತವನ್ನು ಸ್ಥಾಪಿಸಿತು. ಇದು ಅದರ ಧಾರ್ಮಿಕ ಕ್ರೌರ್ಯ ಮತ್ತು ಮತೀಯತೆಯ ಚಹರೆ. ಮಾನವನು ತನಗೆ ಸರಿ ಅನಿಸಿದ ಆಚಾರ-ವಿಚಾರಗಳನ್ನು, ತನ್ನ ಸಮಾಜದ ರೂಢಿಗತ ನಂಬಿಕೆ-ಪದ್ಧತಿಗಳನ್ನು ಅನುಸರಿಸುವ ಮತ್ತು ತನಗೆ ಸರಿ ಕಾಣದ ಜೀವನ ಪದ್ಧತಿಯನ್ನು ನಿರಾಕರಿಸಿ ಆತ್ಮಗೌರವದ ಬದುಕು ನಡೆಸುವ ಸ್ವಾತಂತ್ರ್ಯ ಮತ್ತು ಹಕ್ಕು ಪಡೆದಿದ್ದಾನೆ. ಅವನಿಗೆ ಮತ್ತೊಬ್ಬರು ಆಸೆ ಆಮಿಷಗಳಿಂದ ಮರುಳು ಗೊಳಿಸುವುದು ಅಥವಾ ಪ್ರತಿಬಂಧ ಹೇರುವುದು – ಇವೆರಡೂ ಯಾವುದೇ ಮತವೊಂದರ ಮತೀಯ ಗುಣವೇ ಆಗಿದೆ. ಈ ಚಿತ್ರಣವನ್ನು ಚಿನುವಾ ಅಚಿಬೆಯ 'ಥಿಂಗ್ಸ್ ಫಾಲ್ ಅಪಾರ್ಟ್' ಕಾದಂಬರಿ ಕಟ್ಟಿ ಕೊಡುತ್ತದೆ. ಸ್ಥಳೀಯ ಜನತೆಯ ಧರ್ಮ, ಭಾಷೆ ಮತ್ತು ಸಂಸ್ಕೃತಿಯನ್ನು ಜಗತ್ತಿನ ಬಹುಭಾಗಗಳಲ್ಲಿ ನಾಶ ಮಾಡುತ್ತ ಬಂದಿರುವ ಕ್ರೈಸ್ತಮತ ಪ್ರಚಾರವು ಯೋಜನೆಯ ವಿಧ್ವಂಸಕ ಶಕ್ತಿ ಮತ್ತದರ ಕಾರ್ಯ ಸ್ವರೂಪವನ್ನು ಪರಿಚಯ ಮಾಡಿಕೊಡುತ್ತದೆ. ಅಂದರೆ ಪಾಶ್ಚಾತ್ಯ ಸಂಸ್ಕೃತಿ ಗಟ್ಟಿ ದನಿಯಲ್ಲಿ ಪ್ರತಿಪಾದಿಸಿಕೊಂಡು ಬಂದಿರುವ ಮಾನವ ಸ್ವಾತಂತ್ರ್ಯ ಮತ್ತು ಹಕ್ಕುಗಳನ್ನು ತಾನೇ ಹತ್ತಿಕ್ಕಿದೆ. ಜಗತ್ತಿನ ಭಿನ್ನ ಪ್ರದೇಶಗಳ ಸ್ವಭಾವ, ಸ್ವರೂಪಕ್ಕನುಗುಣವಾಗಿ ಮೈದೋರಿದ್ದ ಬಹುರೂಪಿ ಸಂಸ್ಕೃತಿಯನ್ನು ಏಕರೂಪಕ್ಕಿಳಿಸುವ ಸಾಹಸಕ್ಕೆ ಕೈ ಹಾಕಿ



ಮೇಲುಗೈ ಸಾಧಿಸಿದೆ; ಜಗತ್ತಿನ ಸ್ಥಳೀಯ ಸಂಸ್ಕೃತಿಯ ಪ್ರತ್ಯೇಕ ಅಸ್ತಿತ್ವವನ್ನು ನಾಶಪಡಿಸಿದೆ.

ಕ್ರೈಸ್ತಮತಕ್ಕೆ ಇಂತಹ ಹಪಾಹಪಿತನ ಒದಗಿ ಬಂದದ್ದಾದರೂ ಏತಕ್ಕೆ ? ಧಾರ್ಮಿಕ ಪುನರುತ್ಥಾನ, ವೈಜ್ಞಾನಿಕ ಬೆಳವಣಿಗೆ ಮತ್ತು ಪ್ರಪಂಚದ ಭೂಭಾಗಗಳ ಅನ್ವೇಷಣೆ ಐರೋಪ್ಯ ದೇಶಗಳಲ್ಲಿ ಏಕಕಾಲಕ್ಕೆ ನಡೆದವು. ಅವುಗಳ ಪರಸ್ಪರ ಸಂಬಂಧ ಮತ್ತು ಒತ್ತಡ ಈ ಪ್ರಕ್ರಿಯೆಗೆ ಕಾರಣವಾಗಿರಬಹುದು. ಕ್ರೈಸ್ತಮತವು ತನ್ನನ್ನು ಸರ್ವ ವ್ಯಾಪಕ ಮತಧರ್ಮವಾಗಿ ಕಲ್ಪಿಸಿಕೊಳ್ಳುವುದಕ್ಕೂ ಅದನ್ನು ವಾಸ್ತವಗೊಳಿಸಲು ಅನುಸರಿಸಿದ ಕಾರ್ಯ ಸ್ವರೂಪಕ್ಕೂ ಯೂರೋಪಿನ ರಾಜಕಾರಣಕ್ಕೂ ನಿಕಟ ಸಂಬಂಧವಿರಬಹುದು. ಸರ್ವವ್ಯಾಪಕ ಅಸ್ತಿತ್ವದ ಮೂಲಕ ಅಧಿಕಾರ ಸ್ಥಾಪನೆಯ ಕಲ್ಪನೆ, ಮತಪ್ರಸಾರಕ ಮಾರ್ಗೋಪಾಯಗಳು, ಸೇವಾ ಮನೋಧರ್ಮದ ಮುಸುಕು – ಇವೆಲ್ಲ ಕ್ರೈಸ್ತಮತದ ರಾಜಕೀಯ ಮುತ್ಸದ್ದಿತನವಾಗಿದೆ. ಆದರೂ ಸಂಸ್ಕೃತಿಯೊಂದರ ಆಕ್ರಮಣಕಾರಿ ಸ್ವರೂಪವನ್ನು ಪರಿಚಯಿಸಿಕೊಡುತ್ತದೆ. ಯಾವುದೇ ಮತ ಧರ್ಮಕ್ಕೆ ತನ್ನ ಅಸ್ತಿತ್ವದ ಪ್ರಶ್ನೆ ಪ್ರಧಾನವಾಗುವ ಬಿಂದು ಯಾವುದು ? ಅದು ತನ್ನನ್ನು ಸದಾ ಜೀವಂತವಾಗಿಟ್ಟುಕೊಳ್ಳಲು ಏಕೆ ಹಪಹಪಿಸುತ್ತದೆ ? ಪ್ರತಿಯೊಂದು ಧರ್ಮವೂ ತಾನು ಮಾನವನ ಉದ್ಧಾರಕ್ಕಾಗಿಯೇ ಹುಟ್ಟಿರುವುದೆಂದು ಸಾರುತ್ತದೆ. ಎಲ್ಲವೂ ತನ್ನ ಅಧೀನದಲ್ಲಿ ತನ್ನ ಪಾರಮ್ಯವನ್ನು ಮಾನ್ಯ ಮಾಡಬೇಕು, ತನ್ನಲ್ಲೇ ಶ್ರದ್ಧೆಹೊಂದಿ ತನ್ನ ಒಡೆತನ ಒಪ್ಪಿಕೊಳ್ಳಬೇಕು, ತಾನು ಮಾತ್ರ ಮಾನವ ಸಮಾಜವನ್ನು ಆಳಬೇಕು ಎಂಬ ನಿಲುವು ತಳೆದಿದೆ. ಜಗತ್ತಿನ ಬಹುಪಾಲು ಭಾಗಗಳಲ್ಲಿ ಸ್ಥಳೀಯ ಬುಡಕಟ್ಟುಗಳನ್ನು ತನ್ನ ಮತಕ್ಕೆ ಮತಾಂತರಗೊಳಿಸುವಲ್ಲಿ ತಳೆದ ಕಠಿಣ ನಿಲುವು ಮತ್ತು ಅನುಸರಿಸಿದ ಅಮಾನವೀಯ ತಂತ್ರಗಳು ಕ್ರೈಸ್ತಮತದ ಜೀವಪ್ರೀತಿಯನ್ನಾಗಲೀ ಮಾನವ ಪ್ರೀತಿಯನ್ನಾಗಲೀ ಎತ್ತಿಹಿಡಿಯುವುದಿಲ್ಲ; ಪ್ರಜಾಪ್ರಭುತ್ವ ಸ್ಥಾಪಕ ದೇಶವೊಂದರ ಧರ್ಮವಾಗಿ ಭಿನ್ನ ಸಂಸ್ಕೃತಿಗಳ ಬಗ್ಗೆ ಸಹನೆ ತೋರಿದುದಾಗಲಿ ಭಿನ್ನತೆಯನ್ನು ಮಾನ್ಯ ಮಾಡಿದುದಾಗಲಿ ಸಾರಿಹೇಳುವುದಿಲ್ಲ. ಇದೊಂದು ಸಾಂಸ್ಕೃತಿಕ ಆಕ್ರಮಣ ಅಥವಾ ಅನ್ಯ ಸಂಸ್ಕೃತಿ ನಾಶಗೊಳಿಸುವ ಪ್ರಕ್ರಿಯೆಯಲ್ಲದೆ ಬೇರೇನೂ ಅಲ್ಲ.

ಆಧುನಿಕ ಚಿಂತನೆಗಳ ಮೂಲಕ ಮತಪ್ರಚಾರದ ಅವಕಾಶಗಳನ್ನು ಕ್ರೈಸ್ತ ಮತೀಯತೆ ಸೃಷ್ಟಿಸಿಕೊಂಡಿದೆ. ಸಕಾರಾತ್ಮಕ ದೃಷ್ಟಿಕೋನ ಮತ್ತು ದ್ವಂದ್ವಾತ್ಮಕತೆಯನ್ನು ಏಕಮುಖಿಗೊಳಿಸುವ ಪರಿಣಾಮವಾಗಿ ಈ ಧೋರಣೆ ಮೂಡಿದೆ. ಈ ಪ್ರಕ್ರಿಯೆ ಸಾಂಸ್ಕೃತಿಕ ಸಂಕುಚಿತ ದೃಷ್ಟಿಕೋನ, ಕ್ರೌರ್ಯ ಹಾಗೂ ಪಾತಕಗುಣಗಳನ್ನು ಕಳೆದುಕೊಳ್ಳದೆ ಆಧುನಿಕ ಮುಖವಾಡ ಧರಿಸಿಕೊಂಡು ವೈರುದ್ಧ್ಯಾತ್ಮಕ ಮತ್ತು ದ್ವಂದ್ವಾತ್ಮಕ ರೂಪ ಪಡೆದಿದೆ. ಕುವೆಂಪು ಅವರು ತಮ್ಮ ಕಾದಂಬರಿಗಳಲ್ಲಿ ಆಧುನಿಕತೆ ತನ್ನೊಂದು ಕೈಯಲ್ಲಿ ಕ್ರೈಸ್ತಮತವನ್ನೂ ಮತ್ತೊಂದು ಕೈಯಲ್ಲಿ ಅಭಿವೃದ್ಧಿಯನ್ನೂ ತಂದೊಡ್ಡುವ ಕ್ರಮವನ್ನು ಎಚ್ಚರದ ದನಿಯಲ್ಲಿ ನಿರೂಪಿಸಿರುವುದು ಕನ್ನಡ ಓದುಗರಿಗೆ ತಿಳಿದ ವಿಷಯವೇ ಆಗಿದೆ.

**ಇಸ್ಲಾಂ ಮತಶ್ರದ್ಧೆ:** ಇಸ್ಲಾಂ ಜಾಗತಿಕ ಮಟ್ಟದಲ್ಲಿ ತನ್ನ ಅಸ್ತಿತ್ವಕ್ಕಾಗಿ ಹೋರಾಟ ನಡೆಸುತ್ತಿದೆ. ಈ ಉದ್ದೇಶ ಈಡೇರಿಸಿಕೊಳ್ಳಲು ಜೆಹಾದ್ ಮತ್ತು ಭಯೋತ್ಪಾದನೆಯನ್ನು ಅವಲಂಬಿಸಿದೆ. ಈ ಮೂಲಕ ತನ್ನ ಇರುವಿಕೆಯನ್ನು ಪ್ರತಿಪಾದಿಸುತ್ತಿದೆ. ಆದರೂ ಕ್ರೈಸ್ತಮತ ಹೊಂದಿದ್ದ ರಾಜಕೀಯ ಬಲ ಮತ್ತು ಬೆಂಬಲಗಳೆರಡನ್ನೂ ಸಕಾರಾತ್ಮಕವಾಗಿ ಪಡೆದುಕೊಳ್ಳಲು ಸಾಧ್ಯವಾಗಿಲ್ಲ. ಸ್ವಮತ ಬೆಳವಣಿಗೆ ಅನ್ಯಮತಗಳ ನಿರ್ನಾಮದಲ್ಲಡಗಿದೆ ಎಂಬ ನಿಲುವಿನಲ್ಲಿ ಅದು ಜೆಹಾದ್ ಮತ್ತು ಭಯೋತ್ಪಾದನೆ ರೂಪ ತಾಳಿದೆ. ಅದರ ಸಾಂಸ್ಕೃತಿಕ ಚಹರೆಗಳು ಇಂಥ ಪ್ರಯತ್ನಗಳಲ್ಲಿ ಯಶಸ್ಸು

## ಬರೆಯಬೇಕು ಕವಿತೆಯನ್ನು

ಈ ಹಸಿರ ಉಸಿರನ್ನು
ಹಿಡಿದಿಡಬೇಕು ಮೊದಲು.
ಆ ಸೂರ್ಯಕಿರಣ,
ಇಬ್ಬನಿ, ಪ್ರಶಾಂತತೆ,
ಹಕ್ಕಿ ಭಾವ ಇವೆಲ್ಲಾ
ರಕ್ತಸಿಕ್ತವಾಗುವ ಮುನ್ನ,
ಕರ್ಕಶ ಬಂದು
ನುಂಗಿ ಹಾಕಿ,
ಈ ಅನುಭವಕ್ಕೆ
ಹುಳುಹತ್ತುವ ಮುನ್ನ
ನೆನಪಿನ ಆಚರಣೆಗಾಗಿ
ಈ ಕವನದಲ್ಲಿ
ಬಿಗಿದು ಕಟ್ಟಬೇಕು.

ದೀಪವಾರಿ ಕತ್ತಲೊಳಗೆ
ಕರಗುವ ಮುನ್ನ
ಕವಿತೆಯೊಳಗೆ ಅವಿಸಿ
ಎಲ್ಲವನ್ನೂ ಶಾಶ್ವತ
ಅನಾವರಣಗೊಳಿಸಬೇಕು.

ಅಳಿವ ಮುನ್ನ
ಉಳಿಸುವ ಸೆಳೆತವಿದೆ
ಈ ಸ್ನಿಗ್ಧ ಮೌನದ
ಎಳೆಗಳನ್ನು
ಎಳೆಯಾಗಿ ಇಳಿಸಬೇಕು.
ಎಲೆ ಹೂ ಹಣ್ಣು
ಚಿಟ್ಟೆಗಳ ಸಂಗೀತ
ದಾಖಲೆಯಾಗಬೇಕು, ಮೊದಲು.

ಪಂಪನ ಬನವಾಸಿ
ಬಸವನ ಕಲ್ಯಾಣ
ಬೇಂದ್ರೆಯ ಒಲವು
ಉಳಿದು ಗಮಗಮಿಸುವಂತೆ
ನೀನು ನಿರಂತರವಾಗಬೇಕು.

ವಸಂತನ ಬರವು
ಒಲವಾಗಿ ಬಲವಾಗಿ
ಅನುಗಾಲವೂ ಅರಳುವಂತಾಗಲು
ಬಂಧಿಸಬೇಕು ಈ ಬರೆವಣಿಗೆಯಲ್ಲಿ.



ಮೃತ್ಯುಂಜಯ ರುಮಾಲೆ
ಪ್ರಣವ, ಬಸವೇಶ್ವರ ಬಡಾವಣೆ, ಹೊಸಪೇಟೆ - ೫೮೩ ೨೦೧

ಪಡೆಯದಿರುವುದನ್ನೂ ಸೂಚಿಸುತ್ತವೆ. ತಾಲಿಬಾನ್ ಆಫ್ಘಾನಿಸ್ತಾನದಲ್ಲಿ ಧಾರ್ಮಿಕ ರಾಜಕಾರಣ ಸ್ಥಾಪಿಸಲು ನಡೆಸಿದ ಪ್ರಯತ್ನ ಮತ್ತು ಸೆಪ್ಟೆಂಬರ್ ೧೧ರ ಘಟನೆಯ ನಂತರ ಇಸ್ಲಾಂ ನಿಲುವನ್ನು ಪಾಶ್ಚಿಮಾತ್ಯ ಸಂಸ್ಕೃತಿ ನಿಭಾಯಿಸಿದ ರೀತಿ ಈ ಪರಂಪರೆಯ ಮುಂದುವರಿಕೆಯಾಗಿದೆ. ಸೆಪ್ಟೆಂಬರ್ ೧೧ರ ನಂತರದ ಬೆಳವಣಿಗೆ ಮತ್ತು ಕರ್ಬಾಲ ಸೋಲಿನ ಆಚರಣೆಯಾದ ಮೊಹರಂ ಹಬ್ಬದ ಆಶಯ – ಇವೆರಡೂ ಏಕಸ್ವರೂಪದ್ದಾಗಿವೆ.

ಇಸ್ಲಾಂ ಪಾಶ್ಚಿಮಾತ್ಯ ಮತ್ತು ಪೌರ್ವಾತ್ಯ ಸಂಸ್ಕೃತಿಗಳೊಂದಿಗೆ ಸಹಜೀವನ ನಡೆಸುತ್ತಿದ್ದರೂ ಅದರ ಅನಿವಾರ್ಯತೆಯನ್ನು ಒಪ್ಪಿಕೊಳ್ಳದೆ ಅವುಗಳ ಮೇಲೆ ಮೇಲುಗೈ ಸಾಧಿಸುವ ದೃಷ್ಟಿ ಹೊಂದಿದೆ. ಸ್ವತಃ ತಾನೇ ಮತದ್ವೇಷದ ಬೆಂಕಿಯಲ್ಲಿ ಹೊತ್ತಿ ಉರಿಯುತ್ತಿದ್ದು, ಸರ್ವವ್ಯಾಪಕ ಅಸ್ತಿತ್ವ ಮತ್ತು ಪ್ರಭುತ್ವ ಸ್ಥಾಪನೆಯ ಹಾದಿಯಲ್ಲಿ ಧಾವಂತಗೊಂಡು ಕ್ರುದ್ಧಗೊಂಡಿದೆ. ತನ್ನ ಮತಾನುಯಾಯಿಗಳ ಜೀವವನ್ನು ಪಣಕ್ಕಿಟ್ಟು ಅಸಹನೆಯ ಕುದಿಯಲ್ಲಿ ಬೇಯುತ್ತಿದೆ. ಈ ಎಲ್ಲ ಚಟುವಟಿಕೆಗಳಿಗೆ ಶಕ್ತಿ ನೀಡಬಲ್ಲ ಅದರ ಕೇಂದ್ರಬಿಂದುವಿನಲ್ಲಿ ಶಾಂತತೆ, ಸಮಚಿತ್ತತೆ, ಸಮಾಧಾನ, ಕ್ರಿಯಾಶೀಲತೆ, ಚಿಂತನಶೀಲ ಗುಣ ಮರೆಯಾಗಿ, ಉತ್ಸಾಹದಿಂದ ಹೋರಾಡುತ್ತಿರುವ ಶಸ್ತ್ರಹೀನ ಯೋಧನಂತೆ ಕಾಣುತ್ತಿದೆ. ಕೇವಲ ಧಾರ್ಮಿಕ ನಂಬುಗೆ ಆಧರಿಸಿದ ಹಂಬಲ ಇಸ್ಲಾಂ ಮತದ ಈ ಬಗೆಯ ಹೋರಾಟವನ್ನು ಎಷ್ಟರಮಟ್ಟಿಗೆ ಮುನ್ನಡೆಸುತ್ತದೆ ಎಂಬುದು ಕುತೂಹಲಕರ.




ಎದುರಾಳಿ ಕ್ರೈಸ್ತಮತ ಮತ್ತದರ ಪಾಶ್ಚಿಮಾತ್ಯ ಸಂಸ್ಕೃತಿ ಇಸ್ಲಾಂ ಮತದ ಇತಿಮಿತಿಯನ್ನು ಗುರುತಿಸಿ, ಸೀಮಿತ ಚೌಕಟ್ಟನ್ನು ನಿಯಮಿಸಿ, ಅದರಲ್ಲೇ ಬಂಧಿಸಿವೆ. ಆದರೆ ಇಸ್ಲಾಂನ ಧಾರ್ಮಿಕ ಮಹತ್ವಾಕಾಂಕ್ಷೆ ತನಗೆ ತೋರಿಸಲಾಗಿರುವ ಗೆರೆಗಳನ್ನು ಒಪ್ಪಿಕೊಳ್ಳುವಂತೆ ಮಾಡುವ ಪ್ರಯತ್ನವನ್ನು ಮುರಿದು ಅದರಾಚೆಗೆ ತನ್ನನ್ನು ಸ್ಥಾಪಿಸಿಕೊಳ್ಳುವ ಪ್ರಯತ್ನದಲ್ಲಿ ಅದರ ಅಸಹನೆಯ ಕುದಿಬಿಂದು ಉಗ್ರವಾದದ ಸ್ವರೂಪ ಪಡೆದುಕೊಂಡಿದೆ. ತನ್ನ ಧರ್ಮದ ಮೂಲ ಹಂಬಲಗಳು ತನ್ನನ್ನು ನಿಸ್ತೇಜಗೊಳಿಸುವ ಕ್ರಮ ಕುರಿತೇ ಗಮನ ಕೇಂದ್ರೀಕರಿಸಿದೆ. ಇದು ಮತ್ತೊಂದು ಬಗೆಯಲ್ಲಿ ಕ್ರೈಸ್ತಮತದ ಮತಶ್ರದ್ಧೆಯ ಸ್ವರೂಪದ್ದು. ಅಂದರೆ ಜೀವನ ಕುರಿತು ನಡೆಸುವ ಚಿಂತನೆ, ಪರಿಕಲ್ಪನೆಗಳು ಮತಶ್ರದ್ಧೆಯ ಅಂಗವಾಗಿದ್ದು, ಅದರ ಪರಿಧಿಯೊಳಗೆ ಸುತ್ತುವ ಚಿಂತನಾಕ್ರಮ. ಹಾಗಾಗಿ ಆರೋಗ್ಯಕರ ಮನಃಸ್ಥಿತಿಯನ್ನು ಅದು ಪರಮತದೊಂದಿಗಿನ ಹೋರಾಟಕ್ಕೆ ಸಶಕ್ತವಾಗಿ ರೂಪುಗೊಳ್ಳುವುದು ಎಂಬ ಪರಿಕಲ್ಪನೆಯಾಗಿ ಗ್ರಹಿಸಿದೆ.

ಇದರಿಂದಾಗಿ ಇಸ್ಲಾಂ ಪ್ರತಿಬಂಧಕ ಸ್ವರೂಪ ಪಡೆದುಕೊಂಡಿದೆ. ಇದು ಪಶ್ಚಿಮ ಸಂಸ್ಕೃತಿಯ ಯಾಜಮಾನ್ಯ ಧೋರಣೆಗೆ ತೋರಿದ ರಕ್ಷಣಾತ್ಮಕ ನಿಲುವೂ ಹೌದು, ತಾನೆ ಒತ್ತಾಯಪೂರ್ವಕವಾಗಿ ಹೇರಿಕೊಂಡಿರುವ ಮಿತಿಯೂ ಹೌದು. ಇಸ್ಲಾಂನ ಮತಶ್ರದ್ಧೆಯು ಮತಾಂಧತೆಯ ಪರಿಧಿಯಾಚೆಗೆ ಬರಲು ಸಾಧ್ಯವಾಗಬೇಕಾದರೆ ಈ ಬೇಲಿಯನ್ನು ಮುರಿದು ಹೊರಬರಬೇಕು. ಸಿದ್ಧ ಸತ್ಯಗಳನ್ನು ಸ್ವೀಕರಿಸಿರುವುದು, ಪವಿತ್ರ ಗ್ರಂಥಗಳಲ್ಲಿ ನಿರೂಪಿತ ನೀತಿ ನಿಯಮಗಳನ್ನು ಇಂದಿನ ಸಂದರ್ಭದಲ್ಲಿಟ್ಟು ಮರುಚಿಂತನೆಗೆ ಒಳಪಡಿಸದಿರುವುದು, ಹಾಗೂ ಇಸ್ಲಾಂ ಪ್ರಭುತ್ವದ ಕಲ್ಪನೆಯನ್ನು ಸರ್ವಾಧಿಕಾರಿತ್ವ ರಾಜಕಾರಣ ಸ್ಥಾಪನೆಗೆ ದುರುಪಯೋಗಪಡಿಸಿಕೊಂಡಿರುವುದು – ಇವೆಲ್ಲಾ ಇಸ್ಲಾಂ ಮತಶ್ರದ್ಧೆ ಮತೀಯ ಸ್ವರೂಪ ಪಡೆದುಕೊಂಡಿರುವ ಪರಿಣಾಮವಾಗಿದೆ.

ಇದು ಇಸ್ಲಾಂನ ಮೂಲಭೂತ ಗುಣಗಳನ್ನು ಗುರುತಿಸುವ ಹಾಗೆ ಕಾಣಬಹುದು. ಆದರೆ ಕ್ರೈಸ್ತ ಮತೀಯತೆ ತನ್ನ ತಣ್ಣನೆಯ ಕ್ರೌರ್ಯದಿಂದ ತಲ್ಲಣಗೊಳಿಸಿದ ಹಾಗೆ ಇಸ್ಲಾಂ ಜೀವಪ್ರೀತಿ ತೊರೆದ, ಬೀಭತ್ಸ ಕ್ರೌರ್ಯದಿಂದ ನಡುಕ ಹುಟ್ಟಿಸಿದ, ಮತವಾಗಿ ಸ್ಥಾಪಿಸಿಕೊಂಡಿದೆ. ತನ್ನನ್ನು ಪ್ರತಿಪಾದಿಸಿಕೊಳ್ಳಲು ಅನುಸರಿಸಿದ ಶೌರ್ಯ-ಸಾಹಸದ ಕ್ರಮವನ್ನು ಹೆಗ್ಗಳಿಕೆಯೆಂದು ಅಭಿಮಾನಪಡುವುದು ಖಂಡಿತವಾಗಿ ಮಾನವ ಸಹಜ ತುಡಿತದ ಕ್ರಮವಲ್ಲ. ಇಸ್ಲಾಂ ಅನುಸರಿಸಿದ ಭೀಕರ ಮಾರ್ಗದ ಪರಿಣಾಮವಾಗಿ ಧಾರ್ಮಿಕ ಸಂಸ್ಥೆಯ ನಕಾರಾತ್ಮಕ ಸಾಧ್ಯತೆಗಳ ಬಗ್ಗೆ ಪ್ರಭಾವ ಬೀರತೊಡಗಿದೆ, ಮತಶ್ರದ್ಧೆಯನ್ನು ಕದಡದೆ ಅನ್ಯಮತಗಳು ಮತಾಂಧತೆ ಅಪ್ಪುವಂತೆ ಮಾಡುತ್ತಿದೆ.

**ಹಿಂದೂ ಮತಶ್ರದ್ಧೆ:** ಕ್ರೈಸ್ತ ಮತ್ತು ಇಸ್ಲಾಂ ಮತಶ್ರದ್ಧೆಗಳ ಹಾಗೆ ಹಿಂದೂ ಮತಶ್ರದ್ಧೆ ಜಾಗತಿಕ ವಿದ್ಯಮಾನವೇನಲ್ಲ. ಹಿಂದೂಮತದ ಮತಶ್ರದ್ಧೆಯ ನಿಲುವು ಇದಕ್ಕೆ ಕಾರಣ. ಅದು ಅನ್ಯಮತಗಳನ್ನು ಎರಡು ಗುಂಪುಗಳಲ್ಲಿ ನೋಡುತ್ತದೆ. ಒಂದು, ಭಾರತೀಯ ಮೂಲದ ಅನ್ಯಮತಗಳು; ಎರಡು, ಭಾರತೀಯವಲ್ಲದ ಅನ್ಯಮತಗಳು. ಭಾರತೀಯವಲ್ಲದ ಅನ್ಯಮತಗಳ ಬಗ್ಗೆ ರಕ್ಷಣಾತ್ಮಕ ಹಾಗೂ ಪ್ರತಿಬಂಧಕ ನಿಲುವು ಹೊಂದಿದ್ದರೆ, ಭಾರತೀಯ ಅನ್ಯಮತಗಳ ಬಗ್ಗೆ ಆಕ್ರಮಣಕಾರಿ ಧೋರಣೆ ತಳೆದಿದೆ. ಈ ವಿಂಗಡಣೆ ಅನ್ಯಮತವನ್ನು ಮಣಿಸುವ ಮತ್ತು ಮಣಿಸಲಾಗದ ಸ್ಥಿತಿಯನ್ನು ಅವಲಂಬಿಸಿದೆ. ಈ ನಿಲುವಿನ ಚಾಲನಾಶಕ್ತಿಯಾಗಿ ಶ್ರೇಷ್ಠತೆ ಮತ್ತು ಸಂಕರ ಕಲ್ಪನೆಗಳು ಕಾರ್ಯ ನಿರ್ವಹಿಸಿವೆ.

ಇಂದಿನ ಭಾರತೀಯ ಸಮಾಜದಲ್ಲಿ ಬೌದ್ಧರು, ಜೈನರು, ಸಿಖ್ಖರು, ದಲಿತರು, ಹಿಂದುಳಿದ ಕೋಮುಗಳಿಗೆ ಸೇರಿದ ವಿವಿಧ ಜಾತಿ-ಉಪಜಾತಿಗಳು, ಶೈವಮತಕ್ಕೆ ಸೇರಿದ ಭಿನ್ನ ಮತಪಂಥಗಳು, ಬುಡಕಟ್ಟು ಧರ್ಮವನ್ನು ಅವಲಂಬಿಸಿ ಒಂದು ಮತವಾಗಿ ಬೆಳೆದ ಅಲೇಖಾ/ಮಹಿಮಾ ಪಂಥಗಳಂಥವು, ಎಲ್ಲಾ ಉಂಟು. ಪ್ರಾದೇಶಿಕ ಮತಧರ್ಮದೊಂದಿಗೆ ಮುಸ್ಲಿಂ ಅನುಭಾವ ಪಂಥಗಳು ಬೆರೆತು ಹುಟ್ಟಿಕೊಂಡ ಆನಂದ ಪಂಥಗಳಂಥವು, ಸಾಂಸ್ಥಿಕ ರೂಪ ತಳೆಯದ ಆದರೆ ಪ್ರಾದೇಶಿಕ ಸಂಸ್ಕೃತಿಯ ಭಾಗವಾಗಿದ್ದ ಅನೇಕ ಬಗೆಯ ವಿಚಾರಧಾರೆಗಳು ಮತ್ತು ಜನಪದ ಕಾವ್ಯಗಳು, ಶಿಷ್ಟ ಸಮಾಜದ ಭಾಗವಾಗುತ್ತಿರುವ ಶಿಷ್ಟ ಮತ್ತು ಬುಡಕಟ್ಟು ಸಮಾಜಗಳ ನಡುವಿನ ಸಂಸ್ಕೃತಿಗಳು, ಮಾತೃಪ್ರಧಾನ ಸಮಾಜದ ಪಳೆಯುಳಿಕೆಗಳ ರೂಪದಲ್ಲಿರುವ ಆಚರಣೆಗಳು, ಗ್ರಾಮದೇವತೆಗಳು ಹಾಗೂ ಕ್ಷುದ್ರದೈವಗಳ ಪಟ್ಟಿಗೆ ಸೇರಿರುವ ಆದರೆ ವೈದಿಕೇತರ ಭಿನ್ನ ಪಂಥಗಳ ಆರಾಧನಾ ದೈವಗಳಾಗಿದ್ದ ಭೈರವ, ಖಂಡೋಬಾ ಮುಂತಾದ ವಿಚಾರಧಾರೆಗಳು – ಇವೆಲ್ಲ ಹಿಂದೂಮತಕ್ಕೆ ಅನ್ಯವಾಗಿದ್ದರೂ ಚರಿತ್ರೆಯ ಬೇರೆ ಬೇರೆ ಕಾಲಘಟ್ಟಗಳಲ್ಲಿ ಅದರ ಪ್ರಭಾವಕ್ಕೆ ಒಳಗಾಗಿ ವರ್ಣ ವ್ಯವಸ್ಥೆಯ ಭಾಗವಾಗಿ ತನ್ನ ಪ್ರತ್ಯೇಕತೆಯನ್ನೂ ವಿಶಿಷ್ಟತೆಯನ್ನೂ ಕಳೆದುಕೊಂಡುಬಿಟ್ಟಿವೆ. ಅಂದರೆ ಕ್ರೈಸ್ತಮತ ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ಪ್ರಾದೇಶಿಕ ಸಂಸ್ಕೃತಿಗಳನ್ನು ನಾಶಪಡಿಸಿ ತನ್ನನ್ನು ಪ್ರತಿಷ್ಠಾಪಿಸಿಕೊಂಡಂತೆ ಹಿಂದೂ ಮತವೂ ಭಾರತದ ಅನ್ಯಮತಗಳ ವಿಶಿಷ್ಟತೆಯನ್ನು ಅಳಿಸಿಹಾಕಿ ಅವನ್ನು ತನ್ನದೊಂದು ಭಾಗವಾಗಿ ಮಾಡಿಕೊಂಡಿದೆ. ಹಿಂದೂ ಮತಶ್ರದ್ಧೆಯನ್ನು ಬಿಂಬಿಸುವ ಈ ಆಕ್ರಮಣ ಪ್ರವೃತ್ತಿಯನ್ನು ಸಂಸ್ಕೃತೀಕರಣವೆಂದು ಬಣ್ಣಿಸಿಕೊಂಡಿದೆ. ಈ ಪ್ರಕ್ರಿಯೆಯಲ್ಲಿ ಹಿಂದೂ ಮತ ನಡೆಸಿರುವ ಸಂಘರ್ಷ, ಹರಿಸಿರುವ ರಕ್ತದ ಕೋಡಿಯ ಬಗ್ಗೆ ಅಧಿಕೃತ ದಾಖಲೆಗಳು ಯಾವುದೇ ಏಕೀಕೃತ ಪಠ್ಯವೊಂದರಲ್ಲಿ ಲಭ್ಯವಿಲ್ಲ. ದೇಶದ ತುಂಬ ಚದುರಿಹೋಗಿರುವ ದಮನಿತ ವೈದಿಕೇತರ ಮತಗಳ ಅಳಿದುಳಿದ ಸಾಂಸ್ಕೃತಿಕ – ಲಿಖಿತ, ಮೌಖಿಕ – ಪಠ್ಯಗಳ ಮೂಲಕ ಮರುರಚಿಸಬೇಕಿದೆ. ಬೌದ್ಧ, ಜೈನಮತಗಳು ಹಿಂದೂ ಮತದ ವಿರುದ್ಧದ ಸಂಘರ್ಷದಲ್ಲಿ ತಮ್ಮ ಪ್ರಭಾವ ಮತ್ತು ವರ್ಚಸ್ಸನ್ನು ಕಳೆದುಕೊಂಡು ಮೂಲೆ ಗುಂಪಾದವು. ಹಿಂದೂಮತ ಅವನ್ನು ತನ್ನ ಪೌರಾಣಿಕ ಕತೆಗಳಲ್ಲಿ, ವಿಶೇಷವಾಗಿ ದಶಾವತಾರದಲ್ಲಿ, ವಿಷ್ಣುವಿನ ಅವತಾರಗಳಲ್ಲಿ ಒಂದಾಗಿ ನಿರೂಪಿಸಿ ಅವುಗಳ ಅಸ್ತಿತ್ವವನ್ನು ತನ್ನೊಳಗೆ ಅಡಗಿಸಿಕೊಂಡುಬಿಟ್ಟಿತು. ಹಾಗೆ ನೋಡಿದರೆ ಶ್ರವಣಬೆಳಗೊಳ ಶಾಸನ (೧೩೬೮) ವಿಜಯನಗರದ ಒಂದನೆಯ ಬುಕ್ಕರಾಯನು ವೈಷ್ಣವ ಮತ್ತು ಜೈನರ ನಡುವಿನ ಸಂಘರ್ಷವನ್ನು ರಾಜಿ ಮೂಲಕ ಬಗೆಹರಿಸಿದುದನ್ನು ತಿಳಿಸುತ್ತದೆ. ಇದು ವೈಷ್ಣವಮತ ಜೈನದರ್ಶನವನ್ನು ಕಾಪಾಡಿಕೊಂಡು ಹೋಗಬೇಕೆಂದು ಬುಕ್ಕರಾಯನು ನೀಡಿದ ಆದೇಶವನ್ನು ನಿರೂಪಿಸಿದೆ. ದಶಾವತಾರದ ಕಲ್ಪನೆಯ ನಂತರವೂ ಹಿಂದೂ ಮತ (ಬ್ರಾಹ್ಮಣ ಮತ)ಗಳ ನಡುವೆ ಜಗಳಗಳು ಕೊನೆ ಕಂಡಿರಲಿಲ್ಲ. ಹಿಂದೂಮತ ತನ್ನ ಹಿತಾಸಕ್ತಿ ಕಾಪಾಡುವ ದೃಷ್ಟಿಯಿಂದ ಅನ್ಯಮತಗಳನ್ನು ಮಣಿಸುವಲ್ಲಿ ಹಲವು ಬಗೆಯ ಉಪಾಯಗಳನ್ನು ಗೌಣಗೊಳಿಸಿದ ರಾಜಕಾರಣ ಸ್ವರೂಪ ಮತ್ತು ಉದ್ದೇಶದ ಇಂಗಿತದ ಸೂಚನೆ ಇಲ್ಲಿದೆ.

ಅದರ ಫಲವಾಗಿ ಭಾರತದ ಅನ್ಯ ಮತಗಳ ವಿಶಿಷ್ಟತೆ ಮತ್ತು ಪ್ರತ್ಯೇಕತೆಗಳನ್ನು ಅಳಿಸಿಹಾಕಿ ಅವನ್ನೆಲ್ಲ ಹಿಂದೂಮತದ ಹಣೆಪಟ್ಟಿಯಡಿ ತಂದು ಕೂರಿಸಿತು. ವರ್ಣವ್ಯವಸ್ಥೆಯ ಪಾರುಪತ್ಯದಡಿ ಅವುಗಳ ಮೇಲೆ ತನ್ನ ಆಧಿಪತ್ಯ ಮೆರೆಯಿತು. ಇವೆಲ್ಲವೂ ಹಿಂದೂಮತದ ಅನ್ಯಮತ ವಿಧ್ವಂಸಕ ಪ್ರವೃತ್ತಿಯನ್ನು ಸಾರಿಹೇಳುತ್ತವೆ.

ಮಾಸ್ತಿಯವರ ಕತೆಯೊಂದರಲ್ಲಿ ಬ್ರಾಹ್ಮಣನೊಬ್ಬ ಸಂದರ್ಭದ ಅನಿವಾರ್ಯ ಒತ್ತಡದಿಂದ ಮುಸ್ಲಿಂ ಮತಕ್ಕೆ ಮತಾಂತರಗೊಳ್ಳುತ್ತಾನೆ. ಬಲವಾದ ತುಡಿತದಿಂದ ಆ ಧರ್ಮ ತೊರೆದ ಅವನಿಗೆ ಮತ್ತೆ ಸ್ವಧರ್ಮ ಪಡೆದುಕೊಳ್ಳುವ ಅವಕಾಶ ನಿರಾಕರಿಸಿದ ಬ್ರಾಹ್ಮಣ ಸಮಾಜ ಬಹಿಷ್ಕಾರ ಹಾಕುತ್ತದೆ. ಈ ಕತೆ ಹಿಂದೂಮತ ಪ್ರಾಚೀನ ಕಾಲ ದಿಂದಲೂ ಅನ್ಯಮತಗಳ ಬಗ್ಗೆ ಬೆಳೆಸಿಕೊಂಡುಬಂದಿರುವ ಪ್ರತಿಬಂಧಕ ನಿಲುವಿನ ಪ್ರತೀಕವಾಗಿದೆ. ಸ್ವಧರ್ಮೀಯನ ಬಗ್ಗೆ ತಳೆದ ಪ್ರತಿಬಂಧಕ ಜಿಗುಟು ನಿಲುವು ಹಾಗೂ ಅನ್ಯಧರ್ಮೀಯನ ಕುರಿತು ತಳೆಯುವ ವಿರುದ್ಧ ನಿಲುವು – ಇವೆರಡರ ದೃಷ್ಟಿಕೋನ ಒಂದೇ ಆಗಿದೆ. ಇದು ರಕ್ಷಣಾತ್ಮಕ ಹಾಗೂ ಆಕ್ರಮಣಕಾರಿ ಸ್ವರೂಪ ಪಡೆದು ಸಂಘರ್ಷ ಉಂಟುಮಾಡುತ್ತದೆ. ಅನ್ಯಧರ್ಮದ ಬಗ್ಗೆ ಅಪನಂಬಿಕೆಯಿಂದ, ಅಸಹನೆಯಿಂದ ನಡೆದುಕೊಳ್ಳುತ್ತದೆ. ಅನ್ಯಧರ್ಮೀಯನು ರೊಚ್ಚಿಗೆದ್ದು ಸಂಘರ್ಷ ಕ್ಕಿಳಿಯಬೇಕಾದ ಮನಃಸ್ಥಿತಿ ಹುಟ್ಟುಹಾಕುತ್ತದೆ. ಮತಶ್ರದ್ಧೆ ಹುಟ್ಟುಹಾಕುವ ಈ ರಾಜಕಾರಣ ಸಹಜೀವನ ನಡೆಸುತ್ತಿದ್ದವರನ್ನು ಅನ್ಯದೇಶೀಯರನ್ನಾಗಿ ಮಾಡುತ್ತದೆ. ಅನ್ಯ ಮತಾವಲಂಬಿಯಾಗಿರುವುದೇ ಕಾರಣವಾಗಿ ಮಾನವೀಯ ಭಾವನೆ ಕಳೆದು ಕೊಂಡು ಅಪರಿಚಿತರಾಗಿ ದ್ವೇಷವಿಲ್ಲದಿದ್ದರೂ ಪರಮಶತ್ರುಗಳಂತೆ ಕಾದಾಡುತ್ತಾರೆ. ದೇಶದಲ್ಲಿ ನಡೆದಿರುವ ಕೋಮು ಸಂಘರ್ಷಗಳಿಗೆಲ್ಲ ಹಿಂದೂ ಸಂಘಪರಿವಾರವೇ ಕಾರಣವಾಗಿದೆಯೆಂದು ತನಿಖಾ ಆಯೋಗಗಳ ವರದಿಗಳು ಹೇಳಿವೆ. ಆರೆಸ್ಸೆಸ್‌ನ ಕೋಮು ಧೋರಣೆಯಿಂದ ಮುಸ್ಲಿಮರು ಮುಸ್ಲಿಂ ಲೀಗ್‌ನ ಕೋಮು ಸಂಘಟನೆಯಡಿ ಆಶ್ರಯ ಪಡೆಯುವಂತೆ ಒತ್ತಡ ಹೇರಿದೆ. ಸ್ವಾತಂತ್ರ್ಯೋತ್ತರ ಭಾರತ ಜೀವನದಲ್ಲಿ ಲಿಂಗ, ಜಾತಿ, ಮತಗಳ ನಡುವೆ ಸಮಾನತೆ ಮತ್ತು ಸ್ವಾತಂತ್ರ್ಯದ ಭರವಸೆ ನೀಡಿದ ಕಾನೂನು ವಾಸ್ತವದಲ್ಲಿ ಅರಳದೆ ಹೋಗಿದೆ. ತನ್ನದು ಮತ್ತು ತನ್ನದಲ್ಲದ ಭೇದದಲ್ಲಿ ಆತ್ಮಸಾಕ್ಷಿರಹಿತ ಸ್ಥಿತಿ ಅಥವಾ ವಿವೇಚನಾ ಶಕ್ತಿಯಿಲ್ಲದೆ ಹಿಂಸೆ ಎದ್ದಿದೆ.

ಇಂದು ದೇಶ ಎದುರಿಸುತ್ತಿರುವ ಹಿಂದೂ ಕೋಮುವಾದದ ಹಿಂಸೆಯ ಪರಿಕಲ್ಪನೆಗೆ ವಸಾಹತುಶಾಹಿಯೇ ಮೂಲವೆಂದು ಬೊಟ್ಟು ಮಾಡುವಂಥ ವಿಶ್ಲೇಷಣೆಗಳು ಬಂದಿವೆ. ಇವು ವಸಾಹತು ಪೂರ್ವಕಾಲದಲ್ಲಿ ಹಿಂದೂ ಮತಶ್ರದ್ಧೆ ಪಡೆದುಕೊಂಡಿದ್ದ ಸ್ವರೂಪವನ್ನು ಮರೆತುಬಿಡುತ್ತವೆ, ಕೋಮುವಾದವನ್ನು ಕೇವಲ ಮುಸ್ಲಿಮ್ ವಿರೋಧಿ ನೆಲೆಯಲ್ಲಿ ಗ್ರಹಿಸುವ ಮಿತಿಯಿಂದ ಹುಟ್ಟಿವೆ. ಹಿಂದೂ ಮತಶ್ರದ್ಧೆ ವೈದಿಕೇತರ ಮತಧರ್ಮಗಳ ಮೇಲೆ ನಡೆಸಿರುವ ಹಲ್ಲೆಗಳು ಮಾರಣಾಂತಿಕವಾಗಿದ್ದು ಅವನ್ನು ಬೇರೆ ಚೌಕಟ್ಟಿನಲ್ಲಿಟ್ಟು ಗ್ರಹಿಸಬೇಕೆಂದು ಒತ್ತಾಯಿಸುತ್ತವೆ.

ಭಾರತದಲ್ಲಿ ಇತ್ತೀಚೆಗೆ ನಡೆದಿರುವ ಹೆಚ್ಚಿನ ಮತ ಸಂಬಂಧಿ ಗಲಭೆಗಳು ಮುಸ್ಲಿಮರ ವಿರುದ್ಧವೇ ನಡೆದಿರುವುದು ಕಾಕತಾಳೀಯ. ಎಲ್ಲ ಮತ-ಧರ್ಮಗಳ ವಿರುದ್ಧವೂ ಗಲಭೆಗಳು ನಡೆದಿವೆ. ಭಾರತದಲ್ಲಿ ಬೌದ್ಧ ವಿಹಾರಗಳ ಸ್ಥಾನದಲ್ಲಿ ಜೈನ ಬಸದಿಗಳೂ ಜೈನ ಬಸದಿಗಳ ಸ್ಥಾನಗಳಲ್ಲಿ ಶಿವಾಲಯಗಳೂ ಶಿವಾಲಯಗಳ ಸ್ಥಾನಗಳಲ್ಲಿ ವೈಷ್ಣವ ದೇವಾಲಯಗಳೂ ನೆಲೆಸಿರುವುದು ಸಾಮಾನ್ಯ ಸಂಗತಿಯಾಗಿದ್ದು, ಇತಿಹಾಸದ ಪುಟಗಳಲ್ಲಿ ಮರೆಮಾಚಿಹೋಗಿವೆ. ಮೂಲಭೂತವಾಗಿ ಇದೊಂದು ಮತಶ್ರದ್ಧೆಯ ಪ್ರಶ್ನೆ. ಪ್ರತಿಯೊಂದು ಮತವೂ ತಾನೇ ಶ್ರೇಷ್ಠ ಎಂದು ನಂಬಿಕೊಂಡಿರುತ್ತದೆ. ಸ್ವಮತದ ಬಗೆಗಿನ ಗಾಢ ಅಭಿಮಾನ ವಿವೇಚನಾರಹಿತ ಭಾವಸ್ಥಿತಿಯನ್ನು ಹುಟ್ಟುಹಾಕಿ ಅನ್ಯ ಮತವನ್ನು ಅಂತರ ಮತ್ತು ಅಸಹನೆಯಿಂದ ಕಾಣುತ್ತದೆ. ಈ ಭಾವ ಕ್ರಮೇಣ ತಿರಸ್ಕಾರ, ದ್ವೇಷ, ಪ್ರತೀಕಾರವಾಗಿ ಮಾರ್ಪಟ್ಟು ಹಿಂಸೆಗೆ ಎಡೆ ಮಾಡಿಕೊಡುತ್ತದೆ. ಅನ್ಯಮತಗಳ ಅರಿವು ತಿಳುವಳಿಕೆಯನ್ನು ವಿಸ್ತರಿಸುತ್ತದೆ ಎಂಬ ಧೋರಣೆ ಅನ್ಯಮತ ಕುರಿತ ನಿಲುವನ್ನು ಬದಲಿಸಬಲ್ಲದು, ಸಹನೆ ಬೆಳೆಸಿಕೊಳ್ಳಲು ನೆರವಾಗಬಲ್ಲದು. ಮತಶ್ರದ್ಧೆ ಕುರುಡು ಅಭಿಮಾನವಾಗುವ ಬದಲು ಅರಿವು ಪಡೆಯುವ ವಿವೇಚನಾ ಮಾರ್ಗವಾದರೆ ಪ್ರತಿಯೊಂದು ಮತವೂ ಆರೋಗ್ಯಕರ ಮನಃಸ್ಥಿತಿ ಉಳಿಸಿಕೊಳ್ಳಲು ಸಾಧ್ಯವಿದೆ. ಮತಶ್ರದ್ಧೆ ಮತ್ತು ಮತೀಯತೆ ಆಗ ಜಿಗುಟು ಮೂಲಭೂತವಾಗದೆ ಕೇವಲ ಸ್ವಮತದ ವಿಚಾರಧಾರೆಯಾಗಿರುತ್ತವೆ. ಹಲವು ವಿಚಾರಧಾರೆಗಳು ಮತ್ತೊಂದನ್ನು ಘಾತಿಸದೆ, ನೋಯಿಸದೆ ತಮ್ಮ ಪಾಡಿಗೆ ಸ್ವತಂತ್ರವಾಗಿ ಇರುವ ಹಾಗೆ ಭಿನ್ನ ಮತಗಳು ತಮ್ಮ ಪಾಡಿಗೆ ತಾವು ಇರಬಲ್ಲವು. ಆದರೆ ಮತಶ್ರದ್ಧೆ ಸಾಂಸ್ಥಿಕರೂಪ ಪಡೆದು ತನ್ನ ಕ್ರಿಯಾಶೀಲತೆ, ಚಲನಶೀಲತೆ, ಜೀವಂತಿಕೆ ಕಳೆದುಕೊಂಡು ಪುರೋಹಿತಶಾಹಿ ಅಧಿ ಕಾರ ಸ್ಥಾನವಾಗಿ ಉಳಿದು ಅಪಾಯಕಾರಿಯಾಗಿ ಪರಿಣಮಿಸಿ ಮಾನವಕುಲವನ್ನಷ್ಟೇ ಅಲ್ಲದೆ ಇಡೀ ಜೀವಕುಲವನ್ನೇ ಘಾತಿಸುತ್ತದೆ.

ಧಾರ್ಮಿಕ ರಾಜಕಾರಣ ಫಲವಾದ ಮತೀಯತೆ ಆಧುನಿಕ ರೂಪದಲ್ಲಿ ಪ್ರಭುತ್ವ ರಾಜಕಾರಣದ ಸ್ವರೂಪವನ್ನೂ ಪಡೆದುಕೊಂಡಿದೆ. ಮಸೀದಿ ನಾಶದ ನಂತರ ಕ್ರೈಸ್ತ ಪಾದ್ರಿ ಸ್ಟೈನ್ ಹತ್ಯೆ, ಮುಂಬಯಿ ಕೋಮು ಸಂಘರ್ಷ, ಗುಜರಾತ್ ಹತ್ಯಾಕಾಂಡ ಮುಂತಾದ ಪ್ರಮುಖ ಘಟನೆಗಳು ಸಾಲುಗಟ್ಟಿ ಸ್ವತಂತ್ರ ಭಾರತದ ಜಾತ್ಯತೀತ ಗುಣ ಮಸುಕಾಗಿದೆ. ಏಕೆಂದರೆ, ಸ್ವತಂತ್ರ ಭಾರತದ ರಾಜಕೀಯ ವ್ಯವಸ್ಥೆ ಚುನಾವಣಾ ಮಾದರಿ ವ್ಯವಸ್ಥೆಯಲ್ಲಿ, ಪಕ್ಷ ಕೇಂದ್ರಿತ ಹಾಗೂ ಅಧಿಕಾರ ಕೇಂದ್ರಿತ ರಾಜಕಾರಣದಲ್ಲಿ, ಜಾತಿ-ಮತಧರ್ಮಗಳನ್ನು ಮೇಲೇರುವ ಮೆಟ್ಟಿಲುಗಳನ್ನಾಗಿ ಮಾಡಿಕೊಂಡಿದೆ. ಹಿಂದೂ ಮತಶ್ರದ್ಧೆ ಇಂದು ರಾಷ್ಟ್ರೀಯ ಕಲ್ಪನೆ ಬೆರೆತ ಧಾರ್ಮಿಕ ರಾಜಕಾರಣದ ಸ್ವರೂಪ ಪಡೆದು ಮತಶ್ರದ್ಧೆ ರಾಜಕಾರಣದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆಯ ಅರ್ಥ ಸಂಕುಚಿತಗೊಂಡಿದೆ. ಇಂಥ ಅನೇಕ ಘಟನೆಗಳು ಜಾತ್ಯತೀತ ಅಥವಾ ಧರ್ಮ ನಿರಪೇಕ್ಷ ತತ್ವಗಳಿಗೆ ವಿರುದ್ಧವಾಗಿ ನಡೆಯುತ್ತಿವೆ. ಅನ್ಯಮತಗಳು ಹೊಂದಿರುವ ಸಮಾನ ಹಕ್ಕುಗಳನ್ನು ನಿರಾಕರಿಸಿರುವುದೇ ಸ್ವತಂತ್ರ ಭಾರತದಲ್ಲಿ ಇದುವರೆಗೆ ನಡೆದಿರುವ ಕೋಮು ಗಲಭೆಗಳಿಗೆ ಮೂಲ ಕಾರಣವಾಗಿದೆ. ವಾಸ್ತವದಲ್ಲಿ ಈ ದೇಶದ ಜನತೆ ಎಲ್ಲ ಸಂಪ್ರದಾಯಗಳನ್ನು ಮೀರಿದ ಜಾತಿ-ಮತ, ಸ್ತ್ರೀ-ಪುರುಷ ನಡುವಿನ ಸಮಾನತೆಯನ್ನು ಸ್ವಾತಂತ್ರ್ಯ ಚಳವಳಿಯ ಮೂಲಕ ಹೋರಾಟ ಮಾಡಿ ಪಡೆದ ಕಲ್ಪನೆಗಳಾಗಿವೆ. ಸ್ವಾತಂತ್ರ್ಯ ಚಳವಳಿ ವಸಾಹತುಶಾಹಿಯನ್ನು ಈ ದೇಶದಿಂದ ಹೊರಗಟ್ಟುವ ರಾಜಕೀಯ ಚಳವಳಿ ಮಾತ್ರವಾಗಿರದೆ ಈ ದೇಶದ ಜನರಲ್ಲಿ ಸಮಾನತೆಯನ್ನು ತರಲು ಯತ್ನಿಸಿದ ಸಾಮಾಜಿಕ ಚಳವಳಿ ಕೂಡ. ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕಗಳ ಸಮಾಜ ಸುಧಾರಣಾ ಚಳವಳಿಯು ಸ್ತ್ರೀ ಸ್ವಾತಂತ್ರ್ಯ, ವಿಧವಾ ವಿವಾಹ, ಜಾತಿ ಸಮಾನತೆ, ಸ್ತ್ರೀಯರು ಮತ್ತು ಅಸ್ಪೃಶ್ಯರಿಗೆ ಶಿಕ್ಷಣದಲ್ಲಿ ಆದ್ಯತೆಗಳು ಮುಂತಾದವುಗಳಿಂದ ಸ್ವಾತಂತ್ರ್ಯ ಹೋರಾಟದ ಸಾಮಾಜಿಕ ಆಯಾಮವನ್ನು ಸ್ಪಷ್ಟಪಡಿಸಿದವು. ಇದಕ್ಕೆ ಸ್ಪಂದಿಸಿದ ಗಾಂಧೀಜಿ ಅಸ್ಪೃಶ್ಯತೆಯ ಸಮಸ್ಯೆಯನ್ನು ತಾವು ನಂಬಿದ್ದ ಹಿಂದೂ ಧರ್ಮದೊಳಗೆ ಪರಿಹರಿಸಲು ಪ್ರಯತ್ನ ಪಟ್ಟರು; ಅಂಬೇಡ್ಕರ್ ಜನರನ್ನು ಸಂಘಟಿಸುವ ಮೂಲಕ, ಕಾನೂನು ರಚನೆಗಳ ಮೂಲಕ ಹಾಗೂ ಸರಕಾರದ ಕಾರ್ಯಕ್ರಮಗಳ ಮೂಲಕ ಪರಿಹರಿಸಲು ಯತ್ನಿಸಿದರು. ಚುನಾವಣಾ ವ್ಯವಸ್ಥೆಯ ಮೂಲಕ ಈ ದೇಶದ ಜನತೆ ಲಿಂಗ, ಜಾತಿ-ಮತ, ವಿದ್ಯೆ, ಆಸ್ತಿ-ಅಂತಸ್ತು ತಂದೊಡ್ಡಿರುವ ಭೇದ-ಭಾವ ಮುರಿದು ಸಮಾನ ಮತದಾನದ ಹಕ್ಕು ಪಡೆದರು. ದೇಶದ ಪ್ರತಿಯೊಬ್ಬ ಪ್ರಜೆಯೂ ಸರಕಾರದ ದೃಷ್ಟಿಯಲ್ಲಿ ಸಮಾನ ಎಂಬ ದೃಷ್ಟಿಕೋನ ಸ್ಥಾಪಿತವಾಯಿತು. ಮತಧರ್ಮಗಳ ನಡುವೆ ವ್ಯತ್ಯಾಸ ಮಾಡದಿರುವುದು, ಧರ್ಮದೊಳಗಿನ ಶ್ರೇಣೀಕರಣ ಮತ್ತು ತರತಮತೆಯನ್ನು ಪರಿಗಣಿಸದಿರುವುದು ಅಂದಿಗೆ ಹೊಸ ಬೆಳವಣಿಗೆಯಾಗಿತ್ತು. ಹಲವು ಮತ-ಧರ್ಮ-ಸಂಸ್ಕೃತಿಗಳು ನೆಲೆಸಿರುವ ಈ ದೇಶದಲ್ಲಿ ಸ್ವಾತಂತ್ರ್ಯ ಮತ್ತು ಸಮಾನತೆ ಕುರಿತ ಬೆಳವಣಿಗೆ ಸಹಜವಾಗಿತ್ತು. ಸರ್ವಧರ್ಮಗಳ ನಡುವೆ ಸಮಭಾವ ಸ್ಥಿತಿ ಮೂಡಿದಂತೆ ತೋರಿತು. ಸ್ವತಂತ್ರ ಭಾರತದ ಐವತ್ತು ವರ್ಷಗಳ ನಂತರದ ಸ್ಥಿತಿ ಇದಕ್ಕೆ ವಿರುದ್ಧವಾಗಿದೆ. ಬಹುಸಂಖ್ಯಾತ ಧರ್ಮವೆಂದು ತನ್ನನ್ನು ಬಿಂಬಿಸಿಕೊಳ್ಳುವ ಆದರೆ ವಾಸ್ತವದಲ್ಲಿ ಬಹುಸಂಖ್ಯಾತವಲ್ಲದ ಹಿಂದೂ ಮತಧರ್ಮ ಸರ್ವಶ್ರೇಷ್ಠ ಸ್ಥಾನ ಸ್ಥಾಪಿಸಿಕೊಳ್ಳಲು ಮಾಡಿದ ಮತೀಯ ರಾಜಕಾರಣದ ಪ್ರತಿಫಲವಾಗಿ ಬಹು ಸಂಸ್ಕೃತಿಗಳ ಪ್ರತ್ಯೇಕ ಅಸ್ತಿತ್ವ, ಸ್ವಾತಂತ್ರ್ಯ ಮತ್ತು ಹಕ್ಕುಗಳು ಪ್ರಶ್ನಿತವಾಗಿವೆ.

ಇಂದು ಮತಶ್ರದ್ಧೆ ಜಗತ್ತಿನ ಪ್ರಮುಖ ಧರ್ಮಾವಲಂಬಿಗಳಲ್ಲಿ ಸಂಸ್ಕೃತಿಯ ಒಂದಂಗವಾಗಿದೆ, ವರ್ತಮಾನ ಕಾಲದ ಆಗುಹೋಗುಗಳನ್ನು ಪ್ರಭಾವಿಸುವ ಹಾಗೂ ನಿಯಂತ್ರಿಸುವ ಕಾರ್ಯದಲ್ಲಿ ನಿರತವಾಗಿದೆ, ಬಹುಸಂಸ್ಕೃತಿಗಳ ನಾಡಿನ ಸಮಾಜದಲ್ಲಿ ಸರ್ವ ಸಮುದಾಯಗಳ ಪ್ರತ್ಯೇಕ ಅಸ್ತಿತ್ವ, ವಿಶಿಷ್ಟತೆಗಳಿಗೆ ಧಕ್ಕೆ ಒದಗದ, ಸ್ವಾತಂತ್ರ್ಯ- ಹಕ್ಕುಗಳಿಗೆ ಚ್ಯುತಿಬಾರದ ಚಿಂತನಾ ಕ್ರಮ ಕಟ್ಟಿಕೊಳ್ಳಬೇಕಾದ ಅಗತ್ಯವನ್ನು ಸಾರಿಹೇಳುತ್ತಿದೆ.

**ಡಾ॥ ಶ್ರೀಧರ ಪಿಸ್ಸೆ**
ದೇಸಾಯಿ ಓಣಿ, ಕಮಲಾಪುರ - ೫೮೩ ೨೨೧

ಆವತ್ಯಾಕೋ ನನಗೆ ಇವರು ಸರಿಹೋಗುವುದಿಲ್ಲ ಅನ್ನಿಸಿತು. ಮನಸ್ಸು ತುಂಬಾ ರೋಸಿಹೋಗಿತ್ತು. ಆದಷ್ಟು ಬೇಗನೆ ಬೇರೆ ಡಿಪಾರ್ಟ್‌ಮೆಂಟಿಗೆ ಹೋಗೋಣ ಅನ್ನಿಸಿಬಿಟ್ಟಿತ್ತು. ಅದಕ್ಕೇನು ಮಾಡಬೇಕು ? ಈಗಂತೂ ಡಿಗ್ರಿ ಕೈಲಿದೆ. ಎಂ.ಎ.ಯನ್ನೇ ಮುಂದುವರೆಸಿದರಾಯಿತು. ಡಬಲ್ ಗ್ರ್ಯಾಜುಯೇಟ್ ಆಗಿ ದೊಡ್ಡದೊಂದು ಹುದ್ದೆಯನ್ನು ಸಂಪಾದಿಸಿದರೆ ಮುಗಿಯಿತು. ಆಮೇಲೆ ನಾನಾಯಿತು, ನನ್ನವಳಾಯಿತು. ಕಾರು, ಸೂಟು, ಟೈ, ದಿನನಿತ್ಯ ಟ್ರಿಮ್ ಆಗಿದ್ದು ಆರಾಮಾಗಿರಬಹುದು ಅಂದುಕೊಂಡೆ. ಕುಳಿತುಕೊಂಡಲ್ಲೇ ಕನಸಿನಲ್ಲಿ ವಿಹರಿಸಹತ್ತಿದೆ. ಕರ್ತವ್ಯಪ್ರಜ್ಞೆ ಎಚ್ಚೆತ್ತವನಂತೆ ತೀ. ನಂ. ಶ್ರೀ.ಯವರ ಕಪ್ಪು ಹೊದಿಕೆಯ ಪುಸ್ತಕ ಭಾರತೀಯ ಕಾವ್ಯಮೀಮಾಂಸೆ ಹಿಡಿದು ಕೊಂಡೆ. ಗಂಟೆ ಎರಡಾದರೂ ಒಂದು ಪುಟವೂ ಮುಗಿಯದಿದ್ದುದು ನನ್ನ ಕನಸು ಗಳಿನ್ನೂ ಮುಗಿದಿಲ್ಲ ಅನ್ನಿಸಿ ಹಾಸಿಗೆ ಹಾಸಿ, ಕನಸುಗಳಿಗೆ ವೇದಿಕೆ ಸಿದ್ಧಮಾಡಿಕೊಟ್ಟೆ. ಅದೆಷ್ಟು ಹೊತ್ತು, ಅದೆಷ್ಟು ಕನಸುಗಳನ್ನು ಕಂಡೆನೋ! ಬೆಳಿಗ್ಗೆ ಎದ್ದಾಗ ಗಂಟೆ ಮಾತ್ರ ಒಂಭತ್ತಾಗಿತ್ತು.

ಲಗುಬಗೆಯಿಂದ ಸ್ನಾನಮಾಡಿ, ನನಗಾಗಿಯೇ ತಡಮಾಡಿಬಂದಂತಿದ್ದ ಬಸ್ಸೇರಿ ಹೊರಟೆ. ಇವತ್ತೊಂದು ದಿನ ನಿತ್ಯದಂತೆ ಬೇಗನೆ ಹೊರಟುಹೋಗಿದ್ದರೆ ಶಾಲೆಯೆಂಬ ನರಕವಾದರೂ ತಪ್ಪುತ್ತಿತ್ತು ಅಂದುಕೊಂಡೆ. ಬಸ್ಸಿಗೆ ಬಯ್ದೆ. ದಾರಿಯುದ್ದಕ್ಕೂ ಅಕ್ಕಪಕ್ಕದ ಗುಡ್ಡಗಳು, ನೀಲಗಿರಿ ಗಿಡಗಳು, ಕಣಿವೆಯ ಹನುಮಪ್ಪ, ಗುಲ್ ಮೊಹರು ಗಿಡಗಳು ಯಾವುದೂ ರುಚಿಸಲಿಲ್ಲ. ಗುಲ್ ಮೊಹರಿನ ರಂಗುರಂಗಿನ ಸ್ವಾಗತವೇಕೋ ಅಂದು ಶನಿಯಂತಾಗಿತ್ತು. ಆಗ ಕನ್ನಡಿಯಲ್ಲಿ ಮುಖ ನೋಡಿಕೊಂಡರೆ ಹೇಗಿರುತ್ತದೆ ? ಮನಸ್ಸಿನ ದ್ವಂದ್ವದಂತೆ ವಿಕಾರವಾಗಿರುತ್ತಾ ? ಅಸಹ್ಯವಾಗಿರುತ್ತಾ ? ಊಹಿಸಿಕೊಳ್ಳಲಾಗಲಿಲ್ಲ. ತಲೆನೋವಿನಿಂದಾಗಿ ಸುತ್ತಿಗೆಯಿಂದ ಬಡಿದ ಹಾಗಾಗುತ್ತಿದ್ದು, ಬಸ್ಸಿನಿಂದಿಳಿದವನೇ ಆ ಎಂದಿನ ಗುಡ್ ಮಾರ್ನಿಂಗ್ ಸರ್‌ಗಳನ್ನು ಕೆಕ್ಕರಿಸಿ ನೋಡಿದವನೇ ಮಲ್ಲನ ಹೋಟೆಲ್‌ನೊಳಕ್ಕೆ ಸೇರಿಕೊಂಡು ಕಾಫಿ ಹೀರತೊಡಗಿದೆ. ಹಳ್ಳಿಯಾದರೂ ಸರಿ, ಇಲ್ಲಿ ಸಿಗುತ್ತಿದ್ದ ಸ್ಟ್ರಾಂಗ್ ಕಾಫಿ ನಂಬಿಕೊಂಡು ಜೀವನ ಸವೆಸಬಹುದೆನ್ನಿಸಿತು.

ಶಾಲೆಯ ಗಂಟೆ ಕಿವಿಗಡಚಿಕ್ಕಿದಂತಾಯಿತು. ಇನ್ನೂ ಅಲ್ಲೇ ನಿಂತರೆ ಊರವರು ಏನೆಂದಾರೆಂದು ಭಾರವಾದ ಹೆಜ್ಜೆ ಹಾಕುತ್ತ ಕಾಂಪೌಂಡಿನೊಳಕ್ಕೆ ಹೊರಟೆ. ಮತ್ತೆ ಅದೇ ಹುಡುಗರು. ಅದೇ ಗುಡ್ ಮಾರ್ನಿಂಗ್, ನಮಸ್ತೆ ಸರ್‌ಗಳು. ಯಾವ ಮಕ್ಕಳಿಗೂ ಮರುನಮಸ್ಕಾರ ಹೇಳದೆ ಸೀದಾ ಆಫೀಸಿನೊಳಗೆ ಹೋದೆ ಸಹಿ ಹಾಕಲು. ಮಕ್ಕಳು ಸಪ್ಪೆಯಾಗಿ ಹೋಗುತ್ತಿದ್ದುದು ಕಾಣಿಸಿತು. ಯಾಕೋ ಮಕ್ಕಳಿಗೆ ಶುಭಾಶಯ ಹೇಳಬೇಕೆನಿಸಿತು. ಮಕ್ಕಳಾಗಲೇ

*ಓಂ ತತ್ಸತ್ ಶ್ರೀ ನಾರಾಯಣ ನೀ*
*ಪುರುಷೋತ್ತಮ ಗುರು ನೀ...*

ಎಂದು ಪ್ರಾರ್ಥನೆ ಮಾಡುತ್ತಿದ್ದರು. ಮಕ್ಕಳಿಗೆ ಆ ಪ್ರಾರ್ಥನೆಯ ಅರ್ಥ ತಿಳಿದಿರಲಿಕ್ಕಿಲ್ಲ. ನನಗೂ ಸಂಪೂರ್ಣವಾಗಿ ತಿಳಿದಿದೆಯೇ ಎಂಬುದೂ ಗೊತ್ತಿರಲಿಲ್ಲ.

*   *   *

ವರ್ಷದ ಹಿಂದಿನ ಮಾತಿದು. ಅದೇ ಆಗ ಕೆಲಸಕ್ಕೆ ಸೇರಿದ್ದರಿಂದಲೋ ಚಿಕ್ಕ ವಯಸ್ಸಿನಲ್ಲಿ ಅದೂ ಸರಕಾರಿ ಕೆಲಸ ಸಿಕ್ಕಿದ್ದರಿಂದಲೋ ತುಂಬಾ ಹುರುಪಿನಿಂದಿದ್ದೆ. ಶಾಲೆಯ ಅಂದ ಚಂದ ನೋಡಿ ಮನಸ್ಸು ತುಂಬಿಬಿಟ್ಟಿತು. ಎಂತೆಂಥದ್ದೋ ವಿಚಾರಗಳು. ಎಷ್ಟು ಪವಿತ್ರ ಹುದ್ದೆಯಿದು. ಸಾವಿರಾರು ವಿದ್ಯಾರ್ಥಿಗಳ ಭವಿಷ್ಯದ ರೂವಾರಿ ನಾ. ಟಿಪ್ಪೋವಿನಂತೆ ಇವರನ್ನು ನಿಜವಾದ ಧಾರ್ಮಿಕರನ್ನಾಗಿಸಿ ಜಿಡ್ಡುವಿನಂತೆ ನಿರಂಕುಶಮತಿಯರನ್ನಾಗಿಸಿ, ಐನ್‌ಸ್ಟೈನ್‌ಗಳಂತಹ ಜೀನಿಯಸ್

ರವಿ ಹಂಪಿ

# ಪುರುಷೋತ್ತಮ ಗುರು ನೀ...!



ಗಳನ್ನಾಗಿ ಮಾಡಬೇಕೆಂದು ಧೇನಿಸುತ್ತಿದ್ದೆ.

ಮೊದಲ ದಿನ ತರಗತಿಗೆ ಕಾಲಿಟ್ಟಾಗ, ಎಂಟನೇ ತರಗತಿಯ ಮಕ್ಕಳಿಗೂ ಕನ್ನಡವನ್ನು ಸರಿಯಾಗಿ ಓದಲು ಬಾರದಿರುವುದನ್ನು ಕಂಡು ಆಕಾಶವೇ ಕಳಚಿ ಮೈಮೇಲೆ ಬಿದ್ದಂತಾಯಿತು. ಸುಧಾರಿಸಿಕೊಳ್ಳಲು ಎರಡು ದಿನಗಳೇ ಬೇಕಾದವು. ಹಳ್ಳಿಯ ಶಿಕ್ಷಕರೆದುರಿನ ಸವಾಲು ಯಾವುದೆಂದು ತಕ್ಷಣ ಅರಿವಿಗೆ ಬಂದಿತು. ಜಾಣ ಮಕ್ಕಳಿಗೆ, ಪ್ರತಿಭಾವಂತ ಮಕ್ಕಳಿಗೆ ಓದಿಸುವುದಕ್ಕಿಂತಲೂ, ಏನೂ ಬಾರದ ದಡ್ಡ ಮಕ್ಕಳಿಗೆ ಕಲಿಸುವುದೇ ಶ್ರೇಷ್ಠ ಅನ್ನಿಸಿತು. ಐದಾರು ದಿನಗಳಾದ ನಂತರ ಇವರು ಇಂಜಿನಿಯರ್ರೋ ಡಾಕ್ಟ್ರೋ ಒತ್ತಟ್ಟಿಗಿರಲಿ ಒದು ಬರಹ ಕಲಿತರೆ ಅದೇ ಪುಣ್ಯ ಎನ್ನುವಂತಾಯಿತು. ಎಷ್ಟೇ ಸರಳವಾಗಿ ತಿಳಿಸಿದರೂ ಅವರಿಗೆ ತಿಳಿಯುತ್ತಲೇ ಇದ್ದಿಲ್ಲ. ನಿನ್ನೆ ಹೇಳಿದ್ದನ್ನೂ ಹೇಳದಿದ್ದಾಗ, ಹೋಮ್‌ವರ್ಕ್ ಮಾಡದಿದ್ದಾಗ ಏನು ಮಾಡಬೇಕೆಂದು ತಿಳಿಯದೆ ಬಡಿಗೆಗೆ ಶರಣಾದೆ. ಕೆಲವು ಮಕ್ಕಳಲ್ಲಿ ಸುಧಾರಣೆ ಕಂಡಂತಾಯಿತು. ಮತ್ತೆ ನಾಲ್ಕಾರು ದಿನಗಳ ನಂತರ ಏನಾದರೂ ಕೇಳಿದಾಕ್ಷಣ ಕೈ ಚಾಚುವುದು ಸಾಮಾನ್ಯವಾಯಿತು. ಎಷ್ಟು ಹೊಡೆದರೂ ಫಲಕಾರಿ ಯಾಗದೆ ಬೇಸತ್ತುಬಿಟ್ಟೆ.



ಮಗನನ್ನು 'ಬೇಸಿಗೆ ಕ್ರಿಕೆಟ್ ಶಿಬಿರ'ಕ್ಕೆ ಕಳುಹಿಸ್ತ ಇದ್ದೇನೆ... ಅಂತ ಯಾರ್ಹತ್ರನೂ ಹೇಳ್ಬೇಡ್ರೀ...! ಮರ್ಯಾದೆ ಪ್ರಶ್ನೆ ಕಣ್ರೀ...!

ಸಮಾಧಾನವೆಂದರೆ ಮಕ್ಕಳಲ್ಲಿ ಒರಟುತನವಿರಲಿಲ್ಲ. ಎದುರು ಮಾತನಾಡು ತ್ತಿರಲಿಲ್ಲ. ನಾನು ಅದೆಷ್ಟೇ ಹೊಡೆದರೂ ಮಧ್ಯಾಹ್ನ ನನ್ನ ಊಟವಾದ ತಕ್ಷಣ ಉಂಡ ತಾಟನ್ನು ತೊಳೆಯಲು ಸ್ಪರ್ಧೆಯೇ ಏರ್ಪಡುತ್ತಿತ್ತು. ಬಸ್ಸಿನಿಂದಿಳಿದ ತಕ್ಷಣ ಬೇಡ ಬೇಡವೆಂದರೂ ಕೈಯೊಳಗಿನ ಚೀಲವನ್ನು ಕಸಿದುಕೊಳ್ಳುತ್ತಿದ್ದರು. ನನಗೆ ಮಕ್ಕಳು ಅದೆಷ್ಟೇ ಪ್ರೀತಿ, ವಿಧೇಯತೆ ತೋರಿಸಿದರೂ ಅವರ ದಡ್ಡತನ ರೊಚ್ಚಿಗೆಬ್ಬಿಸುತ್ತಿತ್ತು. ಊಟವಾದ ತಕ್ಷಣ ಸಮಯ ಉಳಿಸಿ ಹತ್ತಿರವಿದ್ದ ಮಕ್ಕಳಿಗೆ ಡ್ರಿಲ್ ವರ್ಕ್ ಮಾಡಿಸುವುದು, ಹೆಚ್ಚಿನ ವಿಷಯ ಹೇಳುವುದನ್ನು ಮಾಡಹತ್ತಿದೆ. ಆವತ್ತಿನಿಂದ ನನ್ನ ಊಟ ಆಗಿ ಬೆಲ್ ಬಾರಿಸುವವರೆಗೂ ಆಟದಲ್ಲೇ ಇರುತ್ತಿದ್ದ ಮಕ್ಕಳು ಸಿಟ್ಟಿಗೆಬ್ಬಿಸು ತ್ತಿದ್ದರು. ಕೆಲ ಸಾರೆ ನನಗೆ ಆಸಕ್ತಿಕರವಾಗಿ ಪಾಠ ಮಾಡಲು ಆಗುತ್ತಿಲ್ಲವೇನೋ ಅನ್ನಿಸಿದಾಗ ಏನು ಮಾಡಬೇಕೆಂದು ತೋಚದೆ ಸುಮ್ಮನಾಗುತ್ತಿದ್ದೆ.

ಇತ್ತೀಚೆಗೆ ಅಧಿಕಾರಿಗಳೆದುರಿಗೆ ಹಲ್ಲು ಗಿಂಜೋದು, ವರ್ಗಾವಣೆಗಾಗಿ ಎಡತಾಕುವುದು ನಡೆದೇ ಇತ್ತು. ಅದೆಷ್ಟು ಬೇಜವಾಬ್ದಾರಿ ಹುಡುಗರಿವರು ಎಂದು ಅನ್ನಿಸುತ್ತಿತ್ತಾದರೂ ಶಾಲೆಯ ಕಡೆಗೆ ಯಾವಾಗಲಾದರೊಮ್ಮೆ ಬರುತ್ತಿದ್ದ ಪಾಲಕರು ನಾನು ಚಿಕ್ಕವನಾದರೂ ''ನಮಸ್ಕಾರಾರೀ ಮಾಸ್ತರೇ, ನಮ್ ಹುಡುಗುನ್ನ ತಟಗ್ ಹುಶಾರ್ ಮಾಡ್ರೀ, ಕಾಲಿಗೆ ಬೀಳ್ತೀನಿ, ಬಾಳಾ ಚಿದಕ್ ಮಾಡ್ತಾನ್ರಿ'' ಎಂದು ಅಂದಾಗ ಕಸಿವಿಸಿ ಆಗುತ್ತಿತ್ತು. 'ಪುರುಷೋತ್ತಮ ಗುರು ನೀ' ಎಂಬ ಪ್ರತಿನಿತ್ಯದ ನುಡಿ ತುಂಬಾ ಗಾಯಗೊಳಿಸುತ್ತಿತ್ತು. ಒಂಟಿಯಾಗಿದ್ದಾಗ 'ಅದ್ಯಾವ ಪುರುಷಾರ್ಥಕ್ಕಾಗಿ ಈ ಶಿಕ್ಷಕನ ಕೆಲಸಕ್ಕೆ ಬಂದಿದ್ದೀಯಾ' ಎಂದು ಕೇಳಿಕೊಂಡಾಗೊಮ್ಮೆ ಕಳ್ಳ ಮನಸ್ಸು, ಪರಿಸರ, ಸಮಾಜ, ದಡ್ಡ ಮಕ್ಕಳೆಡೆಗೆ ಬೆರಳು ಮಾಡಿ ತೋರಿಸುತ್ತಿತ್ತು. ಇತ್ತೀಚೆಗೆ ಮನಸ್ಸಿನಲ್ಲಿನ ದ್ವಂದ್ವ ಅದೆಷ್ಟು ಹೆಚ್ಚಿತ್ತೆಂದರೆ ತಿನ್ನುವ ಅನ್ನ, ಕುಡಿಯುವ ನೀರೂ ಸಹ ನನ್ನ ಪುರುಷತ್ವಕ್ಕೇ ಸವಾಲು ಹಾಕುತ್ತಿದ್ದವು. ಕೆಲಬಾರಿ ಪ್ರಯತ್ನಿಸೋಣವೆಂದುಕೊಂಡರೂ ಮಕ್ಕಳ ನಿರುತ್ಸಾಹ, ಅಸಾಮರ್ಥ್ಯ, ಗ್ರಹಣ ಶಕ್ತಿಯ ಕೊರತೆ ಅಡ್ಡಗಾಲಾಗುತ್ತಿತ್ತು. ಕೆಲಬಾರಿ ಕಲಿಕೆ ಪೆಡಂಭೂತವಾಗಿ ಕಾಡುತ್ತಿತ್ತು.

ಮಧ್ಯದ ಕೆಲದಿನಗಳಲ್ಲಂತೂ ಶಾಲೆಯಲ್ಲಿ ಪೆನ್ನು, ಪುಸ್ತಕಗಳ ಕಳ್ಳತನ, ಹೊಡೆದಾಟ ಹೆಚ್ಚಿತ್ತು. ವರ್ಗಾವಣೆಗಾಗಿ ಐವತ್ತು ಸಾವಿರ ಹೆಂಗಪ್ಪಾ ಹೊಂದಿಸೋದು ಎಂಬ ಚಿಂತೆ ಕಾಡುತ್ತಿದ್ದು, ಮಧ್ಯ ಮಧ್ಯ ಅಧಿಕಾರಿಗಳ ಕಾಟ ಬೇರೆ. ಬಿಸಿ ಊಟದಲ್ಲಿ ಉಳಿದ ಹಣ, ಚಿಣ್ಣರ ಅಂಗಳದಲ್ಲಿ ಉಳಿಸಿದ ಹಣದಲ್ಲಿ ನಾನು ಜೂನಿಯರ್ ಎಂಬ ಕಾರಣಕ್ಕಾಗಿ ನನ್ನ ಪಾಲು ದಕ್ಕದಿದ್ದಾಗ ಕೋಪ ಇಮ್ಮಡಿಸಿ ಪಾಠದಲ್ಲಿ ಆಸಕ್ತಿ ಕಡಿಮೆ ಆಗುತ್ತಿದೆ ಅನ್ನಿಸಿತು. ನನ್ನ ಕನಸುಗಳು ಏನಾದವೆಂದು ನನಗೇ ಆಶ್ಚರ್ಯ ಆಗುತ್ತಿತ್ತು. ನಾನೂ ಭ್ರಷ್ಟತೆಗೆ ಮನಸ್ಸು ಮಾಡುತ್ತಿರುವೆನೆಂದು ಅರಿವಾದಾಗ ದುಃಖವಾಗುತ್ತಿತ್ತು.

ಕತ್ತೆಗೆ ಲತ್ತೆ ಪೆಟ್ಟು, ದಂಡಂ ದಶಗುಣಂ ಮಾತುಗಳು ನೆನಪಿಗೆ ಬಂದಾಗ ಪೆನ್ನುಗಳ ಕಳ್ಳತನ ನಿಂತಿತು. ಆದರೆ ಕಲಿಕೆ ಮಾತ್ರ ಸವಾಲಾಗಿಯೇ ಉಳಿಯಿತು. ಹೆಡ್ ಮಾಸ್ತರರಂತೂ ಅಡ್ಮಿಷನ್ ಹಾಗೂ ಟಿ.ಸಿ. ಕೊಡುವಾಗ ಬರುತ್ತಿದ್ದ ಹತ್ತಿಪ್ಪತ್ತು ರೂಪಾಯಿ ಕಂಡು ಸಾಕ್ಷಾತ್ ರುದ್ರನಂತಾಗುತ್ತಿದ್ದರು. ಆ ಮೊದಲಿನ ನೀರಾವರಿ ಪ್ರದೇಶದಲ್ಲಿ ಅಡ್ಮಿಷನ್‌ಗೆ ನೂರಾರು ರೂಪಾಯಿ ಬರುತ್ತಿದ್ದವೆಂದೂ ಇಲ್ಲಿ ಅದೇಕೆ ವರ್ಗ ವಾಯಿತೋ ಎಂದು ಗೋಳಾಡುತ್ತಿರುವುದನ್ನು ಕಂಡು ನಗು ಬರುತ್ತಿತ್ತು. ಇನ್ನಷ್ಟು ದಿನ ಇವರೊಂದಿಗೆ ಇದ್ದರೆ ನಾನೂ ಎಲ್ಲಿ ಹತ್ತಿಪ್ಪತ್ತು ರೂಪಾಯಿಗಳಿಗಾಗಿ ಪೇಚಾಡು ವಂತಾಗ ಬಹುದೆಂಬ ಭಯದಿಂದ ಪಾಠದಲ್ಲಿ ತಲ್ಲೀನ ನಾಗುತ್ತಿದ್ದೆ. ಮಕ್ಕಳು ಸ್ವಲ್ಪ ಸುಧಾರಿಸಿದರು. ವರ್ಗ ಆಗುವವರೆಗಾದರೂ ಸರಿಯಾಗಿ ಕಲಿಸೋಣವೆಂದು ನಿರ್ಧರಿಸಿಕೊಂಡೆ.

* * *

ಮನುಷ್ಯ ಅಕ್ಷರ ಕಲಿಯೋದಕ್ಕಿಂತ ಬದುಕನ್ನು ಕಲಿಯುವುದೇ ಶ್ರೇಷ್ಠ ಅನಿಸಿತು. ದಿನಕ್ಕೊಂದು ಮೌಲ್ಯ ಶಿಕ್ಷಣದ ಅವಧಿಯನ್ನು ನಾನಾಗಿಯೇ ಕೇಳಿ ಹಾಕಿಸಿಕೊಂಡೆ. ದಿನಕ್ಕೊಬ್ಬ ಉದಾತ್ತರ ಕತೆ ಹೇಳಲನುವಾದೆ. ಅದೆಷ್ಟೇ ಪ್ರಯತ್ನಪಟ್ಟರೂ ನನ್ನ ನಾಸ್ತಿಕಭಾವ ಪಾಠದಲ್ಲಿ ಬರುವುದನ್ನು ತಡೆಯಲಾಗುತ್ತಿರಲಿಲ್ಲ. ವಾಸ್ತವವಾದಿಯಾಗಿರೋದೇ ಮೇಲೆಂದು ನಂಬಿ ಸುಮ್ಮನಾಗುತ್ತಿದ್ದೆ.

ಹೀಗೆ ಒಂದು ದಿನ ಸತ್ಯದ ಬಗೆಗೆ ತಿಳಿಸುತ್ತ ಹರಿಶ್ಚಂದ್ರ, ಗಾಂಧೀಜಿಯವರ ಕಥೆ ಹೇಳಿದೆ. ಆ ಪುಟ್ಟ ಹುಡುಗಿ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಗಾಂಧೀಜಿಯವರಿಗೆ ತಾನೇ ಹಿತ್ತಲಿನಲ್ಲಿ ಬೆಳೆಸಿದ ಕಲ್ಲಂಗಡಿ ಹಣ್ಣು ನೀಡಿದ್ದನ್ನು ಮನದುಂಬಿ ವಿವರಿಸಿದೆ. ಮಕ್ಕಳ ತನ್ಮಯತೆ ನನ್ನಲ್ಲಿ ಉತ್ಸಾಹ ಮೂಡಿಸಿತು. ಸತ್ಯ ಹೇಳುವುದು, ಒಳ್ಳೆಯದನ್ನು ಮಾಡುವುದು; ದಾನ ಮಾಡುವುದು, ನಿಷ್ಕಾಮ ಕರ್ಮ ಇವೆಲ್ಲ ಶ್ರೇಷ್ಠವಾದ ಮೌಲ್ಯಗಳು; ಅದೇ ನಿಜವಾದ ಮಾನವ ಧರ್ಮ ಎಂದು ಹೇಳಿದೆ. ಕೆಲ ಮಕ್ಕಳು ಸುಳ್ಳೇ ಶ್ರೇಷ್ಠ, ಅದಕ್ಕೇ ಬೆಲೆಯಿದೆ ಎಂಬ ಧಾಟಿಯಲ್ಲಿ ಅಂಜುತ್ತಾ ಹೇಳಿದಾಗ ಒಂದು ಚಿಕ್ಕ ಪ್ರಯೋಗವೇಕೆ ಮಾಡಬಾರದು ಅನ್ನಿಸಿತು.

ತಕ್ಷಣ ತರಗತಿಯಲ್ಲಿನ ಇಬ್ಬರು ಬಡ ಹಾಗೂ ಇಬ್ಬರು ಶ್ರೀಮಂತ ಹುಡುಗರನ್ನು ಆರಿಸಿದೆ. ನಂತರ ನಾವು ಬಡವರಿಗೆ ಸಹಾಯ ಮಾಡಬೇಕಾ ಅಥವಾ ಬ್ಯಾಡವಾ, ಎಂದು ಕೇಳಿದೆ. ಎಲ್ಲ ಮಕ್ಕಳು ಒಕ್ಕೊರಲಿನಿಂದ ಸಹಾಯ ಮಾಡಬೇಕು ಸರ್ ಎಂದು ಕೂಗಿದರು. ಆಗ ಶ್ರೀಮಂತ ಮಕ್ಕಳೆಡೆಗೆ ಕೈತೋರಿಸಿ ಈಗ ನವಾಜ್ ಮತ್ತು ಸೂರಜ್ ತಮ್ಮಲ್ಲಿನ ಹೊಸ ನೋಟ್‌ಪುಸ್ತಕಗಳನ್ನು ರಂಗನಿಗೆ, ಹನುಮಂತನಿಗೆ ನೀಡಿ ಸಹಾಯ ಮಾಡ್ತಾರೆ ಎಂದು ಹೇಳಿದೆ. ಕಕ್ಕಾವಿಕ್ಕಿಯಾದ ನವಾಜ್ ಸೂರಜ್ ತಕ್ಷಣ ತಮ್ಮ ಹೊಸ ನೋಟ್‌ಪುಸ್ತಕಗಳನ್ನು ರಂಗನಿಗೆ, ಹನುಮಂತನಿಗೆ ನೀಡಿದರು. ನಾನು ಅಷ್ಟಕ್ಕೇ ಸುಮ್ಮನಾಗಲಿಲ್ಲ. ನವಾಜ್ ಸೂರಜ್‌ರೆಡೆಗೆ ತಿರುಗಿ ನೀವೀಗ ಮನೀಗಿ ಹೋಗ್ರಿ. ನಮ್ಮ ಬಡ ಗೆಳೆಯರಿಗೆ ನೋಟ್ ಪುಸ್ತಕ ನೀಡಿ ಸಹಾಯ ಮಾಡೀವಿ ಅಂತ ನಿಜ ಹೇಳ್ರಿ ಎಂದು ತಿಳಿಸಿದೆ. ಸತ್ಯ ಹೇಳೋದು ಒಳ್ಳೇದೋ ಕೆಟ್ಟದ್ದೋ ಇದರಿಂದ ತಿಳಿಯುತ್ತದೆಂದು ತಿಳಿಸಿದೆ. ಮಕ್ಕಳೆಲ್ಲರೂ ಈ ಹೊಸ ರೀತಿಯ ಪಾಠದಿಂದ ಖುಷಿಯಾಗಿದ್ದರು. ನನಗೂ ಏನನ್ನೋ ಸಾಧಿಸಿದಂತಾಗಿತ್ತು.

ಸಾಯಂಕಾಲ ಮನೆಗೆ ಬಂದಾಗ ನಾನು ತಪ್ಪು ಮಾಡಿದೆನೇನೋ ಅನ್ನಿಸಿತು. ಅಕಸ್ಮಾತ್ ಅವರುಗಳ ಮನೇಲಿ ಅವರಿಗೆ ಬೇರೆ ನೋಟ್‌ಪುಸ್ತಕ ಕೊಡಿಸಿದರೆ ಸೈ, ಅದಿಲ್ಲದೆ ಬೈದು ಕಳಿಸಿದರೆ? ಆಗ ಎಂಥ ಅನರ್ಥವಾದೀತು? ಸತ್ಯ ಹೇಳದೆ ಸುಳ್ಳು ಹೇಳಿದ್ದರೆ, ನೋಟ್ ಪುಸ್ತಕ ಕಳೆದಿದೆ ಅಂತಲೋ, ಮುಗಿದಿದೆ ಅಂತಲೋ ಹೇಳಿದ್ದರೆ ಬೇರೆ ಕೊಡಸ್ತಿದ್ರು ಸರ್, ಅದ್ಕೆ ಸತ್ಯ ಹೇಳ್ಬಾರ್ದು ಅಂದರೆ ಏನು ಮಾಡಲಿ? ಯಾವುದೋ ತತ್ವದ ಪ್ರತಿಪಾದನೆ ಮಾಡಲು ಹೋಗಿ ಇಕ್ಕಳದಲ್ಲಿ ಸಿಕ್ಕಹಾಗಿತ್ತು. ತಮ್ಮ ಗುರುಗಳಿಂದಲೇ ಸತ್ಯ ಅಪ್ರಯೋಜಕವೆಂದು ಸಾಬೀತಾದಮೇಲೆ ಅವರು ಮುಂದೆ ಬದುಕಿನಲ್ಲಿ ಹೇಗೆ ವರ್ತಿಸಬಹುದು? ಎಂಥಾ ನಾಗರಿಕರಾಗಬಹುದು? ಎದೆ ಅಳುಕಹತ್ತಿತು. ರಾತ್ರಿ ಪೂರ್ತಿ ದೇವರೇ (?) ಹಂಗಾಗದಿರಲಪ್ಪ, ಇನ್ನೊಮ್ಮೆ ಇಂಥ

ಕಾರ್ಯಕ್ಕೆ ಕೈ ಹಾಕಲಾರೆ ಎಂದು ದೀನನಾಗಿ ಬೇಡಿಕೊಂಡೆ.

ಮರುದಿನ ತುಸು ಅಳುಕುತ್ತಲೇ ತರಗತಿಗೆ ಹೋದೆ. ಮಕ್ಕಳಲ್ಲಿ ಅದೇ ವಿಧೇಯ ಭಾವ. ಕೇಳಲೋ ಬೇಡವೋ ಎನ್ನುತ್ತಲೇ ಅವರಿಬ್ಬರನ್ನೂ ಕರೆದೆ. ಸೂರಜ್‌ನ ತಂದೆ ಒಳ್ಳೇದನ್ನೇ ಮಾಡಿದ್ದಿ ಎಂದು ಹೇಳಿ ಮತ್ತೊಂದು ಹೊಸ ನೋಟ್ ಪುಸ್ತಕ ಕೊಡಿಸಿದರೆಂದು ತೋರಿಸಿದ. ಆದರೆ ಇನ್ನೊಂದು ಮಗುವಿನ ಪಾಲಕರು ನೀನೇನು ದಾನಶೂರ ಕರ್ಣನೋ, ನಾಳೆಯಿಂದ ಎಲ್ಲರಿಗೆ ಒಂದೊಂದು ಕೊಟಗಂತಾ ಹೋಗು! ನಿನ್ನ ಸಾಲಿ ಬಿಡಸ್ತೀವಿ ಅಂತ ಬೈದು, ಹೊಡೆದರೆಂದು ತಿಳಿಸಿದ. ಅವನ ನೋಟ್‌ಪುಸ್ತಕ ವಾಪಸ್ ಕೊಡಿಸಿ, ಬಡಹುಡುಗನಿಗೆ ನಾನು ಬೇರೊಂದನ್ನು ಅಂಗಡಿಯಿಂದ ತರಿಸಿ ಕೊಟ್ಟೆ. ಸತ್ಯ ಆಚರಿಸಬೇಕೋ ಬೇಡವೋ ಎಂಬ ನಿರ್ಣಯವನ್ನು ಹೇಗೆ ಹೇಳಬೇಕೆಂದು ತೋಚದಾದೆ. ಅರ್ಧ ಜಯವಾದರೂ ದೊರಕಿತ್ತಲ್ಲ! ''ಇನ್ನೂ ಅರ್ಧ ಜನ ಸತ್ಯದ ಅರ್ಥ ತಿಳಿಯಬೇಕಿದೆ. ಈಗ ನೀವೇ ಮುಂದಿನ ಜನಾಂಗದ ಗುರುಗಳು. ಅದರ ಹೊಣೆ ನಿಮ್ಮ ಮೇಲಿದೆ'' ಎಂದು ಹೇಳಿ ಬೀಸಿದ ಸುತ್ತಿಗೆಯಿಂದ ತಪ್ಪಿಸಿಕೊಂಡೆ.



* * *

ಸ್ವಲ್ಪ ದಿನಗಳಾದ ಮೇಲೆ, ಆ ಹುಡುಗನ ತಂದೆ-ತಾಯಿಯರೂ ಬೈದಿದ್ದರೆಂದೂ, ಅವನು ತನ್ನಲ್ಲಿದ್ದ ಹಣದಿಂದ ಬೇರೆ ನೋಟ್‌ಪುಸ್ತಕ ತಂದು ತೋರಿಸಿದ್ದನೆಂದೂ ತಿಳಿಯಿತು. ನಾನು ನಿಶ್ಚೇಷ್ಟಿತನಾದೆ. ಅವನೇಕೆ ಹಾಗೆ ಮಾಡಿದ? ನನಗೆ ತಿಳಿಯಲಿಲ್ಲ. ಸತ್ಯದ ಅವಮಾನ ಆ ಎಳೆಯ ಮನಸ್ಸಿಗೂ ಸರಿ ಕಾಣಲಿಲ್ಲವೇನು? ಅವನ ಆ ಬುದ್ಧಿ, ಹೃದಯ ವೈಶಾಲ್ಯತೆಯೆದುರು ನಾನು ಕುಬ್ಜನೆಂದೆನಿಸಿತು. ನಾನಿಲ್ಲಿ ಮಕ್ಕಳಿಂದ ಕಲಿಯಬೇಕಾದ್ದು ಬಹಳ ಇದೆ ಅನ್ನಿಸಿತು. ಮೌಲ್ಯಗಳ ಬಗೆಗೆ ನಿರ್ದಿಷ್ಟ ಭಾವ ಮೂಡಿಸಲು ವಿಫಲನಾದೆ ಎಂದೆನಿಸಿ ಅದನ್ನೇ ಸವಾಲೆಂದು ಬಗೆದು ಮಕ್ಕಳಿಗೆ ತೀರ ಹತ್ತಿರವಾಗಲು ಪ್ರಯತ್ನಿಸಿದೆ.

ನನ್ನ ಉತ್ಸಾಹದಿಂದಲೋ, ಮಕ್ಕಳಲ್ಲಾದ ಪರಿವರ್ತನೆಯಿಂದಲೋ ಮಕ್ಕಳು ಜಾಣರಾಗುತ್ತಿದ್ದರು. ನಾನು ವರ್ಗಾವಣೆಗಾಗಿ ಮೂವತ್ತು ಸಾವಿರ ರೂಪಾಯಿಗಳನ್ನು ಜಮಾಯಿಸಿಕೊಟ್ಟಿದ್ದರಿಂದ ಫೈಲು ರಾಜಧಾನಿಗೆ ಹೋಗಿದೆಯೆಂದು ತಿಳಿಯಿತು. ಇನ್ನು ಹೆಚ್ಚೆಂದರೆ ತಿಂಗಳಿರಬಹುದು. ಪಾಠದಲ್ಲಿ ತಲ್ಲೀನನಾದೆ. ಇತ್ತೀಚೆಗೆ ನಾನೂ, ಮಕ್ಕಳೂ ಹೆಚ್ಚಿಗೆ ಗೈರುಹಾಜರಾಗುತ್ತಿರಲಿಲ್ಲ. ದಂಡಿಯಾಗಿ ಮನೆಗೆಲಸವನ್ನು ಕೊಟ್ಟು ದಂಡಿಸುವುದನ್ನು ಬಿಟ್ಟಿದ್ದೆ. ಈ ಮಧ್ಯೆ ನನಗೆ ಚೆಸ್ ಆಟದ ವ್ಯಾಧಿ ತಗುಲಿತು. ಕೆಲಬಾರಿ ತರಗತಿಗೆ ಹೋಗದೆ ಸಹಶಿಕ್ಷಕರೊಂದಿಗೆ ಆಟವಾಡುತ್ತ ಸ್ಟಾಫ್ ರೂಮಿನಲ್ಲಿ ಕುಳಿತುಬಿಡುತ್ತಿದ್ದೆ. ಕೆಲವು ಸರ್ತಿ ಹುಡುಗರು ತಮಗೂ ಕಲಿಸಿರೆಂದು ದುಂಬಾಲು ಬೀಳುತ್ತಿದ್ದವು.

ಒಂದು ದಿನ ಚೆಸ್ ಕಾಯಿಗಳು ಸಿಕ್ಕಲಿಲ್ಲ. ಹಿಂದಿನ ದಿನ ಸಾಯಂಕಾಲ ಆಟ ಮುಗಿದಾದ ಮೇಲೆ ನನ್ನ ಕಪಾಟಿನಲ್ಲಿಡಲು ಆರನೇ ಕ್ಲಾಸಿನ ಹುಡುಗ ಕಾಸಿಮ್‌ನಿಗೆ ಕೊಟ್ಟಿದ್ದೆ. ಈಗ ಅವು ಅಲ್ಲಿಲ್ಲ ಎಂದರೆ ಏನರ್ಥ? ಕಾಸಿಮ್ ಚೆಸ್ ಕಲಿಸಲು ದುಂಬಾಲು ಬೀಳುತ್ತಿದ್ದ ವಿದ್ಯಾರ್ಥಿಗಳಲ್ಲಿ ಒಬ್ಬನಾಗಿದ್ದ. ಚೆಸ್ ಕಾಯಿಗಳು ಕಳೆದಾಗ ಅವನ ಮೇಲೆ ಅನುಮಾನ ಬಂದಿತು. ಕರೆಯಿಸಿ ಕೇಳಿದೆ. ತಾನು ಅಲ್ಲೆ ಇಟ್ಟಿದ್ದನೆಂದು ಹೇಳಿದ. ಮತ್ತೆ ಮತ್ತೆ ಕೇಳಿದರೂ ಅವನದು ಒಂದೇ ಉತ್ತರ. ಅವನಿಗೆ ಒಂದು ದಿನದ ವೇಳೆ ನೀಡಿ ಮನೆಯಲ್ಲಿ ಹುಡುಕಿ ತಾರೆಂದು ಹೇಳಿದೆ. ಅವನು ಮರುದಿನವೂ ತರದಿದ್ದಾಗ ಕೋಪ ತಾಳಲಾಗಲಿಲ್ಲ. ಆದರೂ ತಾಳ್ಮೆಗೆಡದೆ ಹಣದ ಆಮಿಷ ಒಡ್ಡಿ ಹತ್ತು ರೂಪಾಯಿ ಕೊಟ್ಟು, ನೀನು ಬೇರೆ ತೆಗೆದುಕೊಳ್ಳುವಿಯಂತೆ ಅವನ್ನು ತಂದುಕೊಡು ಎಂದೆ. ಆಗವನು ಏನ್ಸಾರ್ ನಿಮ್ಮತ್ರ ಮಾತ್ರ ರೊಕ್ಕಾ ಅದಾವೇನು? ನಾವು ಬಡವ್ರಿರ್‌ಬಹುದು. ಆದ್ರ ಕಳ್ತನ ಮಾಡಿಲ್ಲ ಎಂದು ಎದುರುತ್ತರ ಕೊಟ್ಟಾಗ ಸಿಟ್ಟು ನೆತ್ತಿಗೇರಿ ದನಕ್ಕೆ ಬಡಿದ ಹಾಗೆ ಬಡಿದೆ. ''ಕಳ್ನನ್ ಮಕ್ಳು ಎಷ್ಟು ಪಾಠ ಕೇಳಿದ್ರೇನು'' ಎಂದ್ಹೇಳಿ ಕೈ ಸೋಲುವವರೆಗೆ ಹೊಡೆದೆ. ಅವನು ಅಳುತ್ತ ಮನೆಗೆ ಹೋದ.

ಆಮೇಲಿಂದ ಕಾಸಿಮ್‌ನೊಡನೆ ಮಾತಾಡೋದನ್ನ, ಹೋಂವರ್ಕ್ ಚೆಕ್ ಮಾಡೋದನ್ನ ನಿಲ್ಲಿಸಿದೆ. ಹಾಗೆ ನಾಲ್ಕಾರು ದಿನಗಳು ಕಳೆದವು. ಕಾಸಿಮ್ ಎರಡು ಮೂರು ಬಾರಿ ಹೋಮ್‌ವರ್ಕ್ ತೋರಿಸಲು ಬಂದು, ನನ್ನ ತಾತ್ಸಾರ ಕಂಡು ಹಿಂತಿರುಗಿದ. ಅಷ್ಟರಲ್ಲಿ ನಾನು ನಿರೀಕ್ಷಿಸುತ್ತಿದ್ದ ವರ್ಗಾವಣೆ ಆದೇಶ ಬಂದೇ ಬಿಟ್ಟಿತು. ಅವತ್ತೇ ಶಿಕ್ಷಣಾಧಿಕಾರಿಗಳು ಶಾಲಾ ವೀಕ್ಷಣೆಗೆ ಬರುವವರಿದ್ದರು. ಎಲ್ಲ ಆಫೀಸನ್ನು ಸ್ವಚ್ಛ ಮಾಡಿದೆವು. ನನ್ನ ಬೋಧನೋಪಕರಣಗಳನ್ನು ಎಲ್ಲರಿಗೂ ಕಾಣುವಂತೆ ಹೊರಗೆ ತೆಗೆದಿಟ್ಟೆ. ಕಪಾಟನ್ನು ಸ್ವಚ್ಛಗೊಳಿಸಿ, ಕಸ ಹೊಡೆಯಿಸಲು ಸ್ವಲ್ಪ ಗೋಡೆಯ ಕಡೆಗೆ ಸರಿಸಿದೆ. ಕೈಕಾಲೊಳಗಿನ ಶಕ್ತಿ ಕುಸಿದಂತಾಗಿ ನೆಲದ ಮೇಲೆ ಕುಳಿತುಬಿಟ್ಟೆ. ಅಲ್ಲಲ್ಲಿ ಇಲಿ ಕಡಿದ ಚೆಸ್ ಕಾಯಿಗಳಿರುವ ಪ್ಲಾಸ್ಟಿಕ್ ಚೀಲ ಬಿದ್ದಿತ್ತು. ಕಣ್ಣೆದುರಿಗೆ ಅವತ್ತು ಕಾಸಿಮ್ನ ಬೆನ್ನಮೇಲೆ ಮೂಡಿದ ಬರೆಗಳು ನೆನಪಾದವು. ಈಗ ನನಗೆ ಯಾರು ಹೊಡೆಯಬೇಕು...? ಈ ಪಶ್ಚಾತ್ತಾಪವೂ ಕೇವಲ ನಾಟಕದಂತೆನ್ನಿಸಿತು. ಪಶ್ಚಾತ್ತಾಪದ ಬೆಂಕಿಯಲ್ಲಿ ಈ ಹೃದಯವಲ್ಲ, ದೇಹವೇ ಸುಟ್ಟಿದ್ದರೆ ಚೆನ್ನಾಗಿತ್ತು ಅನ್ನಿಸಿತು.

ಕಾಸೀಮ್‌ನನ್ನು ನೋಡೋಣ ಅನ್ನಿಸಿತು. ಕ್ಲಾಸಿಗೆ ಹೋದೆ. ಎಲ್ಲ ಹುಡುಗರೊಂದಿಗೆ ಅವನೂ ಕೈಮುಗಿದುಕೊಂಡು ನಿಂತು ಪ್ರಾರ್ಥನೆ ಮಾಡುತ್ತಿದ್ದ. ನನ್ನ ಕಣ್ಣುಗಳು ತೇವವಾದವು. ವರ್ಗಾವಣೆ ಆದೇಶ ನನಗರಿಯದಂತೆ ಚೂರುಚೂರಾಗಿತ್ತು. ಪ್ರಾರ್ಥನೆ ಇನ್ನೂ ನಡೆದೇ ಇತ್ತು.

ಓಂ ತತ್ಸತ್ ಶ್ರೀ ನಾರಾಯಣ ನೀ
ಪುರುಷೋತ್ತಮ ಗುರು ನೀ
ಸಿದ್ಧ ಬುದ್ಧ ನೀ ಸ್ಕಂದ ವಿನಾಯಕ
ಸವಿತಾ ಪಾವಕ...



ರವಿ ಹಂಪಿ
ಸಹಶಿಕ್ಷಕರು, ಹಿ. ಪ್ರಾ. ಅರಕೇರಾ - [illegible], ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲೆ

**ಮ**ಳೆಗಾಲ ಆಗತಾನೇ ಪ್ರಾರಂಭವಾಗಿತ್ತು. ಬೆಳಗಿನ ಹತ್ತು ಘಂಟೆ ಸಮಯ. ಆಸ್ಪತ್ರೆಗೆ ಬಂದಿದ್ದ ಹತ್ತಾರು ಜಾನುವಾರುಗಳಿಗೆ ಚಿಕಿತ್ಸೆ ನೀಡಿ ಕಳುಹಿಸಿ ಟಪಾಲು ನೋಡುತ್ತ ಕುಳಿತಿದ್ದೆ. ಆ ದಿನ ಮಳೆ ಇರಲಿಲ್ಲ, ಬಿಸಿಲು ಚುರುಕು ಮುಟ್ಟಿಸುವಂತಿತ್ತು. ಹೋಟೆಲ್‌ನಿಂದ ಚಹ ತರಿಸಿ ಕುಡಿಯುವುದೋ ಅಥವಾ ಇನ್ನರ್ಧ ಗಂಟೆ ನಂತರ ಆಗಬಹುದೋ ಎಂದು ಆಲೋಚಿಸುತ್ತಿದ್ದೆ. ಅಕ್ಕಪಕ್ಕದ ಹಳ್ಳಿಗಳಲ್ಲಿ ಎರಡು ಕಡೆ ಚಿಕಿತ್ಸೆ ನೀಡಲು ಹೋಗಬೇಕಾಗಿದ್ದುದರಿಂದ ಚಹ ಕುಡಿದೇ ಹೊರಡುವುದಾಗಿ ನಿರ್ಧರಿಸುವಷ್ಟರಲ್ಲಿ ಒಂದು ಸೈಕಲ್ ವೇಗವಾಗಿ ಆಸ್ಪತ್ರೆ ಆವರಣ ಪ್ರವೇಶಿಸಿತು. ಸ್ಟಾಂಡ್ ಇಲ್ಲದ ಸೈಕಲ್ಲನ್ನು ನೆಲದ ಮೇಲೆ ಮಲಗಿಸಿ ಏದುಸಿರು ಬಿಡುತ್ತ ಸುಮಾರು ೩೦-೩೫ ವರ್ಷ ಪ್ರಾಯದ ಒಬ್ಬಾತ ಆಸ್ಪತ್ರೆಯೊಳಗೆ ಬಂದ. ನೀಲಿ ಬಣ್ಣದ ಅಗ್ಗದ ಬಟ್ಟೆಯಲ್ಲಿ ಹೊಲಿದ ಬನಿಯನ್ ಮತ್ತು ಖಾಕಿ ಚಡ್ಡಿ ಹಾಕಿದ್ದ. ಬನಿಯನ್ ಒಂದೆರಡು ಕಡೆ ಹರಿದಿತ್ತು. ಸರಿಪಡಿಸಿರಲಿಲ್ಲ. ಖಾಕಿಚಡ್ಡಿಯೂ ಒಂದೆರಡು ಕಡೆ ಹರಿದಿದ್ದು ಅದನ್ನು ಬೇರೆ ಬಣ್ಣದ ಬಟ್ಟೆಯಲ್ಲಿ ಒರಟಾಗಿ ತೇಪೆ ಹಾಕಲಾಗಿತ್ತು. ಅವನ ಕಾಲಿನಲ್ಲಿ ಚಪ್ಪಲಿ ಇರಲಿಲ್ಲ, ತಲೆ ಕೆದರಿತ್ತು. ಮೈಯ್ಯಿಂದ ಬೆವರು ಹರಿಯುತ್ತಿದ್ದು ಬನಿಯನ್ ಎಲ್ಲ ಒದ್ದೆಯಾಗಿ ಮೈಗೆ ಅಂಟಿಕೊಂಡಿತ್ತು. ಅವನ ಹೋರಿಕರುವೊಂದಕ್ಕೆ ಹಿಂದಿನ ಸಾಯಂಕಾಲದಿಂದ ಕುಂಟು ಕಾಣಿಸಿಕೊಂಡಿದುದಾಗಿಯೂ ನಂತರ ಎಡಗಾಲಿನ ಚಪ್ಪೆಯ ಬಳಿ ಎಂಥದೋ ಊತ ಕಾಣಿಸಿಕೊಂಡು ಏನನ್ನೂ ತಿನ್ನುತ್ತಿಲ್ಲ, ಮೆಲುಕುಹಾಕುತ್ತಿಲ್ಲ, ಅಡ್ಡ ತಲೆ ಹಾಕಿ ಮಲಗಿದ್ದು ಎದ್ದೇ ಇಲ್ಲ, ತನಗೆ ತಿಳಿದ ಮದ್ದನ್ನು ಮಾಡಿದರೂ ಪ್ರಯೋಜನವಾಗಿಲ್ಲ ಎಂದು ತಿಳಿಸಿದ. ರಾತ್ರಿಯಿಡೀ ಮನೆಯವರಾರೂ ಒಂದು ಗಳಿಗೆ ಮಲಗಿಲ್ಲವೆಂತಲೂ ಅವರಿವರಿಂದ ಆಸ್ಪತ್ರೆಯನ್ನು ಪತ್ತೆಹಚ್ಚಿ ಬಂದಿರುವುದಾಗಿಯೂ ಕೂಡಲೇ ಬರಬೇಕೆಂದು ತಿಳಿಸಿ ವಿಧೇಯತೆಯೇ ಮೈವೆತ್ತಂತಿದ್ದ ಆತ ನನ್ನೆದುರು ಏದುಸಿರು ಬಿಡುತ್ತ ಕೈಮುಗಿದ ಭಂಗಿಯಲ್ಲಿಯೇ ನಿಂತ.

ಹಿಂದಿನ ಸಾಯಂಕಾಲ ಆತ ತಿಳಿಸಿದ ಹಳ್ಳಿಗೇ ಹೋಗಿದ್ದೆ. ಐದುನೂರು ಕುರಿಗಳ ಮಂದೆಗೆ 'ಕರುಳು ಬೇನೆ' ರೋಗಕ್ಕೆ ಮುಂಜಾಗ್ರತಾ ಚುಚ್ಚುಮದ್ದು ಹಾಕುತ್ತ ಕತ್ತಲಾಗುವವರೆಗೆ ಅಲ್ಲಿಯೇ ಇದ್ದೆ. ಆತ ಪ್ರಯತ್ನಿಸಿದ್ದರೆ ಹಿಂದಿನ ಸಾಯಂಕಾಲವೇ ಹೋರಿ ಕರುವಿಗೆ ಚಿಕಿತ್ಸೆ ಕೊಡಬಹುದಾಗಿತ್ತು. ಹಲವಾರು ಗಂಟೆಗಳ ಅಮೂಲ್ಯ ಸಮಯವನ್ನು ಹಾಳುಮಾಡಿ ರೋಗ ಉಲ್ಬಣಾವಸ್ಥೆ ತಲುಪುವಂತೆ ಮಾಡಿದ್ದಕ್ಕೆ ಪರಿತಪಿಸುತ್ತ ಸಮಯಕ್ಕೆ ಸರಿಯಾಗಿ ಚಿಕಿತ್ಸೆಯನ್ನು ಕೊಡಿಸುವುದರ ಬಗ್ಗೆ ಆತನಿಗೆ ತಿಳಿಹೇಳಿದೆ. ಆತ ಹೇಳುತ್ತಿದ್ದ ರೋಗಲಕ್ಷಣಗಳಿಂದ ಮಾರಣಾಂತಿಕ ರೋಗವಾದ 'ಚಪ್ಪೆರೋಗ' ಇರಬಹುದೆಂದು ಊಹಿಸಿ ಕೂಡಲೆ ಹೊರಟೆ.

ಔಷಧದ ಬ್ಯಾಗಿನಲ್ಲಿ ಸಂಬಂಧಪಟ್ಟ ಔಷಧಗಳಿರುವುದನ್ನು ಖಚಿತಪಡಿಸಿಕೊಂಡು ಬೈಕ್ ಏರಿ ಆತನನ್ನು ಹಿಂದೆ ಕೂರಿಸಿಕೊಂಡು ಕಿಕ್ ಹೊಡೆದೆ. ಹೆಣ್ಣುಮಕ್ಕಳಂತೆ ಎರಡು ಕಾಲುಗಳನ್ನೂ ಒಂದೇ ಕಡೆ ಇಳಿಬಿಟ್ಟು ಕೂತಿದ್ದವನನ್ನು ಕೆಳಗಿಳಿಸಿ ಸೈಕಲ್ ಮೇಲೆ ಕುಳಿತುಕೊಳ್ಳುವಂತೆ ಎರಡೂ ಕಡೆ ಕಾಲು ಹಾಕಿಸಿ ಕುಳ್ಳಿರಿಸಿದೆ. ಹೋಗುತ್ತ ಮಾರ್ಗದಲ್ಲಿ ''ನಿನ್ನ ಹೆಸರೇನು ?'' ಎಂದೆ. ''ನಂಜ ಸಾರ್'' ಎಂದ. ''ನಂಜಪ್ಪನೋ ? ನಂಜಣ್ಣನೋ ?'' ಎಂದೆ. ''ಬಡವ್ರಿಗೇಕೆ ಸಾರ್ ಅಪ್ಪ ಅಣ್ಣ. ನಾನು ಬರೀ ನಂಜ'' ಎಂದ. ಆತಂಕ ದುಗುಡ ತುಂಬಿದ ನಂಜಪ್ಪ ಮಾತಿಗೊಮ್ಮೆ ಕೈಮುಗಿಯುತ್ತಿದ್ದ. ಅತ್ಯಂತ ಮುಗ್ಧನೂ, ಸೌಮ್ಯ ಸ್ವಭಾವದವನೂ, ತರಲೆ ಚಾಡಿಛಿದ್ರ ಗಾಳಿ ಗಂಟ್ಲದವನಲ್ಲ ಎಂಬಂತೆಯೂ ಕಂಡ. ''ಭದ್ರವಾಗಿ ಬೈಕ್ ಹಿಡಿದುಕೋ... ಕೈಮುಗಿಯುತ್ತಲೇ ಬಿದ್ದು ಹೋದೀಯ'' ಎಂದೆ. ''ಆಯ್ತು ಬುದ್ದಿ... ದೇವ್ರು'' ಎಂದು ಮತ್ತೊಮ್ಮೆ ಕೈಮುಗಿದ. ಅವನ ದುಗುಡ ಸಡಿಲವಾಗಲೇ ಇಲ್ಲ. ಜನ್ಮದಲ್ಲಿ ಅದೇ ಮೊದಲ ಬಾರಿಗೆ ಬೈಕ್ ಏರಿದ್ದ ನಂಜಪ್ಪನಿಂದಾಗಿ ನನ್ನ ವಾಹನವು ಎಡಗಡೆ ಬಲಗಡೆ ಜೋಲಿ ಹೊಡೆಯುತ್ತಿತ್ತು. ರಸ್ತೆಯ ಮೇಲೆಲ್ಲ ಮಳೆಯಿಂದಾಗಿ ಕೆಸರು ಮತ್ತು ಹೊಂಡಗಳು. ಕೆಸರು ಹೆಚ್ಚಿದ್ದಲ್ಲಿ ನಂಜಪ್ಪನನ್ನು ಕೆಳಗಿಳಿಸುತ್ತ ಕೆಸರನ್ನು ದಾಟಿದ ಕೂಡಲೆ ಮತ್ತೆ ಹತ್ತಿಸಿಕೊಳ್ಳುತ್ತ ಎಂಟು ಕಿಲೋಮೀಟರ್ ದೂರ ಹೋಗಲು ಅರ್ಧ ಗಂಟೆಯೇ ಬೇಕಾಯಿತು.

ಗ್ರಾಮದ ಹೊರಗೆ ಬೋರೆಯ ಬುಡದಲ್ಲಿ ತೆಂಗಿನ ಗರಿಗಳಿಂದ ಸಿದ್ಧಪಡಿಸಿದ್ದ ನಂಜಪ್ಪನ ಗುಡಿಸಲಿತ್ತು.

# ಅಣ್ಣ



ಮರುದಿನ ಬೆಳಕು ಮೂಡುವ ಹೊತ್ತಿಗೆ ಮೆಕ್ಯಾನಿಕ್ ಜೊತೆ ಅವನ ಬೈಕಲ್ಲಿ ನಂಜಪ್ಪನ ಗುಡಿಸಲು ತಲುಪಿದೆ. ಹೋರಿಕರು ಸತ್ತುಹೋಗಿತ್ತು. ಹೋರಿಕರುವನ್ನು ಮಣ್ಣುಮಾಡಿ ನಂಜಪ್ಪ ತನ್ನ ಕುಟುಂಬದೊಂದಿಗೆ ಹಿಂದಿನ ರಾತ್ರಿಯೇ ಎತ್ತಲೋ ಹೊರಟುಹೋಗಿದ್ದ. ನನ್ನ ಬೈಕನ್ನು ನಂಜಪ್ಪ ಸುರಕ್ಷಿತವಾಗಿ ಗುಡಿಸಲ ಒಳಗೆ ನಿಲ್ಲಿಸಿ ಕಳ್ಳಕಾಕರ ಕಣ್ಣಿಗೆ ಬೀಳದಿರಲಿ ಎಂದು ಚಾಪೆ ಹೊಚ್ಚಿದ್ದ. ಬೈಕ್ ರಿಪೇರಿ ಮಾಡಿಸಿಕೊಂಡು ವಾಪಸು ಬಂದೆ. ಇದೆಲ್ಲ ನಡೆದು ಈಗ ೨೫ ವರ್ಷಗಳಾದರೂ ನಂಜಪ್ಪನ ಮಗಳ ''ಅಪ್ಪಾ... ಅಣ್ಣನ್ನ ಯಾವಾಗ ಕರಕೊಂಡು ಬರೋದು ?'' ಎಂಬ ಮಾತುಗಳು ನನ್ನ ಕಿವಿಯಲ್ಲಿ ಮಾರ್ದನಿಸುತ್ತಲೇ ಇವೆ.

ಗುಡಿಸಲಿನ ಎದುರು ಒಂದು ದಷ್ಟಪುಷ್ಟವಾದ ಎರಡೂ ಎರಡೂವರೆ ವರ್ಷದ ಹೋರಿಕರು ಅಡ್ಡತಲೆ ಹಾಕಿ ಮಲಗಿತ್ತು. ಬಿಸಿಲಿನ ಹೊಡೆತ ತಪ್ಪಿಸಲು ನಾಲ್ಕು ಗಳುಗಳನ್ನು ನೆಟ್ಟು ಪ್ಲಾಸ್ಟಿಕ್ ಹಾಳೆ ಹೊಚ್ಚಿ ನೆರಳು ಮಾಡಲಾಗಿತ್ತು. ಹತ್ತಿರ ಹೋಗಿ ನೋಡಿದ ನನಗೆ ನನ್ನ ಊಹೆ ಸರಿಯಾಗಿದ್ದು ಕಂಡು ದಿಗ್ಭ್ರಮೆಯಾಯಿತು. ಹೋರಿಕರುವಿಗೆ ಮಾರಣಾಂತಿಕ 'ಚಪ್ಪೆರೋಗ' ತಗುಲಿತ್ತು.

ತಡಮಾಡದೆ ಅರ್ಧ ಚೆಂಬಿನಷ್ಟು ನೀರನ್ನು ಕುದಿಯುವಂತೆ ಕಾಯಿಸಲು ತಿಳಿಸಿ ಸಂಬಂಧಪಟ್ಟ ಔಷಧಗಳನ್ನು ಹೊರತೆಗೆದೆ. ಮಳೆಯಲ್ಲಿ ತೋಯ್ದಿದ್ದ ತೆಂಗಿನಗರಿ ಯಡಮಟ್ಟೆಗಳನ್ನು ತುರುಕಿ ಒಲೆ ಹೊತ್ತಿಸಲು ನಂಜಪ್ಪನ ಹೆಂಡತಿ ಹರಸಾಹಸ ಪಡುತ್ತಿದ್ದಳು. ಗುಡಿಸಲಿನಲ್ಲೆಲ್ಲ ಹೊಗೆ ತುಂಬಿ ಕೈಗೂಸೊಂದು ಚೀರತೊಡಗಿತು. ನಾಲ್ಕೈದು ವರ್ಷ ವಯಸ್ಸಿನ ನಂಜಪ್ಪನ ಇನ್ನೊಬ್ಬ ಮಗಳು ಯಾವುದೋ ಒಂದು ಭೀಮಾಕಾರದ ನಿಕ್ಕರನ್ನು ಮಾತ್ರ ಗೋಣಿದಾರದಲ್ಲಿ ಬಿಗಿದು ಕಟ್ಟಿಕೊಂಡು ಇನ್ನುಳಿದಂತೆ ಬೆತ್ತಲಾಗಿದ್ದವಳು ಚೀರಾಡುತ್ತಿದ್ದ ತನ್ನ ತಮ್ಮನನ್ನು ಕಷ್ಟಪಟ್ಟು ಎತ್ತಿಕೊಂಡು ತನ್ನಮ್ಮನ ಆದೇಶಗಳಿಗೆ ಕಾಯುತ್ತ ಚಟುವಟಿಕೆಯಿಂದಿದ್ದಳು. ನೀರು ಕಾಯಲು ಹತ್ತು ನಿಮಿಷಗಳೇ ಬೇಕಾದವು. ಬಲ ಮಗ್ಗುಲಾಗಿ ಮಲಗಿದ್ದ ಹೋರಿ ಕ್ಷೀಣವಾಗಿ ಉಸಿರಾಡುತ್ತಿತ್ತು. ಎಡಚಪ್ಪೆಯ ಊತವನ್ನು ಮುಟ್ಟಿದರೆ 'ನರನರ' ಶಬ್ದ ಮಾಡುತ್ತಿತ್ತು. ಬಿಳಿಬಣ್ಣದ ಹಳ್ಳಿಕಾರ್ ತಳಿಯ ಹೋರಿ ನೋಡಲು ಅತ್ಯಂತ ಸುಂದರವಾಗಿತ್ತು. ಒಂದೇ ರೀತಿ ಸಮಸಮನಾಗಿ ಬೆಳೆದು ಆಕರ್ಷಕವಾಗಿದ್ದ ಕೋಡುಗಳಿಗೆ ನೀಲಿ ಬಣ್ಣವನ್ನೂ ಪಕ್ಕೆಯ ಮೇಲೆ ೪೦೦೦ ಎಂದೂ ಬರೆಯಲಾಗಿತ್ತು.

ಬೇಕಾದ ಎಲ್ಲ ಇಂಜೆಕ್ಷನ್‌ಗಳನ್ನು ಕೊಟ್ಟು ಚಪ್ಪೆರೋಗವು ವಿಷಮಸ್ಥಿತಿಗೆ ಏರಿ ನಿತ್ರಾಣವಾಗಿದ್ದ ಹೋರಿಕರುಗೆ ಡೆಕ್ಸ್ಟ್ರೋಸ್ ಸೆಲೈನ್ ಬಾಟಲುಗಳನ್ನು ಹಾಕಿದೆ. ಚಿಕಿತ್ಸೆ ಮುಗಿಯುವವರೆಗೂ ಮಾತಾಡದೆ ಗಂಭೀರವಾಗಿದ್ದ ನಂಜಪ್ಪ ನಾನು ಕೇಳಿದ್ದಕ್ಕೆ ಮಾತ್ರ ಉತ್ತರಿಸುತ್ತಿದ್ದ.

ಚಪ್ಪೆರೋಗದಲ್ಲಿ ಊತ ಬಂದ ಕಡೆ ಮಾಂಸಖಂಡಗಳಲ್ಲಿ ರೋಗಾಣುಗಳಿದ್ದು ಅವುಗಳು ಬಿಡುಗಡೆ ಮಾಡುವ ವಿಷಯುಕ್ತ ವಸ್ತುಗಳಿಂದ ಮಾಂಸಖಂಡಗಳು ಕೊಳೆಯುತ್ತವೆಂದೂ, ಆ ವಿಷಯುಕ್ತ ವಸ್ತುಗಳು ರಕ್ತಕ್ಕೆ ಸೇರಿದರೆ ಹೋರಿಯ ಪ್ರಾಣಕ್ಕೆ ಅಪಾಯ ಎಂದೂ ತಿಳಿಸಿದೆ. ರೋಗ ಕಾಣಿಸಿಕೊಂಡ ಕೂಡಲೆ ಚಿಕಿತ್ಸೆ ನೀಡಿದರೆ ಹೆಚ್ಚು ಪ್ರಯೋಜನಕಾರಿಯಾಗುತ್ತದೆ, ತಡಮಾಡಿದರೆ ಕಷ್ಟ ಎಂದು ಮತ್ತೊಮ್ಮೆ ಹೇಳಿದೆ. ನಂಜಪ್ಪ ಮುಗ್ಧವಾಗಿ ಹೋರಿಕರುಗೆ ಕಣ್ಣೆಸರು ಆಗಿರಬಹುದೇ ಎಂತಲೂ ಹದಿನೈದು ದಿನದ ಕೆಳಗೆ ತಾನು ಮಂಡ್ಯ ಕಡೆಯಿಂದ ತಂದುದಾಗಿಯೂ ಅಷ್ಟು ದೂರದಿಂದ ನಡೆದುಬಂದ ಹೋರಿಕರುಗೆ ನೋವಾಗಿ ಹೀಗಾಗಿರಬಹುದೇ ಎಂದೂ ಪ್ರಶ್ನಿಸಿದ. ಅದಾವುದಕ್ಕೂ ಈ ಕಾಯಿಲೆಗೂ ಸಂಬಂಧವಿಲ್ಲ ಹಾಗೂ ಈಗ ಹೋರಿಕರು ಬದುಕುಳಿಯುವುದೇ ಕಷ್ಟವೆಂದು ನಂಜಪ್ಪನಿಗೆ ಮನದಟ್ಟಾಗುವಂತೆ ತಿಳಿಸಿದೆ. ನಂಜಪ್ಪನ ಸ್ಥಿತಿ ಗಂಭೀರವಾಗುತ್ತ ಹೋಯಿತು. ದುಃಖ ಅಸಹಾಯಕತೆಗಳು ಅವನ ಮುಖದ ಮೇಲೆ ದಟ್ಟೈಸಿದವು. ಹೋರಿ ಮಾತ್ರ ನರಳುತ್ತ ಆಗೀಗ ಒದ್ದಾಡುತ್ತ ಮಲಗಿತ್ತು. ನಂಜಪ್ಪ ಹೋರಿಕರುವಿನ ತಲೆಯನ್ನೆತ್ತಿ ಎರಡೂ ಕೈಗಳಿಂದ ಅಪ್ಪಿ ಮುದ್ದಿಡುತ್ತ "ನನ್ನ ಕೈ ಬಿಡಬೇಡ ಬಸವ... ಕೈ ಬಿಡಬೇಡ ಕಣೋ" ಎನ್ನುತ್ತ ಗದ್ಗದಿತನಾದ. ಅವನ ಹೆಂಡತಿ ಹೋರಿಕರುವಿನ ಪಕ್ಕದಲ್ಲಿ ಕೂತು "ಬಡುವ್ರು ಮುಳುಗಿ ಹೋಗ್ತಿವಿ ಸ್ವಾಮಿ... ಏನಾರಾ ಮಾಡಿ ಇದೊಂದ್ ಸಲ ಉಳಿಸ್ಕೊಡ್ರಿ... ಇನ್ನೊಂದ್ ಸಲ ಇಷ್ಟು ರೇಟಿನ ಹೋರಿಕರುಗಳ ಸಾಕಲ್ಲ" ಎನ್ನುತ್ತ ಗ್ರಾಮದ ಕಡೆ ತಿರುಗಿ ಕೂತು "ಅವ್ವಾ... ಕೆಂಪವ್ವ... ನೋಡವ್ವ ನಮ್ಮುನ್ನ ಸ್ವಲ್ಪ ಕಣ್‌ಬಿಟ್ಟು..." ಎನ್ನುತ್ತ ಏನೇನೋ ಹರಕೆ ಹೊತ್ತುಕೊಳ್ಳುತ್ತ ಸೀರೆಸೆರಗನ್ನು ಕಣ್ಣಿಗೊತ್ತಿಕೊಂಡಳು. ನಿಕ್ಕರು ವಿನಾ ಬರಿಮೈಯ್ಯಲ್ಲಿದ್ದ ಅವರ ಮಗಳು "ಏನಾಗುತ್ತಂತಪ್ಪ ಬಸವನಿಗೆ" ಎನ್ನುತ್ತ ತಮ್ಮನನ್ನು ನೆಲದಮೇಲೆ ಬಿಟ್ಟಳು. ಪರಿಪೂರ್ಣ ಬೆತ್ತಲಿದ್ದ ಆ ಮಗು ಎರಡು ವರ್ಷಗಳಾದರೂ ಸೊಂಟದಲ್ಲಿ ಬಲವಿಲ್ಲದೆ ಕುಳಿತುಕೊಳ್ಳಲು ನಡೆಯಲು ಆಗದೆ ತೆವಳತೊಡಗಿತು. ಆಚೆ ಈಚೆ ಹೋಗದಂತೆ ಮಗುವನ್ನು ಹಿಡಿಯುತ್ತ ಮಗಳು ತನ್ನ ತಂದೆಯನ್ನು "ಅಪ್ಪಾ... ಯಾವಾಗ ನೀನು ಅಣ್ಣನ್ನ ಕರ್ಕೊಂಡು ಬರೋದು" ಎನ್ನುತ್ತ ಪೇಚಾಡತೊಡಗಿದಳು.

ನಂಜಪ್ಪ ಮಗಳ ಪ್ರಶ್ನೆಗೆ ಏನೂ ಉತ್ತರಿಸಲಿಲ್ಲ. ಎಲ್ಲ ಔಷಧಗಳನ್ನು ಬ್ಯಾಗಿನಲ್ಲಿ ವಾಪಸು ಇಟ್ಟು ನಂಜಪ್ಪನನ್ನು ಸಮಾಧಾನಪಡಿಸುತ್ತ ಗುಡಿಸಲಿನ ಒಳಗೆ ಹೋದೆ.

ನೆರಳೊಂದು ಬಿಟ್ಟರೆ ಗುಡಿಸಲಿನ ಹೊರಕ್ಕೂ ಒಳಕ್ಕೂ ಏನೂ ವ್ಯತ್ಯಾಸವಿರಲಿಲ್ಲ.

**ಪೇಟೆಂಟ್ ನೋಟೀಸ್**

ಹೆಲಿಕ್ಯಾಪ್ಟರ್, ವಿಮಾನಗಳಲಿ
ನಮ್ಮ
ಕಾಡಿನ ಹೊಸಹೊಸ ತಳಿ
ನಾಡಿನ ಹೊಸ ಹೊಸ ಬೀಜ
ಕದ್ದು ಹಾರಿದವರು
ನಮಗೇ ಹೇಳಿಕೊಡುತ್ತಿದ್ದಾರೆ
ಪರಿಸರ ವಾದ

ನಾಗತಿಹಳ್ಳಿ ರಮೇಶ
ನಂ. ೫೫೦, ೨ನೇ ಮುಖ್ಯರಸ್ತೆ, ವಾಟರ್‌ಟ್ಯಾಂಕ್ ರಸ್ತೆ
ಆರ್.ಬಿ.ಐ. ಲೇಔಟ್, ಪುಟ್ಟೇನಹಳ್ಳಿ
ಜೆ. ಪಿ.ನಗರ ೭ನೇ ಹಂತ, ಬೆಂಗಳೂರು - ೫೬೦ ೦೭೮

ನಂಜಪ್ಪ ನೆಲದ ಮೇಲೆ ಚಾಪೆ ಹಾಸಿದ. ಕುಳಿತುಕೊಂಡೆ. ಗುಡಿಸಲೆಲ್ಲ ಖಾಲಿ ಖಾಲಿ ಇತ್ತು. ಒಂದು ಮೂಲೆಯಲ್ಲಿ ಒಲೆ, ಒಂದೆರಡು ಪಾತ್ರೆ, ತಟ್ಟೆ, ಕಪ್ಪು, ಒಂದು ಮಡಕೆ ಇದ್ದವು. ಒಂದು ಬಟ್ಟೆ ಗಂಟು, ಹತ್ತಾರು ಕೆ.ಜಿ.ಯಷ್ಟು ಏನನ್ನೋ ತುಂಬಿಕೊಂಡ ಒಂದು ಚೀಲ ಅಲ್ಲೇ ಬಿದ್ದಿತ್ತು. ಒಂದು ಕಡೆಯಿಂದ ಇನ್ನೊಂದು ಕಡೆಗೆ ಕಟ್ಟಿದ ಹಗ್ಗದ ಮೇಲೆ ಅವರ ಬಟ್ಟೆಗಳೆಂಬ ಚಿಂದಿಗಳು ಒಣಗಿ ನೇತಾಡುತ್ತಿದ್ದವು. ಬಿಸಿಲು ಜೋರಾಗಿದ್ದುದರಿಂದ ಉಬ್ಬೆಗೆ ಹಾಕಿದಂತೆ ಬೆವರು ಕಿತ್ತುಬರುತ್ತಿತ್ತು. ನನ್ನೆದುರು ನಂಜಪ್ಪ ಅವನ ಹೆಂಡತಿ ನೆಲದ ಮೇಲೆ ಕೂತರು. ಮಗು ಗುಡಿಸಲಿನಲ್ಲೆಲ್ಲ ತೆವಳುತ್ತಿತ್ತು. ಆ ಮಗುವನ್ನು ನೋಡಿಕೊಳ್ಳುತ್ತ ಮಗಳು "ಯಾವಾಗ ಅಣ್ಣನ್ನ ಕರ್ಕೊಂಡು ಬರೋದು ?" ಎಂದು ಇನ್ನೇನು ಅತ್ತೇಬಿಡುವ ಧ್ವನಿಯಲ್ಲಿ ಅಪ್ಪ ಅಮ್ಮರನ್ನು ಪ್ರಶ್ನಿಸಿ ಉತ್ತರಕ್ಕೆ ಕಾತರಿಸತೊಡಗಿದಳು.

ನಂಜಪ್ಪ ಮಂಡ್ಯ ಜಿಲ್ಲೆಯ ಯಾವುದೋ ಹಳ್ಳಿಯವನು. ಈಗ ಹದಿನೈದು ದಿನದ ಕೆಳಗೆ ತಿಪಟೂರು ಕಡೆಗೆ ಬಂದಿದ್ದ. ವರ್ಷಾರು ತಿಂಗಳು ಹೊಟ್ಟೆಬಟ್ಟೆ ಕಟ್ಟಿ ದುಡಿದು ಒಂದಷ್ಟು ದುಡ್ಡು ಒಟ್ಟಾಗಿಸಿಕೊಂಡು ವಾಪಸಾಗುವ ಮಹದಾಸೆ ಇಟ್ಟುಕೊಂಡಿದ್ದ. ಇಲ್ಲಿಗೆ ಬರುವಾಗಷ್ಟೇ ಹೋರಿಕರುಗಳನ್ನು ಕೊಂಡುತಂದಿದ್ದ. ಇದನ್ನೆಲ್ಲ ನಂಜಪ್ಪ ವಿವರಗಳಿಗೆ ಹೋಗದೆ ಅಸ್ಪಷ್ಟವಾಗಿ ತಿಳಿಸಿದ.

ನಾನು ಸಾಯಂಕಾಲ ಮತ್ತೊಮ್ಮೆ ಬರುವುದಾಗಿ ತಿಳಿಸಿ ಆಸ್ಪತ್ರೆಗೆ ಹೊರಟೆ. ನಂಜಪ್ಪ ನನ್ನ ಜೊತೆ ಬಂದು ಸೈಕಲ್ಲನ್ನು ವಾಪಸು ತೆಗೆದುಕೊಂಡುಹೋದ.

ಆ ದಿನದ ಬಾಕಿ ಉಳಿದಿದ್ದ ಒಂದೆರಡು ಭೇಟಿಗಳನ್ನು ಮಾಡಿ ಚಿಕಿತ್ಸೆ ಕಾರ್ಯ ಪೂರೈಸಿ ಮನೆಯಲ್ಲಿ ಊಟ ಮಾಡಿ ಅವಸರಿಸುತ್ತ ನಂಜಪ್ಪನ ಗುಡಿಸಲು ತಲುಪಿದಾಗ ಸಾಯಂಕಾಲ ನಾಲ್ಕು ಗಂಟೆ ಆಗಿತ್ತು. ಹೋರಿಯ ಸುತ್ತ ರಾವು ಬಡಿದವರಂತೆ ಕುಳಿತಿದ್ದ ನಂಜಪ್ಪನ ಮನೆಯವರೆಲ್ಲ ನನ್ನನ್ನು ಕಂಡಕೂಡಲೆ ಎದ್ದುನಿಂತರು. ಹೋರಿಯ ಪರಿಸ್ಥಿತಿ ಇನ್ನಷ್ಟು ಬಿಗಡಾಯಿಸಿತ್ತೇ ವಿನಾ ಚಿಕಿತ್ಸೆಗೆ ಸ್ಪಂದಿಸಿರಲಿಲ್ಲ. ನಾನು ಹೋರಿಯನ್ನು ಉಳಿಸುವ ಮುಖಾಂತರ ನಂಜಪ್ಪನ ಕುಟುಂಬವನ್ನು ಉಳಿಸಬೇಕಿತ್ತು. ಚಿಕಿತ್ಸೆಯ ಎಲ್ಲ ಅವಕಾಶಗಳನ್ನು ತೂಗಿನೋಡಿ ಸೂಕ್ತವಾದ ಕರಾರುವಾಕ್ಕಾದ ಚಿಕಿತ್ಸೆಯನ್ನು ನೀಡಬೇಕಿತ್ತು. ಅದೇ ಸ್ಥಿತಿಯಲ್ಲಿದ್ದ ಎಷ್ಟೋ ರಾಸುಗಳನ್ನು ಬದುಕಿಸಿದ್ದ ನಾನು ಛಲದೊಂದಿಗೆ ಚಿಕಿತ್ಸೆ ನೀಡಿದೆ. ಹೋರಿಯ ಚಿಕಿತ್ಸೆಯನ್ನು ಸವಾಲಾಗಿ ತೆಗೆದುಕೊಂಡು ನನ್ನೆಲ್ಲ ಅನುಭವವನ್ನು ಪಣಕ್ಕಿಟ್ಟು ಹೋರಾಡಿದೆ.

ಆದರೆ ನನ್ನ ಪ್ರಯತ್ನಗಳಾಗಲೀ, ಸಾವಿನೊಡನೆ ಸೆಣಸುತ್ತಿದ್ದ ಹೋರಿಕರುವಿನ ಪ್ರಯತ್ನಗಳಾಗಲೀ ಫಲಿಸುವಂತೆ ಕಾಣಲಿಲ್ಲ. ಹೋರಿಯ ನರಳುವಿಕೆ ಮತ್ತು ಒದ್ದಾಟಗಳು ಹೆಚ್ಚಾಗುತ್ತಹೋದವು. ಹೋರಿಗೆ ಉಸಿರಾಡಲು ತೊಂದರೆಯಾಗತೊಡಗಿತು. ಅಧಿಕ ಪ್ರಮಾಣದಲ್ಲಿ ಸುರಿಯುತ್ತಿದ್ದ ಜೊಲ್ಲು ಗಂಟಲಲ್ಲಿ ಸಿಕ್ಕು ತೀವ್ರ ನೋವಿನ ಕೆಮ್ಮು ಪ್ರಾರಂಭವಾಯಿತು. ಹೋರಿಯ ಬಗ್ಗೆ ನನಗಿದ್ದ ಭರವಸೆಗಳೂ ಕರಗಿಹೋದವು. ಸಾವಿಗೆ ಕ್ಷಣಗಣನೆ ಆರಂಭವಾಗಿದ್ದಂತೆ ತೋರಿತು. ನಂಜಪ್ಪ ಹೋರಿಯ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ನೋಡಿದವರ ಕರುಳು ಕಿತ್ತುಬರುವಂತೆ ಕೂತ. ಮಗಳು ದಿಗ್ಭ್ರಮೆಯಲ್ಲಿದ್ದಳು. ಮಗು ಎಲ್ಲಿ ಬೇಕೆಂದರಲ್ಲಿ ತೆವಳುತ್ತಿತ್ತು. ನಂಜಪ್ಪನ ಹೆಂಡತಿ ಕಾಳಿನ ಚೀಲವನ್ನು ಬಗಲಲ್ಲಿಟ್ಟುಕೊಂಡು ಹಳ್ಳಿಯ ಕಡೆ ಹೊರಟಳು. ಹಿಟ್ಟಿನ ಗಿರಣಿಗೆ ಹೋಗುತ್ತಿರಬಹುದೆಂದು ಊಹಿಸಿದೆ. ಅದಾಗಲೇ ಸಮಯ ಆರು ಗಂಟೆ ಆಗಿತ್ತು.

ಅಷ್ಟರಲ್ಲಿ ನನ್ನ ಬೈಕಿನ ಹಿಂದಿನ ಗಾಲಿಯಲ್ಲಿ ಗಾಳಿಯೆಲ್ಲ ಖಾಲಿಯಾಗಿ ನೆಲಕ್ಕೆ ಹತ್ತಿಕೊಂಡಿರುವುದನ್ನು ಗಮನಿಸಿದೆ. ಪರೀಕ್ಷಿಸಿ ನೋಡಿದಾಗ ಪಂಕ್ಚರ್ ಆಗಿತ್ತು. ಆ ಕುಗ್ರಾಮದಲ್ಲಿ ರಿಪೇರಿ ಮಾಡುವವರು ಯಾರೂ ಇರಲಿಲ್ಲ. ಕತ್ತಲಾವರಿಸತೊಡಗಿದ್ದರಿಂದ ಎಂಟು ಕಿಲೋಮೀಟರ್ ದೂರದಿಂದ ಮೆಕ್ಯಾನಿಕ್‌ನನ್ನು ಕರೆತರಲು ಸಮಯವಿರಲಿಲ್ಲ. ಏನು ಮಾಡುವುದೆಂದು ಯೋಚಿಸುತ್ತಿರಬೇಕಾದರೆ ನಂಜಪ್ಪನ ಹೆಂಡತಿ ಬರಿಗೈಯ್ಯಲ್ಲಿ ಬರುತ್ತಿರುವುದು ಕಾಣಿಸಿತು.

ಪರಿಸ್ಥಿತಿಯ ಭಾರಕ್ಕೆ ನಲುಗಿಹೋಗಿದ್ದ ಮಗಳು ತನ್ನೆರಡೂ ಕೈಗಳಿಂದ ತಂದೆಯ ಮುಖವನ್ನು ತನ್ನೆಡೆಗೆ ತಿರುಗಿಸಿಕೊಂಡು "ಅಣ್ಣನನ್ನು ಯಾವಾಗ ಕರಕೊಂಡು ಬರೋದು... ಅಪ್ಪ... ನಿಜ ಹೇಳು" ಎಂದು ಒತ್ತಾಯಿಸತೊಡಗಿದಳು. ಆ ಪ್ರಶ್ನೆ ಬಂದ ಕೂಡಲೆ ನಂಜಪ್ಪನ ಮುಖದಲ್ಲಿ ಅಪರಾಧಿಭಾವ ಮೂಡುತ್ತಿದ್ದುದನ್ನೂ ಅವಳ ಪ್ರಶ್ನೆಯನ್ನು ನಿರ್ಲಕ್ಷಿಸುವುದನ್ನೂ ಗಮನಿಸಿದ ನಾನು "ಎಲ್ಲಿದ್ದಾನಪ್ಪ ಇವಳ ಅಣ್ಣ? ಅಣ್ಣನ್ನ ಕೇಳ್ತಾನೇ

ಇದ್ದಾಳೆ. ಕರ್‍ಕೊಂಡು ಬಾ'' ಎಂದೆ. ಆಗ ನಂಜಪ್ಪ ದೇಹವನ್ನೆಲ್ಲ ಒಂದು ಹಿಡಿ ಮಾಡ್ಕೊಂಡು ''ಅದಂಗಲ್ಲ ಸಾರ್. ನಮ್ಮೂರ ಹತ್ರ ಒಬ್ಬ ಸಾಹುಕಾರರಲ್ಲಿ ಸಾಲಮಾಡಿ ನನ್ನ ಮಗನ್ನ ಅವರಲ್ಲೇ ಬಿಟ್ಟು ಬಂದಿದೀನಿ. ಸಾಲಕ್ಕೆ ಒತ್ತೆ ಇಟ್ಟು ಬಂದಿದಿನಿ ಸಾರ್. ಓದೋ ಹುಡ್ಗನ್ನ ಬಿಡಿಸಿ ಚಾಕ್ರಿಗಾಕಿ ಬಂದಿದಿನಿ. ನಾನು ಯಾವತ್ತು ಸಾಲ ತೀರಿಸ್ತಿನೋ ಅವತ್ತು ನಮ್ಗೆ ನಮ್ಮಗ ಸಿಗ್ತಾನೆ. ಮಗನ ಚಾಕರಿ ಸಾಲದ ಬಡ್ಡಿಗೆ ವಜಾ ಆಗುತ್ತೆ. ಈ ಒಪ್ಪಂದದ ಮೇಲೆ ಸಾಲ ಈಸಿಕೊಂಡು ಅದೇ ದುಡ್ಡಿನಲ್ಲಿ ಹೋರಿಕರುಗಳನ್ನು ಕೊಂಡು ಊರಿನಿಂದ ದೂರ ಹೋಗಿ ದುಡಿಯೋಣಾಂತ ಇಲ್ಲಿಗೆ ಬಂದೆ. ವರ್ಷಾರು ತಿಂಗಳಲ್ಲಿ ಹೊಟ್ಟೆಬಟ್ಟೆ ಕಟ್ಟಿ ದುಡಿದು ದುಡ್ಡು ದುಂಡಗಿಟ್ಟು ಸಾವುಕಾರರ ಸಾಲ ತೀರಿಸಿಬಿಟ್ಟರೆ ಮಗನೂ ಸಿಗ್ತನೆ ಮತ್ತು ಹೋರಿಕರುಗಳೂ ಸ್ವಂತದವಾಗ್ತವೆ ಅಂತ ಪ್ಲಾನ್ ಮಾಡಿದ್ದೆ. ಆದ್ರೆ ಸಾರ್ ಈ ಹುಡ್ಗಿನೂ ಇವಳ ಅಣ್ಣನೂ ಬಲೇ ಜೀವ. ಒಂದು ಗಳಿಗೆ ಬಿಟ್ಟಿರ್‍ತಿರಲಿಲ್ಲ. ಪದೇ ಪದೇ ಅಣ್ಣನ್ನ ನೆನಸ್ಕೊಂಡು ಪೀಡುಸ್ತಾಳೆ. ನಮ್ಮ ಕೈಲೂ ನಮ್ಮಗನ ಬಿಟ್ಟಿರೋದಕ್ಕೆ ಆಗಲ್ಲ ಸಾರ್. ಇವತ್ತು ಸಂತೆಗೆ ಹೋಗಿ ಹೋರಿಕರುಗಳನ್ನು ಮಾರಿ ಮಗನ್ನ ಬಿಡಿಸ್ಕಂಡು ಬರಾಣ ಅಂತಿದ್ದೆ. ಇದನ್ನ ಮಗಳಿಗೆ ಸಹ ಹೇಳಿದ್ದೆ. ಅವುಳದನ್ನೇ ಪಟ್ಟುಹಿಡ್ದಿದಳೆ. ಹೋರಿಕರುಗಳನ್ನು ಮಾರಿದ ಮೇಲೆ ಬರೀ ಕೂಲಿ ಕೆಲಸ ಮಾಡ್ಕಂಡಿರೋಣ ಅಂತ ನಿರ್ಧರಿಸಿದ್ವಿ. ಆದ್ರೆ ಈಗ ಹಿಂಗಾಯ್ತು. ಈ ಹೋರಿಕರು ಸತ್ತೋದ್ರೆ ಹೊಸ ಹೋರಿ ಕೊಳ್ಳೋದಿಕ್ಕೆ ನನ್ನತ್ರ ದುಡ್ಡಿಲ್ಲ. ಬದುಕಿರೋ ಒಂಟಿ ಹೋರಿಕರು ಮಾರಲು ಹೋದರೆ ಕಮ್ಮಿ ರೇಟಿಗೆ ಕೇಳ್ತಾರೆ. ಎಲ್ಲ ಸರಿಯಾಗಿದ್ರೆ ಇಷ್ಟೊತ್ತಿಗೆ ನಮ್ಮಗ ನಮ್ಕಣ್ಮುಂದೆ ಇರ್‍ತ ಇದ್ದ ಸಾರ್. ಆದ್ರೆ ಈಗ ಹೆಂಗೆ ಸಾರ್ ಮಗನ್ನ ಬಿಡಿಸ್ಕಳಾದು ?'' ಎಂದು ಬಿಕ್ಕಿದ. ಬಡತನ ತನ್ನ ಇಕ್ಕುಳದಲ್ಲಿ ನಂಜಪ್ಪನನ್ನು ಅಪ್ಪಚ್ಚಿ ಮಾಡಿತ್ತು. ಒಬ್ಬ ಸದಸ್ಯನನ್ನು ಕಳೆದುಕೊಂಡು ಇಡೀ ಕುಟುಂಬ ತಬ್ಬಲಿಯಾಗಿತ್ತು.

ಮನೆಯಲ್ಲಿದ್ದ ಸ್ವಲ್ಪ ರಾಗಿಯನ್ನೋ ಏನನ್ನೋ ಆಗತಾನೆ ಅಂಗಡಿಗೆ ಮಾರಾಟ ಮಾಡಿ ನನಗೆ ಫೀಸ್ ಕೊಡಲು ದುಡ್ಡನ್ನು ಹೊಂದಿಸಿಕೊಂಡು ಬಂದಿದ್ದ ನಂಜಪ್ಪನ ಹೆಂಡತಿ ಕೈಯ್ಯಲ್ಲೊಂದಿಷ್ಟು ನೋಟುಗಳನ್ನು ಹಿಡಿದು, ''ನಾವು ಮುಟ್ಟಿದ್ದೆಲ್ಲ ಮಣ್ಣಾಗ್ತೈತೆ. ನಮ್ಮ ಬಾಳೆಲ್ಲ ಮೂರಾಬಟ್ಟೆ ಆಗೋಯ್ತು. ನಮ್ಮ ಹಣೆಬರಹ. ನೀವೂ ಮಾಡಾದ್ನೆಲ್ಲ ಮಾಡಿದ್ರಿ ಸಾರ್. ಎರ್‍ಡೆರ್‍ಡು ಸಲ ಬಂದ್ರಿ. ನಮ್ಮ ಕೈಲಾದ್ದು ಕೊಡ್ತೀನಿ. ನಮ್ಮನ್ನು ಋಣದಲ್ಲಿ ಹಾಕ್ಬೇಡಿ. ಇದ ತಗಳಿ ಸಾರ್'' ಎಂದು ಹನಿಗಣ್ಣಾದ ಆಕೆಯ ಕೋರಿಕೆಯನ್ನು ಖಡಾಖಂಡಿತವಾಗಿ ತಿರಸ್ಕರಿಸಿದೆ.

ಮಗನನ್ನು ಸಾಲಕ್ಕೆ ಒತ್ತೆ ಇಟ್ಟು ಬಂದುದರ ಬಗ್ಗೆ, ಸಾಯುತ್ತಿರುವ ಹೋರಿಕರುವಿನ ಬಗ್ಗೆ, ಉಪವಾಸವಿರಬಹುದಾದ ಅವರೆಲ್ಲರ ಬಗ್ಗೆ, ಇದ್ದ ನಾಲ್ಕು ಕಾಳನ್ನೂ ಮಾರಿ ಬಂದದ್ದರ ಬಗ್ಗೆ, ಓದೋ ಹುಡುಗನ ಚಾಕರಿಗಿಟ್ಟುಕೊಂಡಿರುವ ಸಾಹುಕಾರನ ಬಗ್ಗೆ ಯೋಚಿಸಿದಂತೆಲ್ಲ ನನ್ನಲ್ಲಿ ವಿಷಾದ ತುಂಬತೊಡಗಿತು. ನಂಜಪ್ಪನ ಕೈಹಿಡಿದುಕೊಂಡು, ''ನಂಜಪ್ಪ... ನಾಳೆ ಬೆಳಿಗ್ಗೆ ಆರು ಗಂಟೆಗೇ ಬರುತ್ತೇನೆ. ನೋಡೋಣ. ಧೈರ್ಯದಿಂದಿರು. ಹೋರಿಕರುಗೆ ಏನಾದರೂ ಹೆಚ್ಚುಕಡಿಮೆಯಾದರೆ ಬದಲಿ ವ್ಯವಸ್ಥೆಯ ಬಗ್ಗೆ ಯೋಚಿಸೋಣ. ಬೈಕ್ ಇಲ್ಲೇ ಇರಲಿ'' ಎಂದು ಬೀಳ್ಕೊಂಡು ಹೊರಟೆ. ನಂಜಪ್ಪನ ಹೆಂಡತಿ ನೋಟುಗಳನ್ನು ಕೈಯ್ಯಲ್ಲಿಯೇ ಹಿಡಿದುಕೊಂಡು ಹೋರಿಕರುವಿನ ಪಕ್ಕದಲ್ಲಿ ಶೂನ್ಯ ಮನಸ್ಕಳಾಗಿ ಕುಳಿತಿದ್ದಳು. ಮಗಳು ಒಂದು ಬಟ್ಟೆಯಲ್ಲಿ ಹೋರಿಕರುವಿನ ಜೊಲ್ಲು ಗೊಣ್ಣೆಯನ್ನು ಆಸ್ಥೆಯಿಂದ ಒರೆಸುತ್ತಿದ್ದಳು. ಇನ್ನೊಂದು ಮಗು ಯಾವುದರ ಪರಿವೆ ಇಲ್ಲದೆ ತೆವಳುತ್ತಿತ್ತು. ಗುಡಿಸಲಿಂದ ರಸ್ತೆಯ ತನಕ ನಂಜಪ್ಪ ಬಂದ. ಪವಾಡವೋ ಎಂಬಂತೆ ನನ್ನ ಒಬ್ಬ ಸ್ನೇಹಿತ ಅದೇ ರಸ್ತೆಯಲ್ಲಿ ಬೈಕಲ್ಲಿ ಹೋಗುತ್ತಿದ್ದುದರಿಂದ ಸುಲಭವಾಗಿ ಮನೆ ಸೇರಿದೆ.

ಮರುದಿನ ಬೆಳಕು ಮೂಡುವ ಹೊತ್ತಿಗೆ ಮೆಕ್ಯಾನಿಕ್ ಜೊತೆ ಅವನ ಬೈಕಲ್ಲಿ ನಂಜಪ್ಪನ ಗುಡಿಸಲು ತಲುಪಿದೆ. ಹೋರಿಕರು ಸತ್ತುಹೋಗಿತ್ತು.

ಹೋರಿಕರುವನ್ನು ಮಣ್ಣುಮಾಡಿ ನಂಜಪ್ಪ ತನ್ನ ಕುಟುಂಬದೊಂದಿಗೆ ಹಿಂದಿನ ರಾತ್ರಿಯೇ ಎತ್ತಲೋ ಹೊರಟುಹೋಗಿದ್ದ.

ನನ್ನ ಬೈಕನ್ನು ನಂಜಪ್ಪ ಸುರಕ್ಷಿತವಾಗಿ ಗುಡಿಸಲ ಒಳಗೆ ನಿಲ್ಲಿಸಿ ಕಳ್ಳಕಾಕರ ಕಣ್ಣಿಗೆ ಬೀಳದಿರಲಿ ಎಂದು ಚಾಪೆ ಹೊಚ್ಚಿದ್ದ.

ಬೈಕ್ ರಿಪೇರಿ ಮಾಡಿಸಿಕೊಂಡು ವಾಪಸು ಬಂದೆ.

ಇದೆಲ್ಲ ನಡೆದು ಈಗ ೨೫ ವರ್ಷಗಳಾದರೂ ನಂಜಪ್ಪನ ಮಗಳ ''ಅಪ್ಪಾ... ಅಣ್ಣನ್ನ ಯಾವಾಗ ಕರಕೊಂಡು ಬರೋದು ?'' ಎಂಬ ಮಾತುಗಳು ನನ್ನ ಕಿವಿಯಲ್ಲಿ ಮಾರ್ದನಿಸುತ್ತಲೇ ಇವೆ.

**ಡಾ|| ಮಿರ್ಜಾ ಬಷೀರ್**
ಅಸಿಸ್ಟೆಂಟ್ ಡೈರೆಕ್ಟರ್, ಎಸ್.ಎಸ್.ಎಸ್. ಮ್ಯಾನ್‌ಷನ್
೬೦ ಅಡಿ ರಸ್ತೆ, ೧೪ನೇ ತಿರುವು, ವಿನೋಬಾನಗರ, ಶಿವಮೊಗ್ಗ

# ಜೈ ಜೈ ಕನ್ನಡ ತಾಯಿಗೆ



ಜೈ ಜೈ ಜೈ ಜೈ ಕನ್ನಡ ತಾಯಿಗೆ
ಸಾವಿರ ಸಾವಿರ ವರ್ಷಗಳು
ತುಂಬಿದ ಈ ಬಾಳಿಗೆ.

ಅರಿವಿನ ಆಳದ ಮುತ್ತಿನ ಮಣಿಗಳು
ಅ ಆ ಇ ಈ, ಒಂದು, ಎರಡು, ಮೂರು...
ಹರಿದುಕ್ಕಿದ ಕಾವ್ಯದ ಸಾಲುಗಳೇನು ?
ಕಥೆಗಳಿಗಿಲ್ಲಿ ಬರ ಉಂಟೇ ?
ಶಿಲ್ಪದ ನಾಡು, ಗಂಧದ ಬೀಡು
ನಿತ್ಯೋತ್ಸವ ನುಲಿದಾ ನಾಡು
ನವ ತಂತ್ರಜ್ಞಾನದ ಗೂಡು !

ಎದೆಯೊಳು ಬೆಳಗಿದೆ ದೀಪ
ನೋವಿದೆ ಇಲ್ಲಿ ಅಯ್ಯೋ ಪಾಪ
ದುಡಿದ ರಟ್ಟೆಗೆ, ಹಸಿದ ಹೊಟ್ಟೆಗೆ
ಇರಲೇಬೇಕು ನ್ಯಾಯ
ಇದ್ದರದೇ ನೆಮ್ಮದಿ ಕನ್ನಡ ತಾಯಿಗೆ
ಜೈ ಜೈ ಜೈ ಜೈ ಕನ್ನಡ ತಾಯಿಗೆ...

ಕಂಠದ ಸಿರಿಯದು ಕನ್ನಡ ನುಡಿಗಳು
ರಂಗಸ್ಥಳದಲ್ಲಿ ಆಟದ ಬೇಟವೇ ಕನ್ನಡವು
ರಕ್ತದ ಕಣ ಕಣ ಕಟ್ಟಿದ ನಾಡಿದು
ಗೋವಿನ ಹಾಡಿನ ದೇಶವಿದು.

ಕರ್ನಾಟಕವೆಂಬೀ ಹೆಸರಿಗೆ ತುಂಬಿದೆ ಐವತ್ತು
ಸುವರ್ಣದ ಮೆರಗು ಏಕೀಕರಣಕೆ ಈ ಹೊತ್ತು
ಇರಲಿ ಹೀಗೇ ಅಖಂಡ ನಾಡು ಕನ್ನಡವು
ವಿಶ್ವದ ಎಲ್ಲಾ ಭಾಷೆಯೂ ಇರಲಿ ನಮ್ಮೊಳಗೆ
ಅರಿವನು ತರಲಿ ಕನ್ನಡದೆದೆಯೊಳಗೆ
ಸಿರಿಗನ್ನಡ ಬೆಳೆಯುತ ಸಾಗಲಿ ಜಗದೊಳಗೆ

ಜೈ ಜೈ ಜೈ ಜೈ ಕನ್ನಡ ತಾಯಿಗೆ...

(ಸುವರ್ಣ ಕರ್ನಾಟಕ - ೨೦೦೬ರ ನೆನಪಿಗೆ)

ಬಂದಗದ್ದೆ ರಾಧಾಕೃಷ್ಣ
ಪುಸ್ತಕ ಹೊಂಬಾಳೆ, ಕೆಳದಿ ಅಂಚೆ, ಸಾಗರ ತಾಲ್ಲೂಕು,
ಶಿವಮೊಗ್ಗ ಜಿಲ್ಲೆ - ೫೭೭ ೪೦೧

ಯಾರಿಗೂ ಹೆಚ್ಚು ಸಂತೋಷ ತರದ, ಯಾರಿಗೂ ಹೆಚ್ಚು ಆಘಾತ ಉಂಟು ಮಾಡದ ಬಜೆಟ್ ಎಂದು ವರ್ಣಿಸಲ್ಪಟ್ಟ ೨೦೦೭-೦೮ರ ಕೇಂದ್ರ ಬಜೆಟ್ ಸೇವಾ ತೆರಿಗೆಯ ವಿಚಾರದಲ್ಲಿಯೂ ಸಹ ಮೇಲಿನ ಹೇಳಿಕೆಯನ್ನೇ ಗಮನದಲ್ಲಿರಿಸಿಕೊಂಡಿದೆ ಎಂದು ಹೇಳಬಹುದು. ತೆರಿಗೆ ಸಂಗ್ರಹದ ವಿಚಾರದಲ್ಲಿ ಸರಕಾರಕ್ಕೆ ಸುಲಭ ಹಾಗೂ ಸೂಕ್ತ ಆದಾಯದ ಮೂಲವಾದ ಸೇವಾ ತೆರಿಗೆಯು ವರ್ಷ ಕಳೆದಂತೆ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಾ ಇದೆ. ಇತ್ತೀಚಿನ ಮುಂಗಡಪತ್ರದಲ್ಲಿ ಸಹ ಹಲವಾರು ಬದಲಾವಣೆಗಳನ್ನು ಈ ಹಿನ್ನೆಲೆಯಲ್ಲಿಯೇ ಮಾಡಲಾಗಿದೆ. ಸೇವಾ ತೆರಿಗೆಯ ತೆಕ್ಕೆಗೆ ಮತ್ತೆ ಏಳು ಸೇವೆಗಳನ್ನು ಸೇರಿಸಲಾಗಿದೆ. ಅಲ್ಲದೇ, ಸೇವಾ ತೆರಿಗೆಗೆ ಒಳಪಡುವ ಆದಾಯದ ಮಿತಿಯನ್ನು ಹೆಚ್ಚಿಸಿ ತೆರಿಗೆದಾರರಿಗೆ ಅಲ್ಪಪ್ರಮಾಣದ ಹೊರೆಯನ್ನು ಇಳಿಸಲಾಗಿದೆ.

**ಏನಿದು ಸೇವಾ ತೆರಿಗೆ ?**

ಸೇವಾ ತೆರಿಗೆಯು ಸೇವೆಗಳ ಮೇಲೆ ಆಕರಿಸುವ ತೆರಿಗೆಯಾಗಿದೆ. ಅಂದರೆ ಟೆಲಿಫೋನ್, ವಿಮೆ, ದಳ್ಳಾಳಿ, ಸಾರಿಗೆ, ಬ್ಯಾಂಕಿಂಗ್ ಇತ್ಯಾದಿ ಸೇವೆಗಳ ಬಳಕೆಯ ಮೇಲೆ ಗ್ರಾಹಕನು ಕೊಡಮಾಡುವ ತೆರಿಗೆಯಾಗಿದೆ. ಸೇವಾ ತೆರಿಗೆಯು ಸಾರ್ವಜನಿಕ ಹಣಕಾಸಿನಲ್ಲಿ ಬಳಕೆಯಾಗುತ್ತಿರುವ ಇತ್ತೀಚಿನ ಪದವಾಗಿದೆ. ಭಾರತದಲ್ಲಿ ಈಗಿನ ಪ್ರಧಾನ ಮಂತ್ರಿಗಳಾದ ಡಾ|| ಮನಮೋಹನ್ ಸಿಂಗ್ ಅವರು ಈ ಹಿಂದೆ ಹಣಕಾಸು ಮಂತ್ರಿಯಾಗಿದ್ದಾಗ ಪ್ರಥಮ ಬಾರಿಗೆ ಪ್ರಾರಂಭಿಸಿದರು. ಅಂದರೆ ಸೇವಾ ತೆರಿಗೆ ಪ್ರಾರಂಭವಾದ್ದು ೧೯೯೪ರಲ್ಲಿ. ಆ ಸಂದರ್ಭದಲ್ಲಿ ಈ ತೆರಿಗೆಯನ್ನು ಕೇವಲ ಸ್ಟಾಕ್ ಬ್ರೋಕಿಂಗ್, ಟೆಲಿಫೋನ್ ಹಾಗೂ ಸಾಮಾನ್ಯ ವಿಮೆ ಸೇವೆಗಳಿಗೆ ಮಾತ್ರ ವಿಧಿಸ ಲಾಗುತ್ತಿತ್ತು. ಈಗ ಸೇವಾ ತೆರಿಗೆಯ ವ್ಯಾಪ್ತಿಯು ಪ್ರತಿ ಮುಂಗಡಪತ್ರದಲ್ಲಿ ವಿಸ್ತಾರಗೊಳ್ಳುತ್ತಾ ಇದೆ.

**ಏಕೆ ಸೇವಾ ತೆರಿಗೆ ?**

ಸೇವಾ ತೆರಿಗೆಯ ಕಡೆಗೆ ಇತ್ತೀಚಿನ ಸರಕಾರಗಳು ಗಮನ ಹರಿಸಲು ಕಾರಣ ದೇಶದ ಅಭಿವೃದ್ಧಿಯಲ್ಲಿ ಸೇವಾವಲಯ ಪ್ರಾಮುಖ್ಯತೆಯೇ ಕಾರಣವಾಗಿದೆ. ಬೆಳವಣಿಗೆಯ ದರದಲ್ಲಿ ಉಳಿದೆರಡು ವಲಯಕ್ಕಿಂತ ಮುಂಚೂಣಿಯಲ್ಲಿರುವ ಸೇವಾವಲಯವು ಒಟ್ಟು ಜಿ.ಡಿ.ಪಿ.ಗೆ ಶೇಕಡಾ ೫೫ರಷ್ಟು ಕೊಡುಗೆ ಸಲ್ಲಿಸುತ್ತಾ ಇದೆ. ಹೀಗಾಗಿ ಈ ವಲಯದಿಂದ ಸರಕಾರದ ಖಜಾನೆಗೂ ಹೆಚ್ಚುಪಾಲು ದೊರೆಯಲಿ ಎಂದು ನಿರೀಕ್ಷಿಸಲಾಗಿದೆ.

ಕೇಂದ್ರೀಯ ಅಂಕಿ-ಸಂಖ್ಯಾ ಸಂಘಟನೆ ಸಂಗ್ರಹಿಸಿದ ಮಾಹಿತಿಯಂತೆ ವ್ಯಾಪಾರ ಸೇವೆ, ಸಾರಿಗೆ ಹಾಗೂ ಸಂಪರ್ಕಗಳು ಸೇವಾವಲಯಕ್ಕೆ ಶೇಕಡಾ ೪೪ರಷ್ಟು ವಂತಿಗೆ ಸಲ್ಲಿಸುತ್ತಿದ್ದು, ಜಿ.ಡಿ.ಪಿ.ಯ ೧೧.೨ರಷ್ಟಿದೆ. ಹಣಕಾಸು, ವಿಮೆ ಹಾಗೂ ರಿಯಲ್ ಎಸ್ಟೇಟ್ ಮತ್ತು ವ್ಯವಹಾರ ಸೇವೆಗಳು ಸೇವಾವಲಯಕ್ಕೆ ಶೇಕಡಾ ೨೨.೮ರಷ್ಟು ಕೊಡುಗೆಯನ್ನು ಕೊಡುತ್ತಿದ್ದು ವಾರ್ಷಿಕ ಶೇಕಡಾ ೬ರ ದರದಲ್ಲಿ ಬೆಳವಣಿಗೆ ಹೊಂದುತ್ತಿರುವುದು ಸೇವಾವಲಯದ ಪ್ರಾಮುಖ್ಯತೆಯನ್ನು ಎತ್ತಿತೋರಿಸುತ್ತಿದೆ.

ಡಾ|| ವೀರೇಶ್ ಎಂ. ಕುಮ್ಮೂರ್

**ಸೇವಾ ತೆರಿಗೆಯ ಬೆಳವಣಿಗೆ**

ಸೇವಾ ತೆರಿಗೆ ಬಳಕೆಗೆ ತಂದ ನಂತರದ ಬೆಳವಣಿಗೆಯನ್ನು ಸಂಕ್ಷಿಪ್ತವಾಗಿ ಮೇಲಿನ ಪಟ್ಟಿಯಲ್ಲಿ ಕಾಣಬಹುದು.

ಕೋಷ್ಟಕ ೧ : ಸೇವಾ ತೆರಿಗೆಯ ಸಂಗ್ರಹ ಹಾಗೂ ಸೇವಾ ತೆರಿಗೆಯ ವ್ಯಾಪ್ತಿಗೆ ಒಳಪಡುವವರ ಪ್ರಮಾಣ

| ವರ್ಷಗಳು | ಸೇವಾ ತೆರಿಗೆಯ ಸಂಗ್ರಹ (ಕೋಟಿ ರೂ.ಗಳಲ್ಲಿ) | ಸೇವಾ ತೆರಿಗೆಯ ವ್ಯಾಪ್ತಿಗೆ ಸೇರ್ಪಡೆಯಾದವರು |
|---|---|---|
| ೧೯೯೪-೯೫ | ೪೧೦ | ೩,೯೪೩ |
| ೧೯೯೫-೯೬ | ೮೪೮ | ೪,೮೬೬ |
| ೧೯೯೬-೯೭ | ೧,೦೨೨ | ೧೩,೯೮೨ |
| ೧೯೯೭-೯೮ | ೧,೫೧೫ | ೪೫,೯೯೧ |
| ೧೯೯೮-೯೯ | ೧,೭೮೭ | ೧,೦೭,೪೭೯ |
| ೧೯೯೯-೨೦೦೦ | ೨,೦೭೨ | ೧,೧೫,೧೯೫ |
| ೨೦೦೦-೦೧ | ೨,೫೪೦ | ೧,೨೨,೩೨೬ |
| ೨೦೦೧-೦೨ | ೩,೩೦೫ | ೧,೮೭,೫೭೭ |
| ೨೦೦೨-೦೩ | ೬,೦೩೦ | ೨,೩೨,೦೪೮ |
| ೨೦೦೩-೦೪ | ೭,೮೯೦ | ೪,೦೩,೮೫೬ |
| ೨೦೦೪-೦೫ | ೧೪,೨೦೦ | ೭,೭೪,೯೮೮ |
| ೨೦೦೫-೦೬ | ೨೩,೦೦೦ | ಲಭ್ಯವಿಲ್ಲ |
| ೨೦೦೬-೦೭ | ೩೮,೧೬೯ | ಲಭ್ಯವಿಲ್ಲ |
| ೨೦೦೭-೦೮ ಅಂದಾಜು | ೫೦,೨೦೦ | ಲಭ್ಯವಿಲ್ಲ |

ಸೇವಾ ತೆರಿಗೆ ಪ್ರಾರಂಭವಾದಾಗಿನಿಂದ ಈವರೆಗಿನ ಸೇವಾ ತೆರಿಗೆಯನ್ನು ಪರಿಶೀಲಿಸಿದಾಗ ಅತಿಯಾಗಿ ನಮ್ಮ ಗಮನಸೆಳೆಯುವ ಅಂಶವೆಂದರೆ ೧೯೯೪-೯೫ರಲ್ಲಿ ಕೇವಲ ೪೧೦ ಕೋಟಿ ರೂಪಾಯಿಗಳಿದ್ದ ಮೊತ್ತ ೨೦೦೭-೦೮ರ ಅಂದಾಜಿನಂತೆ ೫೦,೨೦೦ ಕೋಟಿ ರೂ.ಗಳಿಗೆ ಏರಿಕೆಯಾಗಿದೆ, ಅಂದರೆ ಸುಮಾರು ೧೨೨ ಪಟ್ಟು ಹೆಚ್ಚಳ ಕಂಡುಬರುತ್ತಿದೆ. ಅದೇ ಅವಧಿ ಯಲ್ಲೇ ತೆರಿಗೆ ಸಂದಾಯಗಾರರ ಪ್ರಮಾಣ ಸಹ ಗಣನೀಯವಾಗಿ ಹೆಚ್ಚಳವಾಗಿದೆ.

ಕಳೆದ ವರ್ಷಗಳಲ್ಲಿಯ ಸೇವಾ ತೆರಿಗೆಯು ಕೇವಲ ಹೆಚ್ಚಳವಾಗಿರುವುದಲ್ಲದೆ, ಸೇವಾ ತೆರಿಗೆಯ ವ್ಯಾಪ್ತಿಗೊಳಪಟ್ಟ ಸೇವೆಗಳ ಪ್ರಮಾಣ ಸಹ ಹೆಚ್ಚಳವಾಗಿರುವುದನ್ನು ಕಾಣಬಹುದು. ಮೊದಲಿಗೆ ಕೇವಲ ನಾಲ್ಕು ಸೇವೆಗಳಿದ್ದದ್ದು ಪ್ರಸಕ್ತ ೨೦೦೭-೦೮ರಲ್ಲಿ ಮತ್ತೆ ಏಳು ಸೇವೆಗಳನ್ನು

# ಹೊಸ ಬಜೆಟ್ ಹಾಗೂ ಸೇವಾ ತೆರಿಗೆ

ಕೇಂದ್ರ ಹಣಕಾಸು ಮಂತ್ರಿಗಳು ಹೇಳುವ ಹಾಗೆ ಕೇಂದ್ರ ಹಾಗೂ ರಾಜ್ಯ ಸರಕಾರಗಳ ಮಧ್ಯ ಆದಾಯ ಹಂಚಿಕೆಯಾಗುವಂತಹ ರಾಷ್ಟ್ರೀಯ ಮಟ್ಟದ ಸರಕು ಹಾಗೂ ಸೇವಾ ತೆರಿಗೆ ಅಥವಾ ಜಿ.ಎಸ್.ಟಿ. ಜಾರಿಗೆ ತರುವಲ್ಲಿ ಹೆಚ್ಚಿನ ಮಟ್ಟದ ಸಹಮತ ವ್ಯಕ್ತವಾಗಿರುವ ಕಾರಣ ಮುಂಬರುವ ೨೦೧೦ರ ಹಣಕಾಸಿನ ಸಾಲಿನಿಂದ ಜಿ.ಎಸ್.ಟಿ.ಯನ್ನು ಜಾರಿಗೆ ತರಲಾಗುತ್ತದೆ ಎನ್ನಲಾಗುತ್ತಿದೆ. ಸೇವಾ ತೆರಿಗೆಯನ್ನು ಹೆಚ್ಚಿಸುತ್ತಿರುವ ಸೆಸ್ ವ್ಯಾಟ್‌ಅನ್ನು ಕಡಿತಗೊಳಿಸುತ್ತಿರುವುದು ಈ ಹಿನ್ನೆಲೆಯಲ್ಲಿಯೇ. ಮುಂಬರುವ ದಿನಗಳಲ್ಲಿ ಆಯ್ಕೆರಹಿತವಾಗಿ ಎಲ್ಲಾ ಸೇವೆಗಳನ್ನು ತೆರಿಗೆ ವ್ಯಾಪ್ತಿಗೆ ತರಬೇಕು ಎಂಬುದು ತಜ್ಞರ ಅಭಿಮತವಾಗಿದೆ.

**ಕೋಷ್ಟಕ ೨ : ಸೇವಾ ತೆರಿಗೆಗೆ ಒಳಪಟ್ಟ ಸೇವೆಗಳು ಹಾಗೂ ಸೇವಾ ತೆರಿಗೆಯ ವಿವರಣೆ**

| ವರ್ಷಗಳು | ತೆರಿಗೆಗೆ ಒಳಪಟ್ಟ ಸೇವೆಗಳು | ಸೇವಾ ತೆರಿಗೆಯ ದರ (ಶೇಕಡಾ) |
|---|---|---|
| ೧೯೯೪-೯೫ | ೪ | ೫ |
| ೨೦೦೩-೦೪ | ೫೮ | ೫/೮ |
| ೨೦೦೪-೦೫ | ೭೧ | ೮/೧೦ |
| ೨೦೦೫-೦೬ | ೮೧ | ೧೦ |
| ೨೦೦೬-೦೭ | ೯೬ | ೧೦/೧೨ |
| ೨೦೦೭-೦೮ | ೧೦೩ | ೧೦/೧೨ |

ಈ ತೆರಿಗೆಯ ವ್ಯಾಪ್ತಿಗೆ ತರಲಾಗಿದೆ. ಈ ಮೂಲಕ ಒಟ್ಟು ೧೦೩ ಸೇವೆಗಳು ತೆರಿಗೆಯ ವ್ಯಾಪ್ತಿಗೆ ಬರುತ್ತವೆ. ಆದರೆ ಸೇವಾ ತೆರಿಗೆಯ ದರದಲ್ಲಿ ಈ ಸಾಲಿನ ಬಜೆಟ್‌ನಲ್ಲಿ ಯಾವುದೇ ಬದಲಾವಣೆ ಮಾಡಿಲ್ಲ ಆದರೆ ಶಿಕ್ಷಣದ ಮೇಲಿನ ಸೆಸ್ ಶೇಕಡಾ ೧ ಹೆಚ್ಚಿಸಿರುವ ಕಾರಣ ತೆರಿಗೆಯ ದರದ ಪ್ರಮಾಣವು ಶೇಕಡ ೧೨.೩೬ ರಷ್ಟಾಗುತ್ತದೆ. **ಈ ಸಾಲಿನ ಬಜೆಟ್‌ನಲ್ಲಿ ಸೇವಾ ತೆರಿಗೆಯ ವ್ಯಾಪ್ತಿಗೆ ಸೇರ್ಪಡೆಗೊಂಡ ಏಳು ಸೇವೆಗಳು ಈ ಕೆಳಗಿನಂತಿವೆ.**

೧. ಖನಿಜ, ತೈಲ ಹಾಗೂ ಅನಿಲ ಗಣಿಗಾರಿಕೆಯ ಹೊರಗುತ್ತಿಗೆದಾರರು.

೨. ವಾಣಿಜ್ಯ ಉದ್ದೇಶಕ್ಕೆ ಮನೆ, ಕಟ್ಟಡ, ಶೋರೂಂ, ಗೋದಾಮು, ಹಾಲ್ ಮುಂತಾದವುಗಳನ್ನು ಬಾಡಿಗೆ ನೀಡುವವರು.

೩. ಜಾಹಿರಾತು ಹಾಗೂ ದೂರಸಂಪರ್ಕ ಕ್ಷೇತ್ರಕ್ಕೆ ಕಾರ್ಯಕ್ರಮ, ಮಾಹಿತಿ, ಸಂಗೀತ ಮುಂತಾದ ಕಂಟೆಂಟ್ (ಹೂರಣ) ಸೇವೆ ನೀಡುವವರು.

೪. ಹಣಕಾಸು, ಆಸ್ತಿ ಮುಂತಾದವುಗಳ ಹೂಡಿಕೆ ಹಾಗೂ ನಿರ್ವಹಣಾ ಸೇವೆ ನೀಡುವವರು.

೫. ಕಲೆ, ವಿನ್ಯಾಸದಂತಹ ಸೇವೆ ನೀಡುವ ಡಿಜೈನರ್‌ಗಳು, ಆರ್ಕಿಟೆಕ್ಟ್‌ಗಳು.

೬. ಯಾವುದೇ ರೀತಿಯ ವರ್ಕ್ ಕಾಂಟ್ರಾಕ್ಟರ್‌ಗಳು (ಲೇಬರ್ ಕಾಂಟ್ರಾಕ್ಟರ್‌ಗಳನ್ನು ಹೊರತುಪಡಿಸಿ).

೭. ಅಪಾರ್ಟ್‌ಮೆಂಟ್/ಲೇಔಟ್ ನಿವಾಸಿಗಳಿಂದ ಮಾಸಿಕ ೩೦೦೦ ರೂ.ಗಳಿಗಿಂತ ಹೆಚ್ಚು ನಿರ್ವಹಣಾ ಶುಲ್ಕ ಪಡೆಯುವ ರೆಸಿಡೆಂಟ್ ವೆಲ್‌ಫೇರ್ ಅಸೋಸಿಯೇಶನ್‌ಗಳು.

ಸೇವಾ ತೆರಿಗೆಗೆ ಸಂಬಂಧಿಸಿದ ಮತ್ತೊಂದು ವಿಶೇಷವೆಂದರೆ ಸೇವೆಗಳ ವಹಿವಾಟಿನ ಮಿತಿಯನ್ನು ಈಗಿರುವ ನಾಲ್ಕು ಲಕ್ಷದಿಂದ ಎಂಟು ಲಕ್ಷಕ್ಕೆ ಹೆಚ್ಚಿಸುವ ಮೂಲಕ ಎರಡು ಲಕ್ಷ ಸೇವಾ ತೆರಿಗೆ ದಾರರನ್ನು ತೆರಿಗೆಯಿಂದ ಮುಕ್ತಗೊಳಿಸಲಾಗಿದೆ. ಅದರೊಟ್ಟಿಗೆ ೮೦೦ ಕೋಟಿ ರೂಪಾಯಿಗಳ ಹಣಕಾಸಿನ ಹೊರೆಯನ್ನು ಕಡಿಮೆಮಾಡಿಕೊಳ್ಳುವುದಾಗಿದೆ.

**ಸೇವಾ ತೆರಿಗೆಯ ಪ್ರಾಮುಖ್ಯತೆ**

ಪ್ರಾಥಮಿಕ ಹಾಗೂ ದ್ವಿತೀಯ ವಲಯಗಳ ಪಾಲು ಕ್ರಮೇಣ ಕಡಿಮೆಯಾಗುತ್ತಿರುವ ಇಂದಿನ ದಿನಗಳಲ್ಲಿ ತೃತೀಯ ವಲಯವು ದಿನದಿಂದ ದಿನಕ್ಕೆ ತನ್ನ ವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳುತ್ತಾ ಇದೆ. ಗ್ರಾಹಕ ಸಂಬಂಧೀ ಸೇವೆಗಳು ತೀವ್ರ ಬದಲಾವಣೆಗೆ ಒಳಪಡುತ್ತಿರುವುದರಿಂದಾಗಿ ಪ್ರತಿಯೊಂದು ಸೇವೆಯೂ ವ್ಯಾಪಾರೀಕರಣಗೊಳ್ಳುತ್ತಾ ಇದೆ. ಜಾಗತೀಕರಣದ ಈ ದಿನಗಳಲ್ಲಿ ಜನರ ಜೀವನ ಕ್ರಮ ಹಾಗೂ ಅವಶ್ಯಕತೆಗಳಲ್ಲಿ ತೀವ್ರ ಬದಲಾವಣೆಗಳುಂಟಾಗುವುದರಿಂದಾಗಿ ಸೇವಾ ವಲಯದಲ್ಲಿರುವ ಜನರ ವರಮಾನ ಹೆಚ್ಚಳವಾಗುವುದರ ಜೊತೆಗೆ ಮಿಲಿಯನ್‌ಗಟ್ಟಲೆ ಉದ್ಯೋಗಾವಕಾಶಗಳು ದೊರೆಯಲಾರಂಭಿಸಿವೆ.

ಈ ಒಂದು ಬೆಳವಣಿಗೆಯು ಸೇವಾ ತೆರಿಗೆಯ ವ್ಯಾಪ್ತಿಯನ್ನು ಹೆಚ್ಚಿಸಲು ಅವಕಾಶಮಾಡಿಕೊಡಲಾರಂಭಿಸಿದೆ. ಕಳೆದ ಅವಧಿಯಲ್ಲಿ ಕಂಡುಬಂದ ಸೇವಾವಲಯದ ಬದಲಾವಣೆಯು ಜಾಗತಿಕ ಮಟ್ಟದಲ್ಲಿಯೇ ಮೇಲ್ಮುಖವಾಗಿ ಬೆಳವಣಿಗೆಯನ್ನು ಹೊಂದುತ್ತಿರುವುದರಿಂದಾಗಿ ಅದೇ ದರದಲ್ಲಿ ಸೇವಾ ತೆರಿಗೆಯ ವಿಸ್ತರಣೆಯು ಹೆಚ್ಚು ಸಮಂಜಸವಾಗಿದೆ.

ಅರ್ಥಶಾಸ್ತ್ರಜ್ಞ ಬಿಬೇಕ್ ದೇವ್ ರಾಯ್ ಅವರು ಹೇಳುವಂತೆ ಕಳೆದ ಅವಧಿಯಲ್ಲಿನ ಈ ವಲಯದ ಪ್ರಗತಿಯನ್ನು ಗಮನಿಸಿದರೆ ಮುಂಬರುವ ದಿನಗಳಲ್ಲಿ ಸೇವಾ ತೆರಿಗೆಯು ಸರಕಾರಗಳ ತೆರಿಗೆಗಳ ಪ್ರಮುಖ ಆದಾಯದ ಮೂಲವಾಗಬಲ್ಲದು ಎಂದು ತೋರುತ್ತದೆ.

ಸೇವಾ ತೆರಿಗೆಯ ಹರವನ್ನು ಹೆಚ್ಚಿಸಲಿಕ್ಕೆ ಮತ್ತೊಂದು ಕಾರಣವೆಂದರೆ, ಸರಕಾರಕ್ಕೆ ತೆರಿಗೆಯ ಸಂಗ್ರಹದಲ್ಲಿ ಹೆಚ್ಚಿನ ಅಡೆ-ತಡೆಗಳು ಇರುವುದಿಲ್ಲ. ಅವಶ್ಯಕ ಸೇವೆಗಳಿಗೆ ಗ್ರಾಹಕನ ಬೇಡಿಕೆಯ ಸ್ಥಿತಿಸ್ಥಾಪಕತ್ವ ಕಡಿಮೆಯಿರುವುದರಿಂದಾಗಿ ತೆರಿಗೆಯ ಆದಾಯವು ನಿರೀಕ್ಷಿಸಿದಷ್ಟೇ ಸಂಗ್ರಹವಾಗುತ್ತದೆ. ಹೀಗಾಗಿಯೇ ಸಾರ್ವಜನಿಕ ಹಣಕಾಸು ತಜ್ಞರು ಸೇವಾ ತೆರಿಗೆಯನ್ನು **ಹಾಲು ಕರೆಯುವ ಹಸುವಿಗೆ** ಹೋಲಿಸುತ್ತಾರೆ.

ಮತ್ತೊಂದು ಅಂಶವೇನೆಂದರೆ, ಸೇವೆಗಳನ್ನು ಪಡೆಯುವವನು ಮಾತ್ರ ಈ ಸೇವಾ ತೆರಿಗೆಯನ್ನು ಸಂದಾಯ ಮಾಡಬೇಕಾಗಿರುವುದರಿಂದಾಗಿ ಸೇವಾ ತೆರಿಗೆಯು ಸಾಮಾಜಿಕ ನ್ಯಾಯವನ್ನು ಕಾಯ್ದುಕೊಳ್ಳಬಹುದೆಂಬ ಅಭಿಪ್ರಾಯವು ಎಲ್ಲ ರಾಜಕೀಯ ಪಕ್ಷಗಳಲ್ಲಿ ಉಂಟಾಗಿರುವ ಕಾರಣ ಸೇವಾ ತೆರಿಗೆಯ ಏರಿಕೆಗೆ ವಿರೋಧ ಕಡಿಮೆ ಎಂದೇ ಹೇಳಬೇಕು.

ಸೇವಾ ತೆರಿಗೆಯ ಬಗೆಗೆ ಹೆಚ್ಚುತ್ತಿರುವ ಸರಕಾರದ ಒಲವಿಗೆ ಮತ್ತೊಂದು ಕಾರಣ ಸಹ ಇದೆ. ಅದೇಂದರೆ, ಮುಂಬರುವ ದಿನಗಳಲ್ಲಿ ರಾಷ್ಟ್ರೀಯ ಮಟ್ಟದಲ್ಲಿ ಏಕರೂಪದ ಸರಕು ಹಾಗೂ ಸೇವಾ ತೆರಿಗೆಯನ್ನು ಕ್ರಮೇಣ ಜಾರಿಗೆ ತರುವುದಾಗಿದೆ.

ಕೇಂದ್ರ ಹಣಕಾಸು ಮಂತ್ರಿಗಳು ಹೇಳುವ ಹಾಗೆ ಕೇಂದ್ರ ಹಾಗೂ ರಾಜ್ಯ ಸರಕಾರಗಳ ಮಧ್ಯೆ ಆದಾಯ ಹಂಚಿಕೆಯಾಗುವಂತಹ ರಾಷ್ಟ್ರೀಯ ಮಟ್ಟದ ಸರಕು ಹಾಗೂ ಸೇವಾ ತೆರಿಗೆ ಅಥವಾ ಜಿ.ಎಸ್.ಟಿ. ಜಾರಿಗೆ ತರುವಲ್ಲಿ ಹೆಚ್ಚಿನ ಮಟ್ಟದ ಸಹಮತ ವ್ಯಕ್ತವಾಗಿರುವ ಕಾರಣ ಮುಂಬರುವ ೨೦೧೦ರ ಹಣಕಾಸಿನ ಸಾಲಿನಿಂದ ಜಿ.ಎಸ್.ಟಿ.ಯನ್ನು ಜಾರಿಗೆ ತರಲಾಗುತ್ತದೆ ಎನ್ನಲಾಗುತ್ತಿದೆ. ಸೇವಾ ತೆರಿಗೆಯನ್ನು ಹೆಚ್ಚಿಸುತ್ತಿರುವ ಸೆಸ್ ವ್ಯಾಟ್ ಅನ್ನು ಕಡಿತಗೊಳಿಸುತ್ತಿರುವುದು ಈ ಹಿನ್ನೆಲೆಯಲ್ಲಿಯೇ. ಮುಂಬರುವ ದಿನಗಳಲ್ಲಿ ಆಯ್ಕೆರಹಿತವಾಗಿ ಎಲ್ಲಾ ಸೇವೆಗಳನ್ನು ತೆರಿಗೆ ವ್ಯಾಪ್ತಿಗೆ ತರಬೇಕು ಎಂಬುದು ತಜ್ಞರ ಅಭಿಮತವಾಗಿದೆ.

ಸೇವಾ ತೆರಿಗೆಯ ನಿರ್ವಹಣೆಗೆ ಹಾಗೂ ವಿಸ್ತರಣೆಗೆ ಸಾಮಾನ್ಯ ತಿಳುವಳಿಕೆಗೆ ನಿಲುಕುವ ನೀತಿ ನಿಯಮಗಳನ್ನು ರೂಪಿಸುವುದು ಸಹ ತುರ್ತು ಅವಶ್ಯಕತೆಗಳಲ್ಲೊಂದಾಗಿದೆ. ಸದ್ಯದ ಸೇವಾ ತೆರಿಗೆಯ ಆಕರಣೆಯು ಸೇವೆಗಳ ಶಾಬ್ದಿಕ ವರ್ಣನೆಯ ಆಧಾರದ ಮೇಲೆ ನಿಗದಿಗೊಳಿಸಲಾಗುತ್ತಿದೆ. ಆದರೆ ಒಂದೇ ಸೇವೆಯು ದೇಶದ ವಿವಿಧ ಭಾಗಗಳಲ್ಲಿ ವಿವಿಧ ಹೆಸರುಗಳಿಂದ ಗುರುತಿಸಲ್ಪಡುವಾಗ ಅದೇ ಸೇವೆಯು ಒಂದು ಭಾಗದಲ್ಲಿ ಸೇವಾ ತೆರಿಗೆಯ ವ್ಯಾಪ್ತಿಗೊಳಪಟ್ಟರೆ ಮತ್ತೊಂದು ಭಾಗದಲ್ಲಿ ತೆರಿಗೆಯ ಹೊರಗುಳಿಯುವ ಸಾಧ್ಯತೆಗಳಿವೆ. ಈ ನಿಟ್ಟಿನಲ್ಲಿ ಸೇವೆಗಳ ವೈಜ್ಞಾನಿಕ ವರ್ಗೀಕರಣದ ಅವಶ್ಯಕತೆಯಿದೆ. ತಜ್ಞರ ಅಭಿಪ್ರಾಯದಂತೆ ಸೇವಾ ತೆರಿಗೆಯ ವರ್ಗೀಕರಣ ಸಂಕೇತ ರಚನೆಯು ಅವಶ್ಯ ಎನ್ನುತ್ತಾರೆ. ಹೀಗೆ ಸೇವಾ ತೆರಿಗೆಯು ಸರಕಾರಕ್ಕೆ ತೆರಿಗೆ ಆದಾಯ ಸಂಗ್ರಹದ ಒಂದು ಶಾಶ್ವತ ಮೂಲವಾಗುವುದರ ಜೊತೆಗೆ ತೆರಿಗೆ ನಿಯಮಗಳ ಆದರ್ಶಗಳನ್ನು ಕಾಯ್ದುಕೊಳ್ಳಬೇಕಾಗುತ್ತದೆ.

**ಡಾ|| ವೀರೇಶ್ ಎಂ. ಕುಮ್ಮೂರ್**
ಆಯ್ಕೆ ಶ್ರೇಣಿ ಅರ್ಥಶಾಸ್ತ್ರ ಉಪನ್ಯಾಸಕರು, ಸರಕಾರಿ ಪ್ರಥಮ ದರ್ಜೆ ಕಾಲೇಜು, ಹಿರೇಕೆರೂರ, ಹಾವೇರಿ ಜಿಲ್ಲೆ



# ದಾರಿ ಯಾವುದಯ್ಯಾ ?

(ಪ್ರೇರಣೆ : ಫ್ಲಾನರಿ ಓ' ಕಾನರ್ : 'ಎ ಗುಡ್ ಮ್ಯಾನ್ ಈಸ್ ಹಾರ್ಡ್ ಟು ಫಾಂಯ್ಡ್')

ಅಜ್ಜಿಗೆ ಮುಳಬಾಗಿಲಿಗೆ ಹೋಗಲು ಸುತರಾಂ ಇಷ್ಟ ಇರಲಿಲ್ಲ. ಅವಳಿಗೆ ಕೊನೆಯುಸಿರು ಎಳೆಯುವ ಮುನ್ನ ಮಂತ್ರಾಲಯಕ್ಕೆ ಹೋಗಿ ರಾಯರ ಬೃಂದಾವನವನ್ನು ನೋಡಿ ಮೋಕ್ಷ ಗ್ಯಾರಂಟಿ ಮಾಡಿಕೊಳ್ಳುವ ಹಂಬಲ. ಈ ವಿಷಯದಲ್ಲಿ ಶತಪ್ರಯತ್ನ ಮಾಡಿ ತನ್ನ ಮಗನ ತೀರ್ಮಾನವನ್ನು ಬದಲಿಸುತ್ತೇನೆ ಎನ್ನುವ ವಿಶ್ವಾಸ ಅವಳಿಗಿತ್ತು. ಭರಚುಕ್ಕಿಯಂತೆ ಬೀಳುತ್ತಿದ್ದ ಅವಳ ಮಾತಿನ ಸುರಿತಕ್ಕೆ ಅಡ್ಡಹಾಕುವ ಶಕ್ತಿ ಯಾರಿಗೂ ಇರಲಿಲ್ಲ.

ಅಜ್ಜಿಯ ಠಿಕಾಣಿ ತನ್ನ ಮಗ ಶ್ರೀಪಾದನ ಮನೆಯಲ್ಲಿ. ಅವನು ಕೋಲಾರದಲ್ಲಿ ಧಾರ್ಮಿಕ ದತ್ತಿ ಇಲಾಖೆಯ ಸ್ಥಾನಿಕ ಅಧಿಕಾರಿಯಾಗಿ ತೃಪ್ತಿಯಿಂದ ಕೆಲಸ ಮಾಡಿಕೊಂಡಿದ್ದ.

ಹಿಂದಿನ ವರ್ಷ ಡೆಂಗೆ ಜ್ವರದ ಅತಿಥಿಯಾಗಿ ಅಜ್ಜಿ ಸತ್ತೇ ಹೋಗುತ್ತಾಳೆಂದು ಎಲ್ಲರಿಗೂ ಅನಿಸಿದಾಗ ಅವಳನ್ನು ಬೆಂಗಳೂರಿನ ನರ್ಸಿಂಗ್ ಹೋಮ್ ಒಂದರಲ್ಲಿ ಬಿಟ್ಟು ಹೆಂಡತಿಯ ಮನೆಯವರ ಜತೆಯಲ್ಲಿ ಮಂತ್ರಾಲಯಕ್ಕೆ ಯಾತ್ರೆ ಮಾಡಿ ಅಮ್ಮನಿಗೆ ಗುಣವಾಗಲೆಂದು ಶ್ರೀಪಾದ ಹರಕೆ ಹೊತ್ತಿದ್ದ. ಈ ವರ್ಷದ ಕೊನೆಯಲ್ಲಿ ಎರಡು ವಾರ ರಜಾ ಹಾಕಿ ಭೈರಪ್ಪನವರ 'ಪರ್ವ' ಓದಿ, ಆಮೇಲೆ ಮುಳಬಾಗಿಲಿನ ಮಠದಲ್ಲಿ ಕೈಂಕರ್ಯ ಸಲ್ಲಿಸೋ ಇರಾದೆ ಅವನದ್ದು. ತುಂಬ ದಿನ ಕಷ್ಟಪಟ್ಟು ಹಣ ಉಳಿಸಿಕೊಂಡು ಕೊಂಡಿದ್ದ ಸೆಕೆಂಡ್‌ಹ್ಯಾಂಡ್ ಸಾಂಟ್ರೋಗೆ ಸ್ವಾಮಿಗಳಿಂದ ಆಶೀರ್ವಾದ ಮಾಡಿಸಬೇಕೆಂಬ ಆಸೆ ಅವನ ಮನಸ್ಸಿನಲ್ಲಿ ಹೆಮ್ಮರವಾಗಿ ಬೆಳೆದಿತ್ತು.

ಕಾಕತಾಳೀಯವಾಗಿ, ಮುಜರಾಯಿ ಸಚಿವರಿಗೂ, ಕನ್ನಡ ಬಾರದ ಅವರ ಆಯುಕ್ತರಿಗೂ ಮಾಮೂಲಿಯ ಹಂಚಿಕೆಯ ವಿಷಯದಲ್ಲಿ ಒಡಕುಂಟಾಗಿ, ಆ ಆಯುಕ್ತರನ್ನು ಕೆರೆಗಳೇ ಇಲ್ಲದ ಉತ್ತರ ಕರ್ನಾಟಕದ ಜಿಲ್ಲೆಯೊಂದರಲ್ಲಿ ಹೂಳು ತೆಗೆಸುವ ವಿಭಾಗಕ್ಕೆ ಎತ್ತಂಗಡಿ ಮಾಡಲಾಗಿತ್ತು. ಅವರ ಜಾಗಕ್ಕೆ ಕನ್ನಡ ಬಾರದ ಇನ್ನೊಬ್ಬ ಬಿಹಾರಿ ಅಧಿಕಾರಿಯನ್ನು ನೇಮಿಸಲಾಗಿತ್ತು. ತನ್ನ ಪಾರದರ್ಶಕತೆ ಎಲ್ಲರಿಗೂ ಕಾಣಲಿ ಎಂಬ ಉದ್ದೇಶದಿಂದ ಈ ಮಹಾನುಭಾವ ಒಂದು ಪತ್ರಿಕಾಗೋಷ್ಠಿ ಕರೆದಿದ್ದ. ಮಸೀದಿಗಳನ್ನು, ಚರ್ಚುಗಳನ್ನು ಯಾಕೆ ಇಲಾಖೆಯ ವ್ಯಾಪ್ತಿಗೆ ಒಳಪಡಿಸಬಾರದೆಂದು ಕುಚೋದ್ಯದಿಂದ ಒಬ್ಬ ಪತ್ರಕರ್ತ ಆ ಸಂದರ್ಭದಲ್ಲಿ ಕನ್ನಡದಲ್ಲಿ ಪ್ರಶ್ನೆ ಕೇಳಿದ. ಈ ಪ್ರಭೃತಿಗೆ ಪ್ರಶ್ನೆ ಅರ್ಥವಾಗಲಿಲ್ಲ. (ದಿಲ್ಲಿಯ ಕನ್ನಡ ಭವನದಲ್ಲಿ ಅವನ ಪ್ರಾಕ್ಸಿಯಾಗಿ ಯಾರೋ ಪರೀಕ್ಷೆ ಬರೆದು ಇವನ ನೌಕರಿ ಗಟ್ಟಿ ಮಾಡಿದ್ದರು ಅನ್ನುವ ಸಂಗತಿ ರಹಸ್ಯವಾಗೇನಿರಲಿಲ್ಲ.) ಮಚ್ಚು, ಲಾಂಗುಗಳ, ಹಿಂದಿ ಸುಂದರಿಯರ ಸಿನಿಮಾ ನೋಡಿ, ಸಿಗರೇಟು ಸೇದಿ ಬೋರ್ ಆದ ಕನ್ನಡ ಹೋರಾಟಗಾರರು ಬೆಂಗಳೂರಿನ ಎಲ್ಲ ಕಛೇರಿಗಳಿಗೆ ಮುತ್ತಿಗೆ ಹಾಕಿ ಈ ಅಧಿಕಾರಿಯನ್ನು ಗಲ್ಲಿಗೆ ಹಾಕಿ, ಆ ಆಫೀಸರನ್ನ ಮನೆಗೆ ಕಳಿಸಿ ಅಂತ ಗಲಾಟೆ ಮಾಡುವದನ್ನು ನೆನಸಿಕೊಂಡು ಗಲಿಬಿಲಿಯಲ್ಲಿ ''ಅದು ಸರಿ; ಯೂ ಆರ್ ರಾಯ್ಟ್; ದೇರ್ ಇಜ಼್ ನೊ ಸೆಕೆಂಡ್ ಟಾಕ್'' ಅಂದುಬಿಟ್ಟಿದ್ದ. ಇವನಿಂದ ರಜೆ ಆರ್ಡರಿಗೆ ಸಹಿ ಹಾಕಿಸುವುದು ಅಂದುಕೊಂಡಿದ್ದಕ್ಕಿಂತ ಸುಲಭವಾಗಿತ್ತು. ಈ ವಿವರಗಳೆಲ್ಲ ಅಜ್ಜಿಗೆ ಬೇಕಾಗಿರಲಿಲ್ಲ. ರಾಯರ ಕೃಪೆಯಿಂದ ಬದುಕು ಉಳಿಯಿತು; ಆದ್ದರಿಂದ ಮಂತ್ರಾಲಯಕ್ಕೆ ಹೋಗಲೇಬೇಕು ಅನ್ನೋ ತರ್ಕ ಅವಳದು.

ರಜ ಶುರುವಾದ ಮಾರನೇ ದಿನ ಶ್ರೀಪಾದ ವರಾಂಡದ ಈಜಿಚೇರಿನಲ್ಲಿ ಕೂತು, ಸ್ಟೂಲಿನ ಮೇಲೆ ಕಾಲಿಟ್ಟುಕೊಂಡು, ನವವಾಣಿಯಲ್ಲಿ ಅಧಿಕಾರಿಗಳ ವರ್ಗಾವಣೆ, ಗಣಿ ಹಗರಣ ಇತ್ಯಾದಿಗಳ ಮೇಲೆ ಕಾಫಿ ಹೀರುತ್ತ ಕಣ್ಣಾಡಿಸುತ್ತಿದ್ದ. ನಡುಮನೆಯಲ್ಲಿ ಟಿ.ವಿ. ನೋಡುತ್ತಿದ್ದ ಅಜ್ಜಿ ಧಡಧಡಾಂತ ವರಾಂಡಕ್ಕೆ ಬಂದು, ಮಗನ ಮುಂದೆ ನಿಂತು, ''ನೋಡೋ ಮಗು, ಟಿ.ವಿ. ನ್ಯೂಸಿನಲ್ಲಿ ಏನಂತಿದಾರೆ ಗೊತ್ತಾ?'' ಅಂತ ನಾಟಕೀಯವಾಗಿ ಕೇಳಿದಳು. ''ಮುಳಬಾಗಿಲಿನಿಂದ ಕೆ.ಜಿ.ಎಫ್.ವರೆಗೆ ಈಗಿನ್ನೂ ಪೊಲೀಸಿನೋರಿಗೂ ದರೋಡೆಕೋರರಿಗೂ ಹೊಡೆದಾಟ ಆಗಿ ಒಟ್ಟು ಇಪ್ಪತ್ತು ಜನ ಸತ್ತಿದ್ದಾರಂತೆ. ಕೈಗೆ ಸಿಕ್ಕಿರೋದು ಮೂರು ಜನ ಕಳ್ಳರು. ಅದೆಷ್ಟು ಕಳ್ಳಕಾಕರು ಬಂದೂಕು ಹಿಡ್ಕೊಂಡು ರಾತ್ರೆ ಬೆಳಗ್ಗೆ ಅನ್ನದೆ ಓಡಾಡ್ತಿದಾರೋ ದೇವರಿಗೇ ಗೊತ್ತು. ಈ ಪರಿಸ್ಥಿತೀಲಿ ಮುಳಬಾಗಿಲಿಗೆ ಹೋಗೋದು ಅಂದ್ರೇನು? ನಾನಂತೂ ನಮ್ಮ ಸಂಸಾರನ ಆ ಕಡೆ ತಲೆ ಹಾಕಿ ಮಲಗಲೂ ಬಿಡಲ್ಲ. ತಿಳೀತೋ ಇಲ್ವೋ?''

ಶ್ರೀಪಾದ ಪೇಪರ್‌ನಿಂದ ತಲೆ ಎತ್ತಲಿಲ್ಲ. ಅಜ್ಜಿ ಮಾತಾಡ್ತಿದ್ದ ಹಾಗೆ ತನ್ನ ಸಣ್ಣ ಕೂಸನ್ನು ಎತ್ತಿಕೊಂಡು ಅದಕ್ಕೆ ಸಜ್ಜಿಗೆ ತಿನ್ನಿಸುತ್ತಿದ್ದ ಅವನ ಹೆಂಡತಿ ಭಾಗೀರಥಿ ವೆರಾಂಡಕ್ಕೆ ಬಂದು ಒಂದು ಕುರ್ಚಿಯಲ್ಲಿ ಕೂತು, ಸಣ್ಣ ಧ್ವನಿಯಲ್ಲಿ, ''ತಿನ್ನಪ್ಪ, ತಿನ್ನೋ, ಚೇ ಕಳ್ಳ'' ಅಂತ ಅದನ್ನ ಮುದ್ದು ಮಾಡತೊಡಗಿದಳು. ಅವಳ ಮಾತಿನ ಥರಾನೆ ಅವಳುಟ್ಟಿದ್ದ ಸೀರೆ, ತೊಟ್ಟಿದ್ದ ರವಿಕೆ ಅವಳು ಯಾರ ಗಮನಕ್ಕೂ ಬರದಹಾಗೆ ಕಾವಲು ಕಾಯುತಿದ್ದವು. ಅಜ್ಜಿ ಒಂದೆರಡು ಅಡಿ ಮುಂದೆ ಬಂದು ಶ್ರೀಪಾದನ ಕಾಫಿ ಲೋಟಾನ ಸದ್ದು ಮಾಡ್ತಾ ದೂರ ಸರಿಸಿದಳು.

''ಈ ಕಲಿಗಾಲದಲ್ಲಿ ಪಾಪಿಗಳಿಗಲ್ದೆ ಬೇರೆ ಯಾರಿಗೂ ಉಳಿಗಾಲ ಇಲ್ಲ. ನಲವತ್ತು ವರ್ಷದ ಹಿಂದೆ ಹೀಗೇನಾದ್ರು ಆಗಿದೆ ಅಂದ್ರೆ ಯಾರೂ ನಂಬ್ತಾ ಇರ್ಲಿಲ್ಲ. ಮೊನ್ನೆ ಇನ್ನೂ ಆಂಜನೇಯನ ದೇವಸ್ಥಾನಕ್ಕೆ ಯಥಾಪ್ರಕಾರ ಹೋಗ್ತಾ ಇದ್ದ ಸರಸ್ವತಮ್ಮನ ಕುತ್ತಿಗೆಯಿಂದ ಮಟಮಟ ಮಧ್ಯಾಹ್ನದಲ್ಲೇ ಯಾರೋ ಕಳ್ಳ ಮೋಟರ್ ಬೈಕ್ ಮೇಲೆ ಬಂದು ಸರ ಕಿತ್ತುಕೊಂಡುಹೋದ ಅಂತ ನಿಂಗೆ ಗೊತ್ತಿಲ್ವಾ? ದೇವರ ದಯದಿಂದ ಆಕಿ ಬಿದ್ದು ಗಾಯಗೀಯ

ದಿನೇಶ್ ಹಾಸನ್

ಮಾಡಿಕೊಳ್ಳಲಿಲ್ಲ. ದಾಸರು ಹೇಳೋದು ಸತ್ಯ, ಧರ್ಮಕ್ಕೆ ಕೈ ಬರಲ್ಲ ಈ ಕಾಲ್ದಲ್ಲಿ.''

ಅವನಮ್ಮನ ಪುರಾಣಕ್ಕೆ ಶ್ರೀಪಾದ ಗೋಣು ಕೂಡ ಅಲ್ಲಾಡಿಸಲಿಲ್ಲ. ಅಜ್ಜಿ ಸೊಸೆ ಕಡೆ ತಿರುಗಿ ಹಣೆ ಚಚ್ಚಿಕೊಳ್ಳುತ್ತಾ ''ದೇವ್ರೇ, ನನ್ನ ಮಾತು ಯಾರೂ ಕೇಳೊಲ್ಲ. ನೀನಾದ್ರೂ ನಿನ್ನ ಗಂಡನಿಗೆ ಬುದ್ಧಿ ಹೇಳು. ನಾನು ಆಸ್ಪತ್ರೇಲಿ ಬಿದ್ಕೊಂಡಿದ್ದಾಗ ಮಕ್ಕಳಿಗೆ ಮಂತ್ರಾಲಯಕ್ಕೆ ರೈಲಿನಲ್ಲಿ ಹೋಗಿದ್ದು ತುಂಬಾ ಚೆನ್ನಾಗಿತ್ತಂತೆ. ಕಾರಿಗಿಂತ ರೈಲೇ ಕ್ಷೇಮ. ಅವರ ಸಂತೋಷಕ್ಕಾದ್ರೂ ಮಂತ್ರಾಲಯಕ್ಕೆ ಹೋಗಬೇಕು.'' ಗಂಡನ ಥರಾನೆ ಭಾಗೀರಥಿಯೂ ತನಗೆ ಇದೆಲ್ಲ ಕೇಳಿಸ್ಲೇ ಇಲ್ಲ ಅನ್ನೋ ಹಾಗೆ, ಮಗುವಿನ ಮುಂದೆ ಕೈ ಅಗಲ ಮಾಡಿಕೊಂಡು ''ತಾರಮ್ಮಯ್ಯ, ತಂದು ತೋರಿಸಕ್ಕಯ್ಯ'' ಎಂದು ಮೆಲ್ಲಗೆ ಹಾಡತೊಡಗಿದಳು.

ಇಬ್ಬರು ಮೊಮ್ಮಕ್ಕಳು, ಎಂಟು ವರ್ಷದ ಪ್ರಾಣೇಶ ಮತ್ತು ಐದು ವರ್ಷದ ಯಮುನ, ವರಾಂಡದ ಮೂಲೆಯಲ್ಲಿ ಚೌಕಾಬಾರ ಆಡುತ್ತಿದ್ದರು. ಅಜ್ಜಿ ತನ್ನ ತಂತ್ರ ಹೊಸೆಯುವುದರಲ್ಲಿ ತನ್ನನ್ನು ಹೆಸರಿಸಿದ್ದನ್ನು ಗಮನಿಸಿದ ಪ್ರಾಣೇಶ, ಮುಖ ಸೊಟ್ಟಗೆ ಮಾಡಿಕೊಂಡು, ''ಅಜ್ಜೀ, ನಿಂಗೆ ಮುಳಬಾಗಿಲಿಗೆ ಹೋಗಕ್ಕೆ ಇಷ್ಟ ಇಲ್ದೆ ಇದ್ರೆ ಪಾರಾಯಣ ಮಾಡ್ಕೊಂಡು ಮನೇಲೆ ಇರು'' ಅಂದ. ತಾನೇನು ಕಡಿಮೆ ಅನ್ನೋ ಹಾಗೆ ಯಮುನ ಕಣ್ಣರಳಿಸಿಕೊಂಡು, ''ಅಯ್ಯೋ ದೇವ್ರೇ, ಅಜ್ಜಿ ಮನೇಲಿ ಕೂತ್ಕೊಂಡ್ರೆ ಆಕಾಶನೇ ಕೆಳಗೆ ಬೀಳುತ್ತೆ'' ಅಂದಳು.

''ಈಗೇನೋ ಬಾಯಿಗೆ ಬಂದ ಹಾಗೆ ಮಾತಾಡ್ತೀ. ಆ ಕಳ್ರು ನಿನ್ನ ಹಿಡ್ಕೊಂಡ್ರೆ ಏನ್ಮಾಡ್ತೀಯೋ, ಪ್ರಾಣಿ ?'' ಅಂತ ಅಜ್ಜಿ ಪ್ರಾಣೇಶನ್ನ ಕೇಳಿದಳು.

''ಒದ್ದು, ಕಪಾಳಕ್ಕೆ ಹೊಡಿತೀನಿ'' ಅಂದ ಪ್ರಾಣೇಶ.

''ತಾನಿಲ್ದೆ ನಾವು ಎಲ್ಲಿಗೂ ಹೋಗಬಾರ್ದೂಂತ ಅಜ್ಜಿ ಹಠ'' ಅಂತ ಯಮುನ ಧ್ವನಿಗೂಡಿಸಿದಳು.

''ಸರಿ, ಬಂಗಾರದ ಗೊಂಬೆ, ನಿಮ್ಮಮ್ಮ ಎಣ್ಣೆ ನೀರು ಹಾಕಿದ ಮೇಲೆ ಸಿಕ್ಕು ಬಿಡ್ಸೋಂತ ನನ್ನತ್ರ ಬರ್ತೀಯಲ್ಲ ಆಗ ಮಾಡ್ತೀನಿ ನಿಂಗೆ.''

''ಅಮ್ಮ ಈಗ ಸೀಗೆಕಾಯಿ ಹಾಕಿ ಉಜ್ಜಲ್ಲ, ಲಸ್ಟರ್ ಮೂನ್ ಶಾಂಪೂ ಹಾಕ್ತಾಳೆ. ನನ್ನ ಕೂದಲು ಸಿಕ್ಕೇ ಆಗಲ್ಲ'' ಎಂದು ಯಮುನ ತನ್ನ ಕೂದಲಿಂದ ಮುಖ ಮುಚ್ಚಿಕೊಂಡು ಅಜ್ಜಿಯನ್ನು ಅಣಕಿಸಿದಳು.

ಈ ವಿವಾದ ಕೊನೆಗೊಳ್ಳುವುದಿಲ್ಲ ಎಂದು ಅರಿತ ಶ್ರೀಪಾದನಿಗೆ ಏನನ್ನಬೇಕು ಎಂದು ಹೊಳೆಯಲಿಲ್ಲ. ಮಂತ್ರಾಲಯಕ್ಕೆ ಹೋಗಬೇಕು ಅಂದ್ರೆ ಒಂದು ದಿನ ಪ್ರಯಾಣದಲ್ಲೇ ಕಳೆಯುತ್ತೆ. ಅಲ್ಲಿಗೆ ತಲಪಿದ ಮೇಲೆ ಆ ಜನಸಂದಣಿಯಲ್ಲಿ ನುಗ್ಗಿಕೊಂಡು, ಪರಿಪಾಟಲಾಗಿ, ತಡೆಯಲಾರದ ಬಿಸಿಲಿನಲ್ಲಿ ಬೆವರುತ್ತ, ಹಸಿದ ಹೊಟ್ಟೆಯಲ್ಲಿ ಅಮ್ಮನ ಜೊತೆ ಹೊಳೆಯಿಂದ ಮಠಕ್ಕೆ ತಾನೂ ಪಾದಯಾತ್ರೆ ಮಾಡಬೇಕಾಗುತ್ತದೆ ಅನ್ನುವ ಐಡಿಯಾ ಅವನನ್ನು ದುಃಸ್ವಪ್ನದಂತೆ ಕಾಡಿತು. ಮಂತ್ರಾಲಯ ಬೇಡ ಅಂದರೆ ಪ್ರತಿದಿನ ಅಮ್ಮನ ಕಂಪ್ಲೇಂಟ್ ಕೇಳಬೇಕು. ಹೇಗಾದರೂ ಅಲ್ಲಿಗೆ ಅವಳ ಕೊನೆ ಭೇಟಿ, ಪಾಪ ಎಂದೆನ್ನಿಸಿತು. ಜತೆಗೆ ತುಂಬಾ ದೇವಸ್ಥಾನಗಳಿರುವ ಚಿತ್ರದುರ್ಗಕ್ಕಾಗಲೀ, ಬಳ್ಳಾರಿಗಾಗಲೀ ವರ್ಗವಾದರೆ ಹೇಗಿರುತ್ತೇಂತ ಅವನು ಕುತೂಹಲಪಟ್ಟಿದ್ದುಂಟು. ಅಮ್ಮನ ಆಸೆ ಪೂರೈಸುವದರ ಜತೇಲಿ, ಚಿತ್ರದುರ್ಗ, ಹಂಪಿಗಳನ್ನು ನೋಡಿ ಹೈದರಾಬಾದಿನಿಂದ ನ್ಯಾಷನಲ್ ಹೈವೇ ಮೂಲಕ ವಾಪಸ್ ಬರುವುದೆಂದು ಲೆಕ್ಕ ಹಾಕಿದ.

''ಅಮ್ಮಾ, ಇಲ್ಲಿಂದ ಸೋಮವಾರ ಹೊರಟು, ತೀರ್ಥಯಾತ್ರೆ ಮುಗಿಸಿಕೊಂಡು ಭಾನುವಾರ ವಾಪಸ್ ಬರೋಣ. ಕಾರಿನಲ್ಲೆ ಹೋಗೋಣ. ರೈಲ್ನಲ್ಲಿ ರಿಜರ್ವ್ ಮಾಡಿಸೋದು ಅದಕ್ಕೆ ಇದಕ್ಕೆ ಈಗ ಟೈಮ್ ಇಲ್ಲ'' ಅಂದ. ಮಕ್ಕಳು ತಮ್ಮ ಆಟ ಮುಂದುವರಿಸಿದರು. ಸೊಸೆ ಮಗುವನ್ನು ಮುದ್ದಾಡುತ್ತಿದ್ದಳು. ಶ್ರೀಪಾದ ಮತ್ತೆ ಪೇಪರ್ ಓದುವುದರಲ್ಲಿ ಮಗ್ನನಾದ.

''ಇವತ್ತು ಒಪ್ಪತ್ತು, ಮಲಗೋಕ್ಮುಂಚೆ ಹೂಬತ್ತಿ ಹೊಸೆದು ಮುಗಿಸಬೇಕು'' ಅನ್ನುತ್ತ ಅಜ್ಜಿ ತನ್ನ ಕೋಣೆಗೆ ಮರಳಿದಳು.

ಸೋಮವಾರದ ಪ್ರಯಾಣಕ್ಕೆ ಮುಂಚೆ ತಯಾರಿಯ ದೊಡ್ಡ ಸಂಭ್ರಮ. ಭಾನುವಾರ ಪ್ರಾಣೇಶ ತನ್ನ ನಿಂಟೆಂಡೋ ಎಲೆಕ್ಟ್ರಾನಿಕ್‌ಗೇಮ್ಸ್‌ಗಳನ್ನೆಲ್ಲ ತನ್ನ ಕಿಟ್ ಬ್ಯಾಗಿನಲ್ಲಿ ತುಂಬಿದ. ಜೊತೆಗೆ ಒಂದಿಷ್ಟು ಕಾಮಿಕ್ಸ್ ತುರುಕಿದ. ಯಮುನ ತನ್ನ

## ಉಸಿರು

ಉಸಿರಿಗೆ ಬಣ್ಣವಿಲ್ಲ, ವಾಸನೆಯಿಲ್ಲ
ಆಕಾರವಿಲ್ಲ ಏನೇನೂ ಇಲ್ಲ
ಹೋಗಿ ಬರುವ ಅದರ ದಾರಿಗೆ
ದೇಹ ಗಲ್ಲಕ್ಕೆ ಕೈ ಹಚ್ಚಿ ಕೂತಿದೆ

ವಾಸುದೇವ ನಾಡಿಗ್
ಜವಹರ್ ನವೋದಯ ವಿದ್ಯಾಲಯ, ಏನಿಗದಲೆ
ಚಿಂತಾಮಣಿ ತಾಲ್ಲೂಕು, ಕೋಲಾರ ಜಿಲ್ಲೆ

ಬಾರ್ಬೀ ಡಾಲ್ನ ತೆಗೆದಿಟ್ಟುಕೊಳ್ಳಲು ಮರೆಯಲಿಲ್ಲ. ಅಜ್ಜಿ ಹೋಟ್ಲು ಗೀಟ್ಲುಗಳಲ್ಲಿ ಏನನ್ನೂ ತಿನ್ನುತ್ತಿರಲಿಲ್ಲ. ಸೋಮವಾರ ಬೆಳಗ್ಗೆ ಬೇಗ ಎದ್ದು ಅವಳಿಗೆ ಎಂದು ಸೊಸೆ ಒಂದು ದಿನಕ್ಕೆ ಸಾಲುವಷ್ಟು ಚಪಾತಿ ಮಾಡಿದಳು. ಅವಲಕ್ಕಿ ಯಾವಾಗಲೂ ಫಳಾರಕ್ಕೆ ಸರಿಯಾದ್ದರಿಂದ ಒಂದೆರಡು ಕೆ.ಜಿ.ಯನ್ನು ಒಂದು ಪ್ಲಾಸ್ಟಿಕ್ ಚೀಲದಲ್ಲಿ ತುಂಬಿದಳು. ಅಜ್ಜಿ ತನ್ನ ಮಂತ್ರಾಲಯ ಮಹಾತ್ಮೆಯನ್ನು ತನ್ನ ಸೀರೆಗಳ ಜತೆ ಜೋಪಾನವಾಗಿ ಇಟ್ಟಳು.

ಬೆಳಗ್ಗೆ ಹೊರಡುವ ಮುಂಚೆ ಕಾರಿಗೆ ಪೂಜೆ ಮಾಡಬೇಕು ಅಂತ ಅಜ್ಜಿ ಹೇಳಿದಂತೆ ಸೊಸೆ ಕಾರಿಗೆ ಆರತಿ ಬೆಳಗಿದಳು. ಯಾರು ಎಲ್ಲಿ ಕೂರಬೇಕೆಂಬ ವಿಷಯದ ಬಗ್ಗೆ ಒಂದು ದೊಡ್ಡ ಜಿಜ್ಞಾಸೆ ನಡೆದು ಸೊಸೆ ಮಗುವಿನ ಜತೆ ಗಂಡನ ಪಕ್ಕ ಕೂರುವುದೆಂದೂ, ಉಳಿದವರು ಹಿಂದಿನ ಸೀಟಿನಲ್ಲಿ ಆಸೀನರಾಗುವುದೆಂದೂ ತೀರ್ಮಾನ ಮಾಡಿದ ಮೇಲೆ ಯಾತ್ರೆ ಶುರುವಾಯಿತು.

ಮಕ್ಕಳಿಗೆ ಖುಷಿಯೋ ಖುಷಿ. ಮುಳಬಾಗಿಲು, ಮಂತ್ರಾಲಯದ ಬಗ್ಗೆ ತಲೆಕೆಡಿಸಿ ಕೊಂಡವರಲ್ಲ ಅವರು. ಕಾರಿನ ಕಿಟಕಿಯ ಗಾಜು ಏರಿಸುವುದು, ಇಳಿಸುವುದು ಅವರಿಗೆ ತುಂಬ ಸಂತಸದ ಕ್ರಿಯೆ. ಕಿಟಕಿಯ ಹೊರಗೆ ಕೈತೂರಿಸಬೇಡಿ, ಕುಡಿದ ಮತ್ತಿನಲ್ಲಿ ಯಾರಾದರೂ ಚಾಲಕ ತನ್ನ ಲಾರಿಯನ್ನು ತುಂಬಾ ಹತ್ತಿರ ತಂದರೆ ಅನಾಹುತವಾದೀತು ಎಂದು ಶ್ರೀಪಾದ ಹತ್ತು ಸಾರಿ ಹೇಳಿದ ಮೇಲೆ ಮಕ್ಕಳು ಹಾಗೆ ಮಾಡುವುದನ್ನು ಬಿಟ್ಟು ಕಿಟಕಿಗಳ ಹೊರಗೆ ತಲೆ ಹಾಕಿ, ಇಬ್ಬರಲ್ಲಿ ಯಾರು ಜೋರಾಗಿ ಕಿರಿಚುತ್ತಾರೆ ಎನ್ನುವ ಸ್ಪರ್ಧೆ ಶುರು ಮಾಡಿದರು. ಇಬ್ಬರ ಮಧ್ಯೆ ಕುಳಿತಿದ್ದ ಅಜ್ಜಿಯಾಗಲೀ, ತಲೆ ಚಿಟ್ಟು ಹಿಡಿದಿದ್ದ ಶ್ರೀಪಾದನಾಗಲೀ ಏನು ಹೇಳಿದರೂ ಕೇಳುವ ಸ್ಥಿತಿಯಲ್ಲಿ ಅವರಿರಲಿಲ್ಲ.

''ನೀವಿಬ್ರೂ ಸುಮ್ಮನಿರೋದಾದ್ರೆ ಒಂದು ಕತೆ ಹೇಳ್ತೀನಿ'' ಅಂದಳು ಅಜ್ಜಿ.

''ಯಾವ ಕತೆ ?'' ಅಂತ ಯಮುನ ಕೇಳಿದಳು.

''ಹನುಮಂತ ಲಂಕೆ ಸುಟ್ಟಿದ್ದು.''

''ನೀನು ಆ ಕತೇನ ಒಂದು ಸಾವಿರ ಸಲ ಹೇಳಿದ್ದೀ. ಅಳಿಲುಗಳು ಸೇತ್ವೆ ಕಟ್ಟಕ್ಕೆ ಸಹಾಯ ಮಾಡಿದ ಕತೆ ಎರಡು ಸಾವಿರ ಸಲ ಹೇಳಿದ್ದೀ'' ಅಂದ ಪ್ರಾಣೇಶ ಮತ್ತೆ ಕಿಟಕಿಯ ಹೊರಗೆ ತಲೆ ಹಾಕಿ ಹಾರ್ನ್ ತರ ಸದ್ದು ಮಾಡತೊಡಗಿದ. ಮಗು ನಿದ್ದೆ ಹೋಗಿತ್ತು. ಸೊಸೆ ಕೂಡ ಕಣ್ಣು ಮುಚ್ಚಿಕೊಂಡು ಯಾರೂ ನೋಡದ ಕನಸುಗಳನ್ನು ಕಾಣುತ್ತಿದ್ದಳು.

''ನಿಮ್ಮಮ್ಮ ನಿದ್ದೆ ಮಾಡ್ತಿದ್ದಾಳೆ. ಅದಕ್ಕಾದರೂ ಸುಮ್ನಿರಿ ಈಗ'' ಅಂತ ಅಜ್ಜಿ ಕೊಟ್ಟ ಅಪ್ಪಣೆ ಮಕ್ಕಳ ಕಿವಿಗೆ ಬೀಳಲೇ ಇಲ್ಲ.

ಅದೃಷ್ಟವಶಾತ್, ಒಂದು ಅತ್ತಿಹಣ್ಣಿನ ಮರದ ಕೆಳಗೆ ಸೈಕಲ್ ಒಂದನ್ನು ವಾಹನ/ವೇದಿಕೆಯಾಗಿ ಮಾಡಿಕೊಂಡು ಒಬ್ಬ ವಯಸ್ಸಾದ ವ್ಯಕ್ತಿ ಎಳನೀರು ಮಾರುತ್ತಿರುವುದನ್ನು ಸ್ವಲ್ಪ ದೂರದಿಂದ ಮಕ್ಕಳು ಗಮನಿಸಿದವು.

''ಅಪ್ಪಾ, ಒಂದ್ನಿಮಿಷ ನಿಲ್ಸಿ, ಎಳನೀರು, ಎಳನೀರು'' ಎಂದು ಅವು ಅರಚಾಡತೊಡಗಿದವು. ವಿಧಿ ಇಲ್ಲದೆ ಶ್ರೀಪಾದ ಕಾರು ನಿಲ್ಲಿಸಿ ಎಳನೀರನ್ನು ಆರ್ಡರ್ ಮಾಡಿದ. ಮಕ್ಕಳು ಕಾರಿನಿಂದ ಇಳಿದ ಕೂಡಲೆ ಎಳನೀರು ಮಾರುತಿದ್ದವ ಸಾಕಿಕೊಂಡಿದ್ದ ಮಂಗ ತನ್ನ ಕೈಯ್ಯಲಿದ್ದ ಚಿಪ್ಪನ್ನು ಬಿಸಾಡಿ ಸರಸರ ಅಂತ ಮರವೇರಿತು. ತುಂಬಾ ಬಾಯಾರಿಕೆಯಾಗಿದ್ದರೂ, ಎಳನೀರು ಮಾರುವವ ಇತರೆಯವನು ಎಂಬ ಸಂದೇಹದಿಂದ ಅಜ್ಜಿ ತನಗೆ ಏನೂ ಬೇಡ ಅಂದಳು. ಎಳನೀರು ಕುಡಿದ ಮೇಲೆ ಕಾಯನ್ನು ಒಡೆಸಿ ಅದರಲ್ಲಿ ತಿರುಳು ಕಾಣದ ಮಕ್ಕಳು, ತಿರುಳಿರುವ ಕಾಯನ್ನು ಕೊಚ್ಚಿಕೊಡುವಂತೆ ಮಾರುತ್ತಿದ್ದವನನ್ನು ಕೇಳಿದರು. ದೇವರದಯದಿಂದ ಅವನೊಡೆದ ಬೇರೆ ಕಾಯಿಗಳಲ್ಲಿ ತಿರುಳಿತ್ತು. ಕಾರಿಗೆ ಹಿಂತಿರುಗಿ ಎಲ್ಲರೂ ತಮ್ಮ ಹಿಂದಿನ ಕ್ರಿಯೆಗಳನ್ನು ಮುಂದುವರಿಸಿದರು.

ಮಕ್ಕಳು ತೂಕಡಿಸಿ ನಿದ್ದೆ ಮಾಡತೊಡಗಿದಂತೆ, ಅಜ್ಜಿ ತನ್ನ 'ಮಂತ್ರಾಲಯ ಮಹಾತ್ಮೆ'ಯಲ್ಲಿ ಗುರುರಾಯರು ಜಗನ್ನಾಥದಾಸರನ್ನು ಆಶೀರ್ವದಿಸಿ, ತಡೆಯಲಾರದ ಹೊಟ್ಟೆ ನೋವಿನಿಂದ ಬಿಡುಗಡೆ ಮಾಡಿದ ಸಂಗತಿಯನ್ನು ಇದೇ ಮೊದಲು ಅನ್ನುವ ರೀತಿಯಲ್ಲಿ ಓದಿ ಸಂತೋಷಪಡತೊಡಗಿದಳು. ತನ್ನ ಮಾತು ಕೇಳಿ ಸಿಗರೇಟ್ ಸೇದುವುದನ್ನು ಬಿಟ್ಟು, ಕಾಫಿ ಕುಡಿಯುವುದನ್ನು ಕಡಿಮೆ ಮಾಡಿದ್ದರೆ ತನ್ನ ಯಜಮಾನರೂ ಇನ್ನೂ ಬದುಕಿರುತ್ತಿದ್ದರು ಅಂತ ಆಕೆಗೆ ಅನ್ನಿಸಿತು. ಅಜ್ಜಿಯ

ವಟಗುಟ್ಟುವಿಕೆ ತಡೆಯಲಾರದೆ ಆ ಮಹರಾಯ ತನ್ನ ದುರಭ್ಯಾಸಗಳನ್ನು ಬಿಡ್ತೀನಿ ಅಂತ ಹರಿವಾಯುಗಳ ಕ್ಯಾಲೆಂಡರ್ ಮುಂದೆ ಆಣೆ ಮಾಡಿದ್ದ. ಅವಳ ನಿಲ್ಲದ ಮಾತು ಅವನ ನರಗಳನ್ನು ಹರಿಯುತ್ತಿದ್ದಂತೆ ಅವನೊಂದು ಹೊಸ ಚಟ ಬೆಳಸಿಕೊಂಡ. ನಾಯಿಡು ಬೀದಿಯಲ್ಲಿನ ಒಂದು ಗಡಂಗಿನಲ್ಲಿ ಸದಾ ಇಸ್ಪೀಟ್ ಆಡುತ್ತಾ, ಹೋಟೆಲ್ನಿಂದ ಕಾಫಿ ತರಿಸಿಕೊಂಡು, ಸಂತೋಷವಾಗಿ ದಮ್ಮು ಎಳೆಯುತ್ತಾ ತನ್ನ ದಿನಗಳನ್ನು ನೂಕತೊಡಗಿದ. ಅವನ ತೂಕ ಕಡಿಮೆಯಾಗಿ ಸದಾ ವಾಂತಿ ಶುರುವಾಗಿ ಅವನನ್ನು ಆಸ್ಪತ್ರೆಗೆ ಕರೆದುಕೊಂಡು ಹೋದಾಗ ಅವನಿಗೆ ಕರುಳಿನ ಕ್ಯಾನ್ಸರ್ ಇದೆ ಅಂತ ಗೊತ್ತಾಯಿತು. ಕೀಮೊಥೆರಪಿ ಅವನ ಜೀವ ಉಳಿಸಲಿಲ್ಲ. ಈ ದುಷ್ಟ ಕಾಲದಲ್ಲಿ ಎಲ್ಲಕ್ಕೂ ಆಪರೇಶನ್ ಗೀಪರೇಶನ್ ಬೇಕು. ಧರ್ಮ ಮತ್ತು ಭಕ್ತಿಯಿದ್ದರೆ ಯಾವ ಭಯವೂ ಇಲ್ಲ ಎಂದುಕೊಳ್ಳುತ್ತಾ ಅವಳ ಮನಸ್ಸು ನಿರುಮ್ಮಳವಾಯಿತು.

-೨-

ಹೇಳಿ ಕೇಳಿ, ಕೋಲಾರ ಕರ್ನಾಟಕದ ಅತ್ಯಂತ ಒಣಗಿದ ಜಿಲ್ಲೆಗಳಲ್ಲಿ ಒಂದು. ಅಕ್ಕಿ, ಸಕ್ಕರೆ, ಕಾಫಿ ಉತ್ಪಾದಿಸುವ ದಕ್ಷಿಣ ಜಿಲ್ಲೆಗಳ ಜಲಸಮೃದ್ಧಿ ಈ ಸೀಮೆಯಲ್ಲಿಲ್ಲ. ಬೆಂಗಳೂರಿಗೆ ಅತಿ ಸಮೀಪದಲ್ಲಿದ್ದು, ಆಂಧ್ರ, ತಮಿಳುನಾಡುಗಳಿಗೆ ಸೇತುವೆಯಂತಿರುವ ಈ ಜಿಲ್ಲೆ ಅಭಿವೃದ್ಧಿಯ ವಿಷಯದಲ್ಲಿ ಒಂದು ದ್ವೀಪ, ಒಂದು ಸೊನ್ನೆ. ಇಂದಿನ ತಂತ್ರಜ್ಞಾನದಿಂದ ಯಾವ ಭೂಪ್ರದೇಶವನ್ನೂ ಹಸಿರುಗೊಳಿಸುವ ಪ್ರಯತ್ನಕ್ಕೆ ಯಶಸ್ಸು ಸಿಕ್ಕುವುದಾದರೂ, ಬೆಂಗಳೂರಿನಲ್ಲಿ ಕುಳಿತು ತಮ್ಮ ಸ್ವಂತ ಅಭಿವೃದ್ಧಿಯನ್ನೇ ಕೇಂದ್ರ ಮಾಡಿಕೊಂಡಿರುವ ಜನಪ್ರತಿನಿಧಿಗಳಿಗೆ – ಒಬ್ಬ ಲೇಖಕಿ ಅವರನ್ನು ಸಮಂಜಸವಾಗಿ 'ಮಂತ್ರಿ ಮಹೋದರರು' ಎಂದು ಕರೆದಿದ್ದಾರೆ – ನೆಲದೊಳಗಿನ ನಿಧಿ ನೆಲದ ಮೇಲಿನ ಹಸಿರಿಗಿಂತ ಮುಖ್ಯ. ಬ್ರಿಟಿಷರು ಜಿಲ್ಲೆಯ ದಕ್ಷಿಣದಲ್ಲಿ ನೆಲದ ಹೊಟ್ಟೆ ಬಗೆದು, ಚಿನ್ನವನ್ನೆತ್ತಿ, ಆ ಸಂಪತ್ತನ್ನೆಲ್ಲ ವಸಾಹತುಶಾಹಿ ದೇವಿಗೆ ನೈವೇದ್ಯ ಮಾಡಿದಂತೆ, ಈಗ ಉದ್ಯಮಿಗಳು ಎಂದು ಕರೆದುಕೊಳ್ಳುವ ಪ್ರಭಾವಿ ಶ್ರೀಮಂತರು ಜಿಲ್ಲೆಯ ಎಲ್ಲ ಕಡೆ ಗಣಿಗಾರಿಕೆ ನಡೆಸಿ ಸ್ವರ್ಗ ಸುಖವನ್ನು ಅನುಭವಿಸುತ್ತಿದ್ದಾರೆ. ಇದರ ಬಗ್ಗೆ ಸ್ವಲ್ಪ ಗಲಾಟೆಯಾದಾಗ (ಸ್ವಲ್ಪ ಎಂದರೆ ಸುಮಾರು ಯಃಕಶ್ಚಿತ್ ೨೦೦ ಕೋಟಿ ರೂಪಾಯಿಗಳು) ಆರ್ಥಿಕ ಸ್ವಾತಂತ್ರ್ಯವಿಲ್ಲದ ಜನ ಏನನ್ನು ಬೇಕಾದರೂ ಮರೆಯುತ್ತಾರೆ ಎಂಬ ಭಂಡ ಬಂಡವಾಳಶಾಹಿಯ ಕಠೋರ ಸತ್ಯವನ್ನು ಪಾಲಿಸುವ ದಿಲ್ಲಿಯ ದೊರೆಗಳು ಗಣಿಗಾರಿಕೆ ನಿಲ್ಲಿಸುವ ನಾಟಕ ಮಾಡಿ ಪ್ರಜೆಗಳ ಕಣ್ಣೊರೆಸಿ ಎಲ್ಲ ತನಿಖೆಗಳನ್ನು ಮೂಲದಲ್ಲೆ ಚಿವುಟಿ ಹಾಕಿದರು. ಕೆಲಸವಿಲ್ಲದ ಬಡಗಿಗಳಂತೆ ಅಫಿಡವಿಟ್ ಲಾಯರುಗಳು ಪಿ.ಆಯ್.ಎಲ್. ದಾವೆಗಳನ್ನು ಹೂಡಿದಾಗ ಕೋರ್ಟುಗಳು ಈ ವಿಷಯ ತಮ್ಮ ಪರಿಧಿಗೆ ಬರುವುದಿಲ್ಲ ಎಂದು ತೀರ್ಪು ಕೊಟ್ಟು ಕೈ ತೊಳೆದುಕೊಂಡಿದ್ದವು. ಮುಂದೆ ಕಷ್ಟವಾಗದಿರಲಿ ಎಂದು ಎಲ್ಲ ಗಣಿಗಾರಿಕೆಯನ್ನು ಸುಪ್ರೀಮ್ ಕೋರ್ಟಿನ ಆಣತಿ ಬರುವವರೆಗೆ ಸ್ತಬ್ಧ ಮಾಡಬೇಕು ಎಂದು ಉಚ್ಚ ನ್ಯಾಯಾಧೀಶರು ಅಪ್ಪಣೆ ಮಾಡಿ ಬೀಸುವ ದೊಣ್ಣೆಯಿಂದ ತಪ್ಪಿಸಿಕೊಂಡರು. ನ್ಯಾಯಾಂಗ ನಿಂದನೆಯ ಆರೋಪದ ಭಯದಿಂದ ಮುಂದೇನೂ ಮಾಡದೆ ಸದರಿ ಅಫಿಡವಿಟ್ ಶಬರಿಗಳು ಯಥಾಪ್ರಕಾರ ಕಕ್ಷಿದಾರರನ್ನು ನಿರೀಕ್ಷಿಸುತ್ತಾ ತಮ್ಮ ಆಫೀಸುಗಳಲ್ಲಿ ತಲೆ ಮೇಲೆ ಕೈಹೊತ್ತೋ ಅಥವಾ ಕರೀಕೋಟುಗಳ ಮೇಲೆ ಬಿದ್ದ ಧೂಳು ಒರೆಸುತ್ತಲೋ ಕಾಲ ಹಾಕುವ ಅಭ್ಯಾಸಕ್ಕೆ ಹಿಂತಿರುಗಿದರು.

ಪರಿಸ್ಥಿತಿ ಹೀಗಾಯಿತಲ್ಲ ಎಂದು ಹಳವಳಿಸಿ ತಮ್ಮ ಏರ್ ಕಂಡಿಷನ್ಡ್ ಅಮೃತಶಿಲೆಯ ಅರಮನೆಗಳಲ್ಲಿ ವಿಸ್ಕಿ ಕುಡಿಯುತ್ತ ಸುಮ್ಮನೆ ಕೂರುವ ಬದಲು ಕೆಲವು ಕಂಟ್ರಾಕ್ಟರುಗಳು ಜಿಲ್ಲೆಯ ಅಭಿವೃದ್ಧಿ ಕೋಲಾರದಿಂದ ತುಮಕೂರಿಗೆ ಒಂದು ಹೆದ್ದಾರಿ ಕಟ್ಟುವುದರ ಮೇಲೆ ಅವಲಂಬಿತವಾಗಿದೆ ಎನ್ನುವ ಕಾಣ್ಕೆಯನ್ನು ಸರ್ಕಾರಕ್ಕೆ ಮಾರಿ, ಈ ಯೋಜನೆಗೆ ವಿಶ್ವಬ್ಯಾಂಕಿನಿಂದ ಕರ್ನಾಟಕಕ್ಕೆ ಹರಿದುಬಂದು ಎಲ್ಲೋ

## ಸಾದರ ಸ್ವೀಕಾರ

**ಮುಂದಾಳ್ತನದ ಲಕ್ಷಣಗಳನ್ನು ಬೆಳೆಸಿಕೊಳ್ಳುವುದು ಹೇಗೆ ?**
*ಡಾ|| ಅ. ಶ್ರೀಧರ*
**ಪುಟ : ೧೦೮** **ಬೆಲೆ : ರೂ. ೪೦**

**ಒಂಟಿತನ ಎದುರಿಸುವುದು ಹೇಗೆ ?** *ಗೀತಾ ವಿಶ್ವನಾಥ್*
**ಪುಟ : ೧೩೬** **ಬೆಲೆ : ರೂ. ೪೦**

**ದುಡಿವ ಹಾದಿಯಲ್ಲಿ ಜೊತೆಯಾಗಿ** *ನೇಮಿಚಂದ್ರ*
**ಪುಟ : ೧೨೮** **ಬೆಲೆ : ರೂ. ೪೦**

**ಸಮಯದ ಸಮರ್ಥ ಬಳಕೆ ಹೇಗೆ ?** ವೈ. ಜಿ. ಮುರಳೀಧರ
**ಪುಟ : ೧೧೨** **ಬೆಲೆ : ರೂ. ೪೦**

**ಲೈಂಗಿಕತೆ : ವಿವಿಧ ಆಯಾಮಗಳು** *ಡಾ|| ವಿನೋದ ಛೆಬ್ಬಿ*
**ಪುಟ : ೧೦೮** **ಬೆಲೆ : ರೂ. ೪೦**

**ಕಷ್ಟ-ನಷ್ಟಗಳಿಗೆ ಅಂಜಿದೊಡೆಂತಯ್ಯ !**
*ಡಾ|| ಸಿ. ಆರ್. ಚಂದ್ರಶೇಖರ್*
**ಪುಟ : ೧೦೪** **ಬೆಲೆ : ರೂ. ೪೦**

**ಸೌಜನ್ಯತೆ ಹೇಗೆ ?** *ಅರವಿಂದ ಚೊಕ್ಕಾಡಿ*
**ಪುಟ : ೧೧೬** **ಬೆಲೆ : ರೂ. ೪೦**

**ಶಾಲಾಮಕ್ಕಳ ಪೋಷಕರಿಗೆ ಕಿವಿಮಾತು** *ಶಾಂತಾ ನಾಗರಾಜ್*
**ಪುಟ : ೧೨೮** **ಬೆಲೆ : ರೂ. ೪೦**

**ಹಣಕಾಸು ಹೂಡಿಕೆ ಮತ್ತು ವೃದ್ಧಿ ಹೇಗೆ ?**
*ಬಿ. ಆರ್. ರವೀಂದ್ರನಾಥ್*
**ಪುಟ : ೧೨೦** **ಬೆಲೆ : ರೂ. ೪೦**

**ಹುಲಿಯ ಬೆನ್ನೇರಿ...!** *ಡಾ|| ನಾ. ಸೋಮೇಶ್ವರ*
**ಪುಟ : ೧೩೬** **ಬೆಲೆ : ರೂ. ೪೦**

**ಹುಲಿಯ ಜೊತೆ ಜೊತೆಯಲಿ...!** *ಡಾ|| ನಾ. ಸೋಮೇಶ್ವರ*
**ಪುಟ : ೧೩೬** **ಬೆಲೆ : ರೂ. ೪೦**

**ನಿಮ್ಮ ಮಕ್ಕಳ ಬೆಳವಣಿಗೆ ಚೆನ್ನಾಗಿದೆಯೇ ?**
*ಡಾ|| ಸಿ. ಆರ್. ಚಂದ್ರಶೇಖರ್*
**ಪುಟ : ೧೨೦** **ಬೆಲೆ : ರೂ. ೪೦**

ವ್ಯಕ್ತಿ ವಿಕಸನ ಮಾಲೆಯ ಮೇಲಿನ ಹನ್ನೆರಡು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ನೆನಪಿನ ಹೊನಲು** (ವ್ಯಕ್ತಿ ಚಿತ್ರಗಳು)
ಎಚ್. ಜಿ. ಸೋಮಶೇಖರ ರಾವ್
**ಪುಟ : ೧೬೩** **ಬೆಲೆ : ರೂ. ೧೨೦**
**ಅಕ್ಷಯ ಪ್ರಕಾಶನ**, ನಂ. ೨೨೯, ೩ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ಹನುಮಂತನಗರ, ಬೆಂಗಳೂರು - ೧೯

**ಬಿದಿಗೆಯ ಚಂದ್ರ** (ಕವಿತೆಗಳು) ರವೀಂದ್ರನಾಥ ಠಾಕೂರ್
ಅನು : ಜಿ. ರಾಮನಾಥ ಭಟ್
**ಪುಟ : ೮೦** **ಬೆಲೆ : ರೂ. ೪೦**
**ಶುಭೋದಯ ಪ್ರಕಾಶನ**, ನಂ. ೫೦೬, ಚಿತ್ಪಾವನ ಸಮಾಜ, ೬೫ನೇ ಅಡ್ಡರಸ್ತೆ ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦

**ಆರೋಗ್ಯ, ತಿಳುವಳಿಕೆ, ಆಲೋಚನೆ** (ಲೇಖನ ಸಂಗ್ರಹ)
ಎನ್. ಗೋಪಾಲಕೃಷ್ಣ
**ಪುಟ : ೧೦೮** **ಬೆಲೆ : ರೂ. ೪೫**
**ಅಳಿಲು ಸೇವಾ ಸಂಸ್ಥೆ**, ನಂ. ೧೩೩, ಮೊದಲನೇ ಮಹಡಿ, ಕೆ.ಆರ್. ರಸ್ತೆ, ಓಬಳಪ್ಪ ಗಾರ್ಡನ್, ಬೆಂಗಳೂರು - ೮೨

**ಆದರ್ಶ ಸಮಾಜ ನಿರ್ಮಾಣಕ್ಕೆ ಭಗವದ್ಗೀತೆಯ ಬೆಳಕು**
ಪ್ರೊ|| ಕೆ. ಆರ್. ರವಿಕುಮಾರ್
**ಪುಟ : ೮೪** **ಬೆಲೆ : ರೂ. ೪೦**
**ಶ್ರೀಮತಿ ಸಿ. ಎಸ್. ಅನ್ನಪೂರ್ಣ**, ನಂ. ೬೫೦, ೩ನೇ ಬಡಾವಣೆ, ೩ನೇ ವಿಭಾಗ, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

**ಋಣಾನುಬಂಧ** (ಸಾಮಾಜಿಕ ಕಾದಂಬರಿ) 'ಶ್ರೀಮಿತ್ತೂರು'
**ಪುಟ : ೧೨೮** **ಬೆಲೆ : ರೂ. ೬೫**
**ವರ್ಷ ಎಂಟರ್‌ಪ್ರೈಸಸ್**, ೧೨೦೮, ೧ನೇ ಮಹಡಿ, ೨೬ನೇ ಮುಖ್ಯರಸ್ತೆ, ೧ನೇ ಅಡ್ಡರಸ್ತೆ, ೯ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೬೯

**ಅಗ್ನಿಕಿರೀಟ** (ಕವನ ಸಂಕಲನ) ಶಿವಕುಮಾರ್ ಕಂಪ್ಲಿ
**ಪುಟ : ೫೬** **ಬೆಲೆ : ರೂ. ೨೫**
**ಸಂಸ್ಕೃತಿ ಪ್ರಕಾಶನ**, ಎನ್-೨, ಡಿಡಿಪಿಐ ಕಛೇರಿ ಎದುರು, ಕೋಟೆ, ಬಳ್ಳಾರಿ - ೨

**ಆಂಧ್ರರು ಚಿತ್ರಿಸಿದ ಬಸವಣ್ಣ**
ತೆಲುಗು : ಡಾ|| ಬಾಡಾಲ ರಾಮಯ್ಯ
ಅನು : ಡಾ|| ಜಾಜಿ ದೇವೇಂದ್ರಪ್ಪ
**ಪುಟ : ೬೨** **ಬೆಲೆ : ರೂ. ೫೦**

**ಹಾಲಭಾವಿ ವೀರಭದ್ರಪ್ಪನವರ ಆತ್ಮಚರಿತ್ರೆ**
ಹಾಲಭಾವಿ ವೀರಭದ್ರಪ್ಪ
ಸಂ. : ಎಂ. ಎಂ. ಕಲಬುರ್ಗಿ
**ಪುಟ : ೧೧೨** **ಬೆಲೆ : ರೂ. ೬೦**

**ಮಲ್ಲಾಬಾದಿ ವೀರಭದ್ರಪ್ಪ** ಡಾ|| ಬಿ. ಸಿ. ಜವಳಿ
**ಪುಟ : ೧೧೮** **ಬೆಲೆ : ರೂ. ೫**

**ಕುಂಚಬ್ರಹ್ಮ ಮಡಿವಾಳಪ್ಪ ಮಿಣಜಗಿ** ಶಾ. ಮಂ. ಕೃಷ್ಣರಾಯ
**ಪುಟ : ೧೫೩** **ಬೆಲೆ : ರೂ. ೩೦**

ಸಿಂಪಿ ಲಿಂಗಣ್ಣ ಪ್ರೊ|| ವೀರೇಂದ್ರ ಸಿಂಪಿ
**ಪುಟ : ೮೬** **ಬೆಲೆ : ರೂ. ೨೦**

ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ಲಿಂಗಾಯತ ಅಧ್ಯಯನ ಸಂಸ್ಥೆ**, ಎಡೆಯೂರು ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ - ಗದಗ.

ಅಂತರ್ಗತವಾಗುವ ಪಾಲದಲ್ಲಿ ಏನೂ ಅಲ್ಲದ ಮುನ್ನೂರು ಕೋಟಿ ರೂಪಾಯನ್ನು ಈ ಯೋಜನೆಗೆ ಮಂಜೂರು ಮಾಡಿಸಿಕೊಳ್ಳುವುದರಲ್ಲಿ ಯಶಸ್ವಿಯಾದರು. ಬೀದಿ ಬಸವನಂತೆ ಒಂದು ಕಂಪನಿ ಬೆಂಗಳೂರು ಮತ್ತು ಮೈಸೂರಿನ ನಡುವೆ ರೈತರ ಸಾವಿರಾರು ಎಕರೆ ಭೂಮಿಯನ್ನು ಕಬಳಿಸಿದಂತೆ ಈ ರಾಜಕಾರಣಿ ಉದ್ಯಮಿಗಳು ಕೋಲಾರ, ತುಮಕೂರು ಜಿಲ್ಲೆಗಳನ್ನು ಕೊಳ್ಳೆ ಹೊಡೆಯಲು ಇರುವ ರಸ್ತೆಯ ಪಕ್ಕದಲ್ಲೇ ಒಂದು ಹೆದ್ದಾರಿ ಕಟ್ಟುವ ಆಟ ಹೂಡಿದರು. ಈ ಪರಿಶ್ರಮದ ಪ್ರತಿಫಲ ಬೀದಿ ಪಾಲಾದ ಬಡಜನ, ಈಗಿರುವ ತುಮಕೂರು-ಕೋಲಾರ ರಸ್ತೆಯ ಬದಿಯಲ್ಲಿ ಕೊಳ್ಳಗಳು, ಅರ್ಧವೂ ನಿರ್ಮಿತವಾಗಿಲ್ಲದ ದಾರಿ.

- ೩ -

ಎಲ್ಲರೂ ಕಾರಿನಲ್ಲಿ ನಿದ್ದೆ ಮಾಡುತ್ತಿದ್ದರೆ ಶ್ರೀಪಾದ ಅನಿವಾರ್ಯವಾಗಿ ಎಚ್ಚರವಾಗಿದ್ದ. ನಿಯತ್ತು, ಮಾನವೀಯತೆ, ಅಂತಃಕರಣವನ್ನು ಪಾಲಿಸುವುದು - ಇವುಗಳಲ್ಲೆಲ್ಲ ಅಪಾರ ನಂಬಿಕೆ ಇಟ್ಟಿದ್ದ ಅವನಿಗೆ ರಸ್ತೆಯ ಬದಿಯ ಕೊಳ್ಳಗಳು, ಕೃತ್ರಿಮ ಬೆಟ್ಟಗಳು, ಮತ್ತು ಜೆ.ಸಿ.ಬಿ.ಎಮ್. ಯಂತ್ರಗಳು ರಾಷ್ಟ್ರೀಯ ಬದುಕನ್ನೇ ಹಿಸುಕುವ ಜಾಗತೀಕರಣ ಅಸುರನ ಬಾಹುಗಳಂತೆ ಕಂಡಿರಬೇಕು.

ಇದ್ದಕ್ಕಿದ್ದಂತೆ ಅಡ್ಡಬಂದ ಒಂದು ಮಣ್ಣಿನ ಗುಡ್ಡೆಯನ್ನು ಹತ್ತಲಿದ್ದ ಕಾರನ್ನು ಶ್ರೀಪಾದ ಕ್ಷಿಪ್ರವಾಗಿ ಬಲಕ್ಕೆ ತಿರುಗಿಸಿದ. ಕಾರು ಪಕ್ಕಕ್ಕೆ ಹೊರಳಿದಂತೆ ಅದನ್ನು ನೆಟ್ಟಗಿರಿಸಲು ಅಲ್ಲಿ ಸಮತಟ್ಟಾದ ನೆಲವಿರದೆ ಅಲ್ಲಿದ್ದದ್ದು ಗ್ರಾನೈಟ್ ಕಳ್ಳತನದಿಂದ ಹುಟ್ಟಿದ್ದ ಒಂದು ದೊಡ್ಡ ಹಳ್ಳ. ಕಾರು ಆ ಹಳ್ಳದ ಅಂಚಿನಲ್ಲಿ ಅರ್ಧ ಎದ್ದು ಅರ್ಧ ಬಿದ್ದು ತ್ರಿಶಂಕುವಾಗಿ ನಿಂತಿತ್ತು. ತಕ್ಷಣ ಬ್ರೇಕ್ ಹಾಕಿದ ರಭಸಕ್ಕೆ ನಿದ್ರಿಸುತ್ತಿದ್ದವರೆಲ್ಲಾ ಬೆಚ್ಚಿ ಎದ್ದು ಪ್ರಯಾಸದಿಂದ ಎಲ್ಲರೂ ಹೊರಬಂದು ಆ ಹಳ್ಳದ ದಡದಲ್ಲಿ ಕಾರನ್ನು ನೋಡುತ್ತ ನಿಂತರು. ಸಾಧಾರಣ ಬದುಕಿನಲ್ಲಿ ಅನಾಹುತ ಕೂಡ ಮೈನವಿರೇಳಿಸುತ್ತದೆ. ಮಕ್ಕಳು ''ಆ್ಯಕ್ಸಿಡೆಂಟು, ಆ್ಯಕ್ಸಿಡೆಂಟು'' ಎಂದು ಕೂಗಿದರು.

ಶ್ರೀಪಾದ ಮೊದಲು ಸುತ್ತ ಕಣ್ಣು ಹಾಯಿಸಿ ಎಲ್ಲರೂ ಯಾವ ಅಂಗಾಂಗಗಳಿಗೂ ಪೆಟ್ಟುಬೀಳದೆ ಕಾರಿನಿಂದ ಹೊರಬಂದಿದ್ದಾರೆ ಎನ್ನುವುದನ್ನು ಖಾತ್ರಿ ಮಾಡಿಕೊಂಡ. ಸೊಸೆ ಮಗುವನ್ನು ಅವಚಿಕೊಂಡು ನೆಲದ ಮೇಲೆ ಕೂತುಕೊಂಡಿದ್ದಳು. ಮಕ್ಕಳು ಭಯ ದಿಂದಲೋ, ಗೊಂದಲದಿಂದಲೋ ಕೂಗಾಡುತ್ತಿದ್ದರೆ, ಅಜ್ಜಿ ''ನನಗೇನಾಗಿದೆಯೋ ಗೊತ್ತಿಲ್ಲ'' ಎಂದು ಗೊಣಗುತ್ತಿದ್ದಳು.

''ಎಲ್ರೂ ಒಂದು ನಿಮಿಷ ಬಾಯಿ ಮುಚ್ಚಿಕೊಂಡಿರಿ'', ಎಂದು ಗದರಿದ ಶ್ರೀಪಾದ ಸಹಾಯಕ್ಕೆಂದು ಸುತ್ತ ನೋಡಿದಾಗ ಕಣ್ಣಿಗೆ ಕಂಡಿದ್ದು ಕಪ್ಪು ಮಣ್ಣಿನ ನಡುಗಡ್ಡೆಗಳು, ಕುರುಚಲು ಗಿಡಗಳು. ಕಾರು ರಸ್ತೆಯಿಂದ ಸುಮಾರು ಹತ್ತು ಅಡಿ ದೂರದಲ್ಲಿ ಮಣ್ಣು ಗುಡ್ಡೆಯೊಂದರ ಹಿಂದೆ ಬಿದ್ದಿದ್ದರಿಂದ ಈ ಕುಟುಂಬಕ್ಕೆ ಸಂಭವಿಸಿದ ಆಪತ್ತು ಯಾರಿಗೂ ಕಾಣುವಂತಿರಲಿಲ್ಲ.

ಸೊಸೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಮಕ್ಕಳು ಏನು ಮಾಡಬೇಕೆಂದು ತೋಚದೆ ಅಪ್ಪನ ಹತ್ತಿರ ಬಂದು ನಿಂತರು. ಅಜ್ಜಿ, ''ದೇವರೇ, ಭಗವಂತಾ, ನನ್ನ ಕಾಪಾಡು'' ಎಂದು ಮೊರೆಯಿಡುತ್ತಿದ್ದದ್ದು ಯಾರಿಗೂ ಕೇಳಿಸುತ್ತಿರಲಿಲ್ಲ.

ಸುಮಾರು ಅರ್ಧ ಗಂಟೆ ಹೀಗೆ ಕಳೆದನಂತರ ಟಾಟಾ ಸುಮೋವೊಂದು ತಮ್ಮ ಕಡೆ ಬರುತ್ತಿರುವುದು ಕಂಡು ಎಲ್ಲರಿಗೂ ಸ್ವಲ್ಪ ಆತಂಕ ಕಡಿಮೆಯಾಯಿತು.

ಸುಮೋವಿಂದ ಮೊದಲು ಇಳಿದ ವ್ಯಕ್ತಿ ಸುಮಾರು ಆರಡಿ ಎತ್ತರ ಇದ್ದ. ಅವನು ತೊಟ್ಟಿದ್ದ ಬಟ್ಟೆ ಮಾಸಿತ್ತು. ಅವನ ಶರ್ಟಿನ ಮೇಲೆ ಕಂಡಿದ್ದು ರಕ್ತದ ಕಲೆಗಳೋ ಅಥವಾ ಪ್ರಿಂಟೋ ಅಜ್ಜಿಗೆ ಗೊತ್ತಾಗಲಿಲ್ಲ. ನಿದ್ರೆ ಇಲ್ಲದೆ ಅವನ ಕಣ್ಣುಗಳು ಕೆಂಪಾಗಿದ್ದವು. ಅವನ ನಡವಳಿಕೆ ಅವನು ಯಾವ ರಕ್ಷಕ ಅಥವಾ ಕ್ರಾಂತಿಕಾರಿ ರಾಜಕೀಯ ಪಡೆಗೂ ಸೇರಿದವನಲ್ಲ ಎಂದು ಅನುಮಾನಕ್ಕೆ ಆಸ್ಪದವಿಲ್ಲದಂತೆ ಹೇಳುತ್ತಿತ್ತು. ಅವನ ಹಿಂದೆ ಅವನಷ್ಟೇ ಕಣ್ಣು ಕೆಂಪಗಿದ್ದ ಇಬ್ಬರು ಕೊಳಕರು ಇಳಿದುಬಂದರು.

ಬಂದೂಕು ಹಿಡಿದವನು ಶ್ರೀಪಾದನ ಹತ್ತಿರ ಬಂದು ನಿಂತ. ಅವನು ಶ್ರೀಪಾದನನ್ನು ಗಮನವಿಟ್ಟು ಮೇಲಿಂದ ಕೆಳಗೆ ನೋಡುತ್ತಿದ್ದಂತೆ, ಏನು ಹೇಳ ಬೇಕೆಂದು ಶ್ರೀಪಾದನಿಗೆ ಹೊಳೆಯಲಿಲ್ಲ. ಸ್ವಲ್ಪ ಸಾವರಿಸಿಕೊಂಡನಂತರ, ''ನೋಡಿ, ಒಂದು ಆ್ಯಕ್ಸಿಡೆಂಟ್ ಆಗಿದೆ'' ಎಂಬ ಪದಗಳು ಅವನ ಗಂಟಲಿಂದ ಹೊರಜಿದ್ದವು.

''ಆ್ಯಕ್ಸಿಡೆಂಟ್ ಅಷ್ಟೆ ಅಲ್ಲ, ಸಾರ್. ನಿಮಗೆಲ್ಲ ಟ್ರಾಮಾ ಆಗಿರುವಂತಿದೆ,'' ಬಂದೂಕು ಧಾರಿ ತನ್ನ ಕನ್ನಡಕ ಸರಿಪಡಿಸಿಕೊಳ್ಳುತ್ತ ಅಂದ. ''ಎಲ್ಲಿಗೆ ಹೋಗ್ತಾ ಇದ್ದೀರಿ ?''

''ಮಂತ್ರಾಲಯಕ್ಕೆ''

''ಗುರುರಾಯರಲ್ಲಿ ಒಂದು ಕಾಲದಲ್ಲಿ ನನಗೆ ತುಂಬ ನಂಬಿಕೆ ಇತ್ತು. ಬೆಳಗ್ಗೆ ಎದ್ದ ತಕ್ಷಣ 'ರಾಘವೇಂದ್ರಾಯ, ಸತ್ಯಧರ್ಮ ರತಾಯ ಚ' ಅಂತಿದ್ದೆ. ದ್ವೈತ ಶಾಸ್ತ್ರ ಬಿಟ್ಟರೆ ಈ ಬದುಕನ್ನು ಸಮರ್ಥವಾಗಿ ವಿಶ್ಲೇಷಿಸುವ ಬೇರೆ ಟೀಕೆ ಇಲ್ಲ ನೋಡಿ.''

ಇಂಥ ಒಂದು ಸಂದರ್ಭದಲ್ಲಿ ಅವನ ಮಾತು, ಶಿಷ್ಟ ಉಚ್ಚಾರಣೆ ಶ್ರೀಪಾದನಿಗೆ ಅಚ್ಚರಿ ಮೂಡಿಸಿದರೂ, ಕತ್ತಲಾಗುವ ಮುಂಚೆ ಒಂದು ಸುರಕ್ಷಿತ ಸ್ಥಳ ಸೇರುವ ಆತಂಕ ಎಲ್ಲವನ್ನು ಮೀರಿಸಿತು.

''ನೀವು ಈ ಕಡೆ ಬಂದಿದ್ದು ನಮ್ಮ ಅದೃಷ್ಟ. ನಮ್ಮ ಕಾರನ್ನ ಮೇಲೆತ್ತಲು ನಮಗೆ ಸಹಾಯ ಮಾಡಿ. ಅದು ಇನ್ನೂ ಓಡೋ ಸ್ಥಿತೀಲಿ ಇದ್ರೆ ನನ್ನ ಹಿಂದೆ ಚಿಕ್ಕಬಳ್ಳಾಪುರಕ್ಕೆ ಬನ್ನಿ. ಅಲ್ಲಿ ಮೊದಲು ಸಿಕ್ಕಿದ ಎ.ಟಿ.ಎಮ್.ನಿಂದ ನಿಮಗೆ ಎಷ್ಟು ಬೇಕೋ ಅಷ್ಟು ದುಡ್ಡು ತೆಗೆದುಕೊಡ್ತೀನಿ.''

''ಈ ಬದುಕಿನಲ್ಲಿ ದುಡ್ಡು ಅಷ್ಟು ಮುಖ್ಯ ಅಲ್ಲ. ಆದರೆ ಅದನ್ನ ಸಂಪಾದಿಸೋಕೆ ಯಾಕಿಷ್ಟು ಕಷ್ಟಪಡಬೇಕು ಅನ್ನೋದು ಮುಖ್ಯ. ಇವತ್ತಿರುತ್ತೆ, ನಾಳೆ ಹೋಗುತ್ತೆ. ಅಂದಹಾಗೆ, ನಿಮ್ಮ ಹೆಸರು ಏನಂದ್ರಿ?''

''ಶ್ರೀಪಾದ'' ಭಯ ಅವನ ಧ್ವನಿಯನ್ನು ಕಂಪಿತಗೊಳಿಸಿತ್ತು.

''ನೋಡಿ, ಶ್ರೀಪಾದರಾಯರೇ, ನಾನು ಮುಳಬಾಗಿಲಿನ ಮಠಕ್ಕೆ ತುಂಬಾ ಸಾರಿ ಹೋಗಿಬಂದಿದ್ದೀನಿ. ಅಲ್ಲಿ ಸಂತರ್ಪಣೆ ಅನ್ನೋದು ಇಲ್ದಿದ್ರೆ ನನ್ನ ಕತೆ ಯಾವಾಗ್ಲೋ ಮುಗಿದುಹೋಗ್ತಿತ್ತು. ಎಲ್ಲಾ ಸರಿಯಾಗಿದ್ರೆ ರಂಗವಿಠ್ಠಲ, ಹಯವದನ ಅಂತ ಸದಾ ಧ್ಯಾನ ಮಾಡ್ಕೊಂಡಿರ್ತಿದ್ದೆ.''

ಶ್ರೀಪಾದನ ತಾಳ್ಮೆಯ ಕೋಡಿ ಒಡೆಯಿತು. ಸಂಯಮ ಇಟ್ಟುಕೊಳ್ಳಲು ಹೆಣಗುತ್ತಾ ಅವನೆಂದ, ''ಅದೆಲ್ಲಾ ಸರಿ ಕಣ್ರೀ. ನಮಗೆ ಈಗ ಸಹಾಯ ಬೇಕು. ನಮ್ ಕಾರ್‌ನ ಎತ್ತಕ್ಕೆ ಕೈ ಹಾಕತೀರೋ ಇಲ್ವೋ ?''

ಬಂದೂಕಿಯ ಮಂದಹಾಸ ಇದ್ದ ಹಾಗೇ ಇತ್ತು. ಶ್ರೀಪಾದನ ಕಡೆ ಗಮನ ಕೊಡದೆ, ತನ್ನ ಸಹಚರರಲ್ಲಿ ಒಬ್ಬನನ್ನು ಹತ್ತಿರ ಕರೆದ. ಅವನ ಧ್ವನಿಯಲ್ಲಿ ಸ್ವಲ್ಪವೂ ಕಾಠಿಣ್ಯವಿರಲಿಲ್ಲ.

''ಗುರು, ಸಾಹೇಬ್ರು ಏನಂದ್ರು, ಕೇಳಿದ್ಯಾ?''

''ಕೇಳಿದೆ, ಬಾಸ್. ಅವರಪ್ಪಣೆ ನಡೆಸೋಣ.''

ಸೊಸೆಗೆ ಸುಮ್ಮನಿರಲಾಗಲಿಲ್ಲ. ಅವಳ ಗೋಳಾಟ ಕುರುಚಲು ಗಿಡಗಳನ್ನೂ ನಡುಗಿಸುವಂತಿತ್ತು. ಅವಳ ಜೊತೆ ಮಗುವೂ ಹುಯ್ಯಲಿಡಲು ಶುರು ಮಾಡಿತು.

ಬಂದೂಕಿ ಶ್ರೀಪಾದನ ಶರ್ಟನ್ನು ನೋಡುತ್ತಾ, ''ಸ್ವಾಮೀ, ಈ ಗದ್ದಲದಲ್ಲಿ ನಿಮಗೆ ಸಹಾಯ ಹೇಗೆ ಮಾಡೋದು ಅಂತ ತೀರ್ಮಾನ ಮಾಡೋದು ಕಷ್ಟ.''

ಶ್ರೀಪಾದನಲ್ಲಿ ಆಸೆ ಮೂಡುತ್ತಿದ್ದಂತೆ ಬಂದೂಕಿ ಸೊಸೆಯನ್ನು ದಿಟ್ಟಿಸಿದ.

''ಅಮ್ನೋರೇ, ಧೃತಿಗೆಡೋದ್ರಿಂದ ಏನೂ ಸಾಧನೆ ಆಗಲ್ಲ. ಬದುಕಿನಲ್ಲಿ ಸ್ಥೈರ್ಯ ಮುಖ್ಯ.''

ಸೊಸೆಗೆ ಅವನ ಕಡೆ ದೃಷ್ಟಿ ಹಾಯಿಸಲು ಇಷ್ಟವಾಗಲೀ, ಧೈರ್ಯವಾಗಲೀ ಇರಲಿಲ್ಲ.

ತನ್ನ ಹವಾಯಿ ಚಪ್ಪಲಿಯಿಂದ ಮಣ್ಣನ್ನು ಕೆರೆಯುತ್ತಿದ್ದ ಸಹಚರ ಇದೆಲ್ಲವನ್ನೂ ಗಮನಿಸುತ್ತಿದ್ದುದನ್ನು ಖಚಿತಪಡಿಸಿಕೊಂಡು ಬಂದೂಕಿ ಸೊಸೆಗೆ ಕೈಮುಗಿದ.



ಮುಂದಿನ ದಿನಗಳಲ್ಲಿ ಮಠಗಳನ್ನು 'ಪ್ರವಾಸೋದ್ಯಮ ಕೇಂದ್ರ'ಗಳನ್ನಾಗಿ ಮಾಡಬಹುದು ಅಂತ ಕಾಣ್ಸತ್ತೆ... ನಂ ಸರ್ಕಾರದವ್ರು...!!

''ಅಮ್ಮಾ, ದಯವಿಟ್ಟು ನೀವು ನಿಮ್ಮ ಮಗೂನ ಇವನ ಜತೆ ಕರ್ಕೊಂಡು ಹೋಗಿ. ಯೋಚನೆ ಮಾಡಬೇಡಿ.''

ಸೊಸೆ ಹಳ್ಳದ ಕಡೆ ನಿಧಾನವಾಗಿ ನಡೆದಂತೆ, ಬಂದೂಕಿಯ ಸಹಚರ ಅವಳನ್ನು ಹಿಂಬಾಲಿಸಿದ. ಅವನ ಪ್ಯಾಂಟಿನ ಜೇಬೊಂದರಲ್ಲಿ ಅವನೇನೋ ಹುಡುಕುತ್ತಿದ್ದಂತಿತ್ತು. ಶ್ರೀಪಾದನ ದೃಷ್ಟಿ ಅವರು ಹೋಗುತ್ತಿದ್ದ ದಿಟ್ಟಿನಲ್ಲಿ ನೆಟ್ಟಿತ್ತು.

''ಅಮ್ಮನ್ನ ಎಲ್ಲಿ ಕರೆದುಕೊಂಡು ಹೋಗ್ತಾ ಇದ್ದೀರಿ ?'' ಪ್ರಾಣೇಶನ ಧ್ವನಿಯಲ್ಲಿ ಕ್ರೋಧ ಮತ್ತು ಭಯ ತುಂಬಿತ್ತು.

''ನಂಗೆ ಅಮ್ಮ ಬೇಕು. ಅಮ್ಮ ಬೇಕು.'' ಯಮುನಳ ಧ್ವನಿಯಲ್ಲಿ ಸಂಕಟವಿತ್ತು.

''ನಿಖರವಾದ ಚಿಂತನೆಗೆ ಮಕ್ಕಳು ಅಡ್ಡಿ ಬರ್ತಾ ಇದಾರೆ, ಸಾರ್. ಅವರನ್ನು ಒಂದು ನಿಮಿಷ ದೂರ ಕಳಿಸಿ ಯೋಚನೆ ಮಾಡ್ತೀನಿ.'' ಬಂದೂಕಿಯ ಧ್ವನಿ ಮೃದುವಾಗೇ ಇತ್ತು. ಅವನ ಎರಡನೇ ಸಹಚರ ಸ್ವಲ್ಪ ದೂರದಲ್ಲಿ ನಿಂತಿದ್ದ. ಅವನ ಗಮನ ಸೆಳೆಯಲು ಸ್ವಲ್ಪ ಮಾತ್ರ ಧ್ವನಿಯೇರಿಸಿ, ''ಶಿವು, ಒಂದು ನಿಮಿಷ ಇಲ್ಲಿ ಬಾ,'' ಅಂದ. ಶಿವು ಹತ್ತಿರ ಬಂದು, ''ಬಾಸ್, ನೀವು ಯಾವಾಗ ಆರ್ಡರ್ ಕೊಡ್ತೀರಿ ಅಂತ ಕಾಯ್ತಾ ನಿದ್ದೆ ಬರ್ತಾ ಇತ್ತು'' ಅಂದ.

ಅವನ ಚತುರೋಕ್ತಿಗೆ ಗಮನ ಕೊಡದೆ, ತನ್ನ ಹಿಂದಿನ ಸಮಾಧಾನಕರ ಧ್ವನಿಯಲ್ಲೆ ಬಂದೂಕಿ ಅಂದ : ''ಶಿವು, ಈ ಮಕ್ಕಳನ್ನ ಆ ಕಡೆ ಕರ್ಕೊಂಡು ಹೋಗು. ಅವರು ಗಾಬರಿ ಆದ ಹಾಗೆ ಕಾಣುತ್ತೆ.''

''ನನ್ನ ಜೊತೆ ಬನ್ನಿ. ಅಲ್ಲೊಂದು ಸಣ್ಣ ಪಾರ್ಕ್ ತೋರಿಸ್ತೀನಿ'' ಅಂತ ಶಿವು ಹೇಳಿದ ತಕ್ಷಣ ಮಕ್ಕಳು ಕಿರಿಚತೊಡಗಿದರು.

''ನಾವ್ಯಾಕೆ ನಿಮ್ಮ ಜತೆ ಬರ್ಬೇಕು ? ನೀವು ಏನು ಮಹಾ ದೊಡ್ಡ ಮನುಷ್ಯ? ರಾಕ್ಷಸನ ಥರ ಇದ್ದೀರಿ ನೋಡಕ್ಕೆ.''

ಪ್ರಾಣೇಶ ಹಾಗೆ ಅನ್ನಬಾರದಿತ್ತು ಅನ್ನುವ ಆಲೋಚನೆ ಶ್ರೀಪಾದನ ಮನಸ್ಸಿನಲ್ಲಿ ಮೂಡುತ್ತಿದ್ದ ಹಾಗೆ ಶಿವು ಬರಲೊಪ್ಪದ ಮಕ್ಕಳನ್ನು ಎಳೆದುಕೊಂಡು ಮಣ್ಣುಗುಡ್ಡೆ, ಪೊದೆಗಳ ಹಿಂದೆ ಮಾಯವಾದ.

ಮೌನ. ನಿಶ್ಯಬ್ದ. ಆತಂಕ.

ಶ್ರೀಪಾದ ''ನೋಡ್ರೀ,'ಇದು ಸರಿ ಅಲ್ಲ. ಅವರನ್ನೆಲ್ಲ ವಾಪಸ್ ಕರ್ಕೊಂಬನ್ನಿ ಅಂತ ನಿಮ್ಮ ಸ್ನೇಹಿತರಿಗೆ ಹೇಳಿ. ಇಲ್ದೆ ಇದ್ರೆ...'' ಅಂತ ಗುಡುಗಲು ಯತ್ನಿಸಿ ಗದ್ಗದನಾಗಿ ಕೇಳಿದ.

ಇದನ್ನೆಲ್ಲ ನೋಡುತ್ತಾ ಇಲ್ಲಿ ತನಕ ಏನೂ ಹೇಳದಿದ್ದ ಅಜ್ಜಿ ''ಅಯ್ಯೋ, ಯಾಕೆ ಹೀಗಾಗ್ತಿದೆ ? ನಾನೇನು ಪಾಪ ಮಾಡಿದ್ದೆ ಇದೆಲ್ಲ ನೋಡ್ಲಿಕ್ಕೆ'' ಎಂದು ಬಿಕ್ಕಳಿಸಿದಳು:

ಒಂದೆರಡು ನಿಮಿಷಗಳ ಮೌನ. ಅಜ್ಜಿಯ ಮಾತಿಗೆ ಫುಲ್ ಸ್ಟಾಪ್ ಹಾಕಲೆನ್ನುವಂತೆ ನಾಲ್ಕು ಸಲ ಗುಂಡು ಹಾರಿಸಿದ ಶಬ್ದ ಪೊದೆಗಳ ಹಿಂದಿನಿಂದ ಕೇಳಿಬಂತು.

ಶ್ರೀಪಾದ ಬಾಯಿ ತೆರೆಯುತ್ತಿದ್ದಂತೆ, ಬಂದೂಕಿ ಆಗಿನ್ನೂ ತಿರುಗಿಬಂದಿದ್ದ ಸಹಚರನಿಗೆ ಶ್ರೀಪಾದನನ್ನು ದೂರ ಕರೆದುಕೊಂಡು ಹೋಗಲು ಹೇಳಿದ. ''ಮಾತೃಶ್ರೀ ಅವರ ಜೊತೆ ಸ್ವಲ್ಪ ಮಾತಾಡ್ಬೇಕು. ಸಾಹೇಬ್ರು ಯಾಕೋ ಗುರ್ ಅಂತಿದ್ದಾರೆ.''

ಎಷ್ಟೇ ಕಷ್ಟಪಟ್ಟರೂ ಶ್ರೀಪಾದನ ನಾಲಿಗೆ ಆಡಲು ಒಪ್ಪಲಿಲ್ಲ. ಒಮ್ಮೆ ಅಜ್ಜಿಯ ಮುಖ ನೋಡಿದ. ಮತ್ತೊಮ್ಮೆ ಬಂದೂಕಿಯ ಮುಖ ನೋಡಿದ. ಕಂಪಿಸುವ ಕಾಲುಗಳ ಮೇಲೆ ಸಹಚರನ ಮುಂದೆ ನಡೆದ.

ತನ್ನ ಜೀವಮಾನದಲ್ಲೇ ಆಗಿರದ ಹೆದರಿಕೆ ಅಜ್ಜಿಗೆ ಅನುಭವ ಆಯಿತು. ಈ ಸುಡುಗಾಡಿನಲ್ಲಿ ಅಪರಿಚಿತನೊಬ್ಬನ ಜೊತೆ ಒಂಟಿಯಾಗಿ ? ಅರಿವಿದ್ದೋ, ಅರಿವಿಲ್ಲದೆಯೋ, ಅವಳ ಕೈ ಸೆರಗನ್ನು ಸರಿಪಡಿಸಿತು, ಹಣೆಯ ಮೇಲೆ ಬಿದ್ದ ಕೂದಲನ್ನು ಹಿಂದಕ್ಕೆ ಸರಿಸಿತು, ಅವಳ ಸರವನ್ನು ಸೆರಗಿನೊಳಗೆ ಮುಚ್ಚಿಟ್ಟಿತು.

ಉಗುಳು ನುಂಗುತ್ತ ಅಜ್ಜಿ ಮಾತಾಡಿದಳು. ''ನೋಡಿ, ನೀವು ಯಾರು ಅಂತ ನನಗೆ ಗೊತ್ತಿಲ್ಲ. ಆದ್ರೆ ನೀವು ಮಾತಾಡೋ ರೀತಿಯಿಂದ ನೀವು ಆ ದರೋಡೆಕಾರರಲ್ಲಿ ಒಬ್ರಲ್ಲಾ ಅಂತ ಗೊತ್ತಾಗುತ್ತೆ. ನಿಮ್ಮಂಥ ಸಜ್ಜನರು ನನ್ನಂಥ ಕೈಲಾಗ್ದೋಳನ್ನ ಹೊಡೆಯಲ್ಲ, ಅಲ್ವಾ?''

ಬಂದೂಕಿ ಉತ್ತರಿಸಲಿಲ್ಲ.

ಪೊದೆಗಳ ಹಿಂದೆ ಮತ್ತೊಂದು ಗುಂಡು ಹಾರಿದ ಶಬ್ದ.

ಅಜ್ಜಿಯ ಮೈ ನಡುಗಿತು. ಅವಳ ಮನಸ್ಸು ಅವಳ ಹೃದಯದಿಂದ ಹೊರಬಂದು ಗಾಳಿಯಲ್ಲಿ ತೇಲಾಡ ತೊಡಗಿತು. ಅವಳ ಬುದ್ಧಿ ಮೆದುಳಿನ ಸ್ವಾಮ್ಯವನ್ನು ತಿರಸ್ಕರಿಸಿ ಕತ್ತಲೆಯಲ್ಲಿ, ಕಾಡಿನಲ್ಲಿ, ಪಾತಾಳದಲ್ಲಿ, ಮಳೆಯಲ್ಲಿ, ಹೊಳೆಯಲ್ಲಿ, ಚರಂಡಿಗಳಲ್ಲಿ ತೇಲಾಡತೊಡಗಿತು.

''ಏನಾಯ್ತು ನನ್ನ ಕಂದ ಶ್ರೀಪಾದಂಗೆ ? ಎಲ್ಲಿಗೆ ಹೋದ ಅವ್ನು ? ದೇವರೇ, ನೀನೇ ನನ್ನ ಕಾಪಾಡಬೇಕು. ತಿಮ್ಮಪ್ಪಾ, ನಿನಗೆ ಮಾಡಿದ ಹರಕೆನೆಲ್ಲಾ ಖಂಡಿತ ತೀರಿಸ್ತೀನಿ, ನಿಮ್ಮಾಣೆ. ರಾಯರೇ, ನಿಮ್ಮ ಕರುಣೆ ನನ್ನ ಮೇಲೆ ಇರಲಿ.'' ಈ ಪ್ರಾರ್ಥನೆ ಆಕೆಯ ಮನಸ್ಸಿನಲ್ಲಿ ರೂಪ ತಳೆಯಲು ಪ್ರಯತ್ನಿಸಿತೋ ಅಥವಾ ಆಕೆ ಅದನ್ನು ಉಚ್ಚರಿಸಿದಳೋ ತಿಳಿಯುವಂತಿರಲಿಲ್ಲ.

''ಅಮ್ಮಾ, ಸಮಾಧಾನ ತಂದ್ಕೊಳಿ. 'ಆರಿಗೆ ಯಾರುಂಟು, ಎರವಿನ ಸಂಸಾರ' ಅನ್ನೋ ದಾಸರ ಪದ ನಿಮಗೆ ಗೊತ್ತಲ್ಲ. ಆರಿಗೆ ಯಾವ ಸಮಯದಲ್ಲಿ ಏನಾಗುತ್ತೆ ಅಂತ ಗೊತ್ತಿದ್ರೆ ಬದುಕು ಬದುಕಲ್ಲ. ಆ ತರಹ ಮುಂದೆ ಏನಾಗುತ್ತೆ ಅಂತ ತಿಳಿಯೋ ಶಕ್ತಿ ಪಡೀಬೇಕು ಅಂತ ಹಳಹಳಿಸಿ ನನ್ನ ಜೀವನನ್ನೆಲ್ಲಾ ಹಾಳುಮಾಡಿದ್ದೀನಿ. ಅದು ಬಂದಿಲ್ಲ, ಬರುತ್ತೋ ಇಲ್ವೋ ಗೊತ್ತಿಲ್ಲ. ಮಾಡು ಸಿಕ್ಕದಲ್ಲಾ, ಗೂಡಿನ ಜಾಡು ಸಿಕ್ಕದಲ್ಲಾ ಅನ್ನೊ ಹಾಗೆ.''

ಬಂದೂಕಿ ತನ್ನ ಕೊನೆ ವಾಕ್ಯ ಮುಗಿಸುತ್ತಿದ್ದಂತೆ ಅವನ ಮೊದಲನೇ ಸಹಚರ ಆಗಮಿಸಿ ಶ್ರೀಪಾದ ತೊಟ್ಟಿದ್ದ ಶರ್ಟನ್ನು ಅವನ ಕಡೆ ಎಸೆದ. ಶರ್ಟನ್ನು ಬಂದೂಕಿ ಪರೀಕ್ಷಿಸಿ, ಎಲ್ಲೂ ರಕ್ತದ ಕಲೆಯಿಲ್ಲ ಅಂತ ಸಂತೋಷದಿಂದ ತನ್ನ ಕೊಳಕು ಶರ್ಟ್ ತೆಗೆದುಹಾಕಿ ಶ್ರೀಪಾದನ ಶರ್ಟ್ ಧರಿಸಿದ.

ಬದುಕಿನ ಬಗ್ಗೆ ಬಂದೂಕಿಯ ಮಾತು ಮುನ್ನಡೆಯಿತು. ''ನಾನು ವೇದಪಠಣ ಮಾಡಿದ್ದೇನೆ. ಉಪನಿಷತ್ತುಗಳನ್ನು ಅಭ್ಯಸಿಸಿದ್ದೇನೆ. ವಚನಗಳನ್ನು ಹಾಡಿದ್ದೇನೆ. ಕೀರ್ತನೆಗಳನ್ನು ಗೆಜ್ಜೆ ಕಟ್ಟಿಕೊಂಡು ಉಲಿದಿದ್ದೇನೆ. ಹರಿದ್ವಾರದಿಂದ ಕನ್ಯಾಕುಮಾರಿಯವರೆಗೆ ಅಲೆದಿದ್ದೇನೆ. ಇನ್ನೂ ನನಗೆ ಇದರ ಅರ್ಥ ಏನು ಅಂತ ಗೊತ್ತಾಗಿಲ್ಲ. ಮಾತಿಲ್ಲದೆ ಸದಾ ಮೌನದಲ್ಲೇ ಕಾಲ ಕಳೆದಿದ್ದರೆ ಪರಿಪೂರ್ಣತೆ ಸಿಕ್ಕುತ್ತಿತ್ತೇನೋ.''

ತನ್ನ ತೀರ್ಥಯಾತ್ರೆ, ಪೂಜೆ, ಪುನಸ್ಕಾರ ಎಲ್ಲ ಅಜ್ಜಿಯ ನೆನಪಿನಲ್ಲಿ ಅಟ್ಟಹಾಸದಿಂದ ಕುಣಿದವು, ಹಾಡಿದವು, ದಂಡಪ್ರಣಾಮ ಮಾಡಿದವು. ತಾನು ಎಲ್ಲಿದ್ದೇನೆ, ಏನು ಮಾಡುತ್ತಿದ್ದೇನೆ ಎನ್ನುವ ಪರಿವೆ ಕ್ಷಣ ಕ್ಷಣಕ್ಕೆ ಮರೆಯಾಗಲು ಆರಂಭಿಸಿತು. ಎದುರಿಗಿರುವ ವ್ಯಕ್ತಿ ಯಾರು ? ಇದು ಕೋಲಾರವೇ, ಮಂತ್ರಾಲಯವೇ ? ಆ ಹಕ್ಕಿ ಗಿಳಿಯೋ, ಹದ್ದೋ ? ನನ್ನ ಕಡೆ ಬರುತ್ತಿರುವ ಆ ಪ್ರಾಣಿ ಪುಣ್ಯಕೋಟಿಯೋ, ವ್ಯಾಘ್ರವೋ ?

ಅರಿವು ಮಾಸುತ್ತಿದ್ದರೂ, ಅವಳ ಮಾತಿನ ಹರಿವು ಇಳಿಯಲಿಲ್ಲ. ಬಂದೂಕಿಯನ್ನು ನೋಡುತ್ತಾ, ಅವನ ಶಂಖ, ಚಕ್ರ, ಗದೆ, ಕಮಲಗಳನ್ನು ಅವಲೋಕಿಸುತ್ತಾ, ಗೊತ್ತಿದ್ದೋ, ಗೊತ್ತಿಲ್ಲದೆಯೋ, ನಿಧಾನವಾಗಿ ಈ ಪದಗಳನ್ನು ಆಕೆ ಪೋಣಿಸಿದಳು. ''ಈಗ ನನಗೆ ಜ್ಞಾನೋದಯವಾಯಿತು. ನೀನು ನನ್ನ ಸುಪುತ್ರ, ಕರ್ಣ. ಏಳು ಜನ್ಮದಲ್ಲಿ ನಾನು ಮಾಡಿದ ಪುಣ್ಯದ ಫಲ. ನೀನು ನನ್ನನ್ನು ಸಾಯಿಸಬಾರದು. ಮಾತೃಹತ್ಯೆಗಿಂತ ಮಹಾಪಾಪ ಇಲ್ಲ, ಪರಮಾತ್ಮ.''

ಪರಮಾತ್ಮನಾಣೆ ಎನ್ನುವ ಪದವನ್ನು ಆಕೆ ಪೂರ್ಣಗೊಳಿಸುವ ಮುನ್ನ ಬಂದೂಕಿ ಗುರಿಯಿಟ್ಟು ಅವಳ ಹೃದಯದ ಮಧ್ಯಭಾಗಕ್ಕೆ ಮೂರು ಸಲ ಗುಂಡು ಹಾರಿಸಿದ.

ಗುರು ಅವನನ್ನು ಭಕ್ತಿಯಿಂದ ನೋಡುತ್ತಿದ್ದಂತೆ, ಶಿವು ಸಿಳ್ಳೆ ಹಾಕುತ್ತಾ ಅಲ್ಲಿಗೆ ಬಂದ. ರಕ್ತದಿಂದ ಅಲಂಕೃತಳಾಗಿದ್ದ ಅಜ್ಜಿಯನ್ನು ನೋಡುತ್ತಾ, ಬಂದೂಕಿಯ ಕಡೆ ದೃಷ್ಟಿ ಹಾಯಿಸಿದ.

''ಮಜಾ ಅಂದ್ರೆ ಇದಲ್ವಾ, ಬಾಸ್ ? ಸಕತ್ ಮಜಾ.''

''ಶಿವು, ನಿನ್ನ ತಲೆ ಯಾವಾಗ್ಲೂ ಖಾಲಿ. ಈ ಬದುಕಿನಲ್ಲಿ ಖುಷಿ ಅನ್ನೋದು ಒಂದು ಮರೀಚಿಕೆ. ಆ ಮುದುಕಿ ಅಷ್ಟೊಂದು ಮಾತಾಡದಿದ್ರೆ, ಇದರಲ್ಲಿ ಸ್ವಲ್ಪ ಸಂತೋಷ ಇರ್ತಾ ಇತ್ತು. ಏನು ಹೇಳೋದು ? ಬದುಕಿನಲ್ಲಿ ಕೆಲಸ ಯಾವತ್ತೂ ಮುಗಿಯದ ಕತೆ.''

ಸುಮೋ ಅಥವಾ ಸ್ಯಾಂಟ್ರೋ, ತುಮಕೂರು ಅಥವಾ ಕೋಲಾರ ಅನ್ನುವ ಪ್ರಶ್ನೆ ಬಂದೂಕಿಯ ತಲೆಯಲ್ಲಿ ನಡೆದಾಡುತ್ತಿತ್ತು.

ದಿನೇಶ್ ಹಾಸನ್
ನಂ. ೮೨೨, ಸ್ಟಬ್ ಮಿಲ್ ರೋಡ್, ಲೆಬನಾನ್, ಒಎಚ್ಐಒ, ಯು.ಎಸ್.ಎ. ೪೫೦೩೬

**ಇವರು**

ಮಾತು ಮಾತಿಗೆ ಮೂದಲಿಸುವ ಜನ
ಮಾತಿಗೆ ಸಿಕ್ಕದೇ ಓಡುವರು
ಒಮ್ಮೆ ಮುಖಾಮುಖಿಯಾಗಿ ನೋಡಿ
ಮೌನಕ್ಕೆ ಎಷ್ಟೊಂದು ಅರ್ಥವಿದೆ !

ವಾಸುದೇವ ನಾಡಿಗ್
ಜವಹರ್ ನವೋದಯ ವಿದ್ಯಾಲಯ, ಏನಿಗದೆಲೆ
ಚಿಂತಾಮಣಿ ತಾಲ್ಲೂಕು, ಕೋಲಾರ ಜಿಲ್ಲೆ

# ಬಳಿದೊತ್ತು

## (ಆನುವಂಶಿಕ ದಾಸತ್ವ)

**ಕಾ**ಲ ಮತ್ತು ಪ್ರದೇಶದ ಪ್ರಭಾವಗಳಿಂದ ಹೊರತಿರಲಾರದ ಲೇಖಕರು ಇತಿಹಾಸವೂ ಕೂಡ ಒಮ್ಮೊಮ್ಮೆ ಹೊರಹಾಕದ ಅನೇಕ ಸಂಗತಿಗಳನ್ನು ತಮಗರಿವಿದ್ದೋ, ಇಲ್ಲದೆಯೋ ಬಯಲಿಗಿಡುತ್ತಾರೆ. ಹರಿಹರನಂಥ ಹೆಚ್ಚು ಸಂವೇದನಾಶೀಲನಾದ ಪ್ರತಿಭಾಶಾಲಿಯಾದ ಜನಪರನಾದ ಪ್ರಮುಖ ಕವಿ ಕಾಲದೇಶ ಸ್ಥಿತಿಗೆ ಸ್ಪಂದಿಸುವ ಮೂಲಕ ಆರ್ಥಿಕ-ಸಾಮಾಜಿಕ ಮತ್ತು ಚಾರಿತ್ರಿಕ ಅರಿವಿಗೆ ಕಾರಣನಾಗುತ್ತಾನೆ.

ಆಧುನಿಕ ಪೂರ್ವ ಕನ್ನಡ ಪರಂಪರೆಯಲ್ಲಿ ಪಂಪ, ಕುಮಾರವ್ಯಾಸ, ರತ್ನಾಕರವರ್ಣಿಗಳ ಜತೆ ಹರಿಹರನನ್ನು ಪ್ರಥಮ ದರ್ಜೆಯ ಕವಿಯೆಂದು ಸೇರಿಸಲಾಗುತ್ತದೆ. ಆ ಮೂವರು ಮಹಾಭಾರತದ ಅರಸರ ಇಲ್ಲವೆ ಚಕ್ರವರ್ತಿಗಳ ಕತೆಯ ಸಾಂಪ್ರದಾಯಿಕ ಜಾಡು ಹಿಡಿದರೆ ಹರಿಹರ ಭಕ್ತಿ ಚಳುವಳಿಯ ಕಾರಣದಿಂದಾಗಿ ಜನಸಾಮಾನ್ಯರನ್ನು ಸಾಹಿತ್ಯ ರಂಗಕ್ಕೆ ಪರಿಚಯಿಸಿದ. ಈ ದೃಷ್ಟಿಯಿಂದ ಒಂದು ಸೀಮಿತ ಅರ್ಥದಲ್ಲಿ ಹರಿಹರ ಜನಪರ ಲೇಖಕ. ಅವನು ನಂಬಿದ ಶಿವನು ಕೂಡ ದಲಿತರ, ಶೋಷಿತರ ಪರ. ಪ್ರಾಮಾಣಿಕತೆ, ನಿಷ್ಠೆ, ತ್ಯಾಗದ ಪರವಾಗಿದ್ದು, ಇವೆಲ್ಲ ಸಾಮಾನ್ಯವಾಗಿ ದುಡಿಯುವ ಜನಕುಲಗಳಲ್ಲಿ ಕಾಣುವ ನೈತಿಕ ಮೌಲ್ಯಗಳಾದ್ದರಿಂದ ಹರಿಹರ ಹೆಚ್ಚು ಜನಪರವಾಗಲು ಸಾಧ್ಯವಾಯಿತು. ಸಾಮಾನ್ಯ ಶಿವಭಕ್ತರ ಜೊತೆ ಮುಖಾಮುಖಿಯಾಗುವ ಸಂದರ್ಭದಲ್ಲಿ ಮಾತ್ರ ರಾಜರು, ಪ್ರಭುಗಳು ಮೊದಲಾದ ಶೋಷಕ ವರ್ಗ ಅಥವಾ ಬ್ರಾಹ್ಮಣ ಮೊದಲಾದ ಶೋಷಕ ವರ್ಣಗಳನ್ನು ಚಿತ್ರಿಸುವ ಸ್ಥಿತಿಯಿತ್ತು.

ದುಡಿಯುವ ಮತ್ತು ದುಡಿಸಿಕೊಳ್ಳುವ ವರ್ಗಗಳ ನಡುವಿನ ಉತ್ಪಾದನಾ ಸಂಬಂಧವೇ ಸಮಾಜವನ್ನು ಸಮಗ್ರವಾಗಿ ತಿಳಿಯುವ ಏಕೈಕ ಸಂದರ್ಭವಾಗಿರುವುದರಿಂದ, ಈ ಪ್ರಮುಖ ವೈರುಧ್ಯದ ಚಿತ್ರಣ ಯಾವ ಕೃತಿಯಲ್ಲಿ ದೊರಕುತ್ತದೆಯೋ ಆ ಕೃತಿ ಚಾರಿತ್ರಿಕವಾಗಿ ಅತ್ಯಂತ ಮಹತ್ವದ್ದೆಂದು ಭಾವಿಸಬೇಕಾಗುತ್ತದೆ. ಈ ದೃಷ್ಟಿಯಿಂದಲೂ ಇಡೀ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹರಿಹರ ಪ್ರಮುಖನಾಗುತ್ತಾನೆ. ಕರ್ನಾಟಕದ ಏಕೈಕ ಸಮಾಜಿಕ-ಧಾರ್ಮಿಕ ಚಳುವಳಿಯಾದ ೧೨ನೇ ಶತಮಾನದ ಶರಣರ ಪರಂಪರೆಯಲ್ಲಿ ಕಲಾವಿದ ಶ್ರೇಷ್ಠನಾಗಿ ಮೂಡಿಬಂದವ ಹರಿಹರ. ಕವಿಯಾಗಿ ಹರಿಹರ ಸಾಕಷ್ಟು ವಿಮರ್ಶೆಗೆ ಒಳಗಾಗಿದ್ದಾನೆ. ಆದರೆ ಪ್ರತ್ಯಕ್ಷ ವಾಗಿಯೋ, ಪರೋಕ್ಷವಾಗಿಯೋ ಕೃತಿಗಳು ಒದಗಿಸುವ ಸಾಮಾಜಿಕ, ಆರ್ಥಿಕ ಸಂಗತಿಗಳತ್ತ ಗಮನಹರಿಸುವುದು ಒಬ್ಬ ಕವಿಯ ಸಮಗ್ರ ಅಧ್ಯಯನಕ್ಕೆ ಅಗತ್ಯವೆಂದೇ ಭಾವಿಸುತ್ತೇನೆ. ಆ ಕವಿಯ ಬರಹಗಳು ಅಂತಿಮವಾಗಿ ಒಂದು ಸಮಾಜದ ಸಾಂಸ್ಕೃತಿಕ ಪ್ರಗತಿಗೆ ಸಂಬಂಧಪಟ್ಟಿರುತ್ತವೆ. 'ಸಾಂಸ್ಕೃತಿಕ ಪ್ರಗತಿ' ಸಾಮಾಜಿಕಾರ್ಥಿಕ ಸಂಗತಿಗಳನ್ನು ಬಿಟ್ಟಿರಲಾರದು.

ಈ ತಾತ್ವಿಕ ಹಿನ್ನೆಲೆಯಲ್ಲಿ ಹರಿಹರನ ಉತ್ಕೃಷ್ಟ ಬರಹಗಳಲ್ಲಿ ಒಂದಾದ 'ನಂಬಿಯಣ್ಣನ ರಗಳೆ'ಯಲ್ಲಿರುವ ಬಳಿದೊತ್ತಿನ ವಿಷಯವನ್ನು ಚರ್ಚಿಸುವುದು ಈ ಲೇಖನದ ಉದ್ದೇಶ. ಹಾಗೆ ನೋಡಿದರೆ ಇಡೀ ರಗಳೆಯ ಕಥೆ ಬಳಿದೊತ್ತಿನ ಕೇಂದ್ರದ ಸುತ್ತ ತಿರುಗುತ್ತಿರುವಂತೆ ತೋರುತ್ತದೆ. ನರಸಿಂಗ ಮೊನೆಯೆಂಬ ಅರಸ ಸಾಕಿದ ನಂಬಿಯಣ್ಣ ಶ್ರೀಮಂತ ಶೈವ ಬ್ರಾಹ್ಮಣನೊಬ್ಬನ ಬಳಿದೊತ್ತಾಗಿದ್ದರಿಂದ ಉಂಟಾದ ಸಾಮಾಜಿಕ, ಆರ್ಥಿಕ ಅಲ್ಲೋಲಕಲ್ಲೋಲವನ್ನು ರಗಳೆ ಸೂಕ್ಷ್ಮವಾಗಿ ಚಿತ್ರಿಸುತ್ತದೆ. ನಂಬಿಯಣ್ಣ ಬಡವರಾದ ಶೈವ ಬ್ರಾಹ್ಮಣರ ಮಗ. ಹಾಗಾಗಿ ಬಡ ಬ್ರಾಹ್ಮಣರು ಶ್ರೀಮಂತ ಬ್ರಾಹ್ಮಣರಿಗೆ ಸೇವಕರಾಗಿ ತಮ್ಮನ್ನು ಮಾರಿಕೊಳ್ಳುತ್ತಿದ್ದರೇ ಎಂಬ ಪ್ರಶ್ನೆ ಇದೆ. ಇದು ಅಪರೂಪದ ಅಥವಾ ಅಪವಾದಾತ್ಮಕವಾದ ಪ್ರಸಂಗ ಎಂದು ಭಾವಿಸಿಕೊಂಡರೂ ಒಟ್ಟಾರೆ ಊಳಿಗಮಾನ್ಯ ಕಾಲದುದ್ದಕ್ಕೂ ಉತ್ಪಾದನಾ ಸಂಬಂಧದಲ್ಲಿ ಮಹತ್ವದ್ದಾದ ಬಳಿದೊತ್ತಿನ ಸಮಸ್ಯೆಯನ್ನು ಬಿಚ್ಚಿಡುತ್ತದೆ. ಬಳಿದೊತ್ತು ಎಂಬುದಕ್ಕೆ 'ಆನುವಂಶಿಕವಾಗಿ ಬಂದ ಸೇವಕ' ಎಂಬ ಸ್ಥೂಲಾರ್ಥವನ್ನು ನೀಡಲಾಗುತ್ತದೆ.

ಶರಣರ ವಚನಗಳಲ್ಲಿ ಆಳು, ಆಳ್ದ, ತೊತ್ತು, ಗಂಡುದೊತ್ತು, ಬಳಿದೊತ್ತು, ದಾಸ, ಶರಣ ಮೊದಲಾದ ಫ್ಯೂಡಲ್ ಸಂಬಂಧಗಳನ್ನು ಸೂಚಿಸುವ ಪದಗಳು ಪ್ರಸ್ತಾಪವಾಗುತ್ತವೆ. ಆದರೆ ಅವುಗಳ ವಿವರಗಳು ಅಲ್ಲಿ ಸಿಗಲಾರವು. ನಂಬಿಯಣ್ಣನ ರಗಳೆಯಲ್ಲಾದರೆ, ಬಳಿದೊತ್ತಿನ ವಿಷಯ ಸಾಕಷ್ಟು ವಿಸ್ತಾರವಾಗಿಯೇ ಇದೆ. ಕತೆಯ ಜತೆ ಅದು ಹೆಣೆದುಕೊಂಡಿರುವ ರೀತಿಯೂ ಗಮನಾರ್ಹವಾಗಿದೆ.

ತಿರುನಾವಲೂರು, ನರಸಿಂಗಮೊನೆ ಎಂಬರಸನ ಪಟ್ಟಣ. ಶೈವ ಬ್ರಾಹ್ಮಣರಾದ ಜಡೆಯ ನಾಯನಾರ ಮತ್ತು ಯಸ್ಯಜ್ಞಾನದೇವಿಯರ ಮಗ ನಂಬಿಯಣ್ಣ. ಈತನ ನಿಜನಾಮ ಸುಂದರ ಮೂರ್ತಿ. ಸಮುದ್ರ ಮಂಥನದ ಸಂದರ್ಭದಲ್ಲಿ ಹುಟ್ಟಿಬಂದ ವಿಷವನ್ನು ಶಿವ ಅಂಗೈಯಲ್ಲಿಟ್ಟುಕೊಂಡಾಗ ಅದರಲ್ಲಿ ಕಂಡ ಪ್ರತಿಚ್ಛಾಯೆ ಪುಷ್ಪದತ್ತನಾಗಿ ಇವನು ಹುಟ್ಟಿದ. ಪುಷ್ಪದತ್ತ ಕೈಲಾಸದಲ್ಲಿ ಹೂ ಕೊಯ್ಯುವಾಗ ಪಾರ್ವತಿಯ ಚೇಟಿಯರಾದ ಅನಂದಿತೆ, ಕಮಲಿನಿಯರನ್ನು ಕಂಡು ಮೋಹಗೊಳ್ಳುತ್ತಾನೆ. ಶಿವನ ಶಾಪದಿಂದ ಇವರೆಲ್ಲ ಭೂಮಿಯಲ್ಲಿ ಅವತರಿಸುತ್ತಾರೆ. ಈ ಸಂದರ್ಭದಲ್ಲಿ ''ಭೂಮಿಯಲ್ಲಿ ಲೋಭ ಮೋಹಗಳ ಊಳಿಗವಿದೆ, ಹೇಗೆ ಹೋಗಲಿ'' ಎಂದು ಕೇಳುತ್ತಾನೆ ಪುಷ್ಪದತ್ತ.

ನಂಬಿ ಹುಟ್ಟಿ ಬೆಳೆಯುವಾಗ ''ಶಿವನೇ ನೀನು ಎಂದು ಬಂದು ನನ್ನನ್ನು ತೊತ್ತುಗೊಂಬೆ'' ಎಂದೆನ್ನುತ್ತ ಅಳುತ್ತಿದ್ದನಂತೆ. ಒಂದು ದಿನ ಬೆವಹಾರಿಗಳ ಮನ್ನಣೆಯ ಮಕ್ಕಳೆಲ್ಲ ಮರದ ಬಂಡಿ ಮಾಡಿ ನಂಬಿಯಣ್ಣನನ್ನು ಅದರಲ್ಲಿ ಕೂರಿಸಿ, ''ನೀನು ಅರಸು, ನಾವೆಲ್ಲ ಪರಿವಾರದವರು'' ಎಂದು ಆಟ ಆಡುತ್ತಿದ್ದರು. ಅರಸನ ಪಟ್ಟದಾನೆ ಸೊಕ್ಕೇರಿ ಓಡಿಬಂದು ನಂಬಿಯನ್ನು ಕಂಡು ಬಾಗಿ ನಮಸ್ಕರಿಸುತ್ತದೆ. ಇದನ್ನು ಕೇಳಿದ ಅರಸ ಕಾಲ್ನಡೆಯಲ್ಲಿ ಬಂದು ಮಗುವಿನ ಸೌಂದರ್ಯ ಮತ್ತು ಕಾರಣಿಕತನಕ್ಕೆ ಮೋಹಗೊಂಡು ತನಗೆ ಮಕ್ಕಳಿಲ್ಲದ್ದರಿಂದ ನಂಬಿಯ ತಂದೆ ತಾಯಿಯರಲ್ಲಿ ಆತನನ್ನು ಬೇಡುತ್ತಾನೆ. ''ನೀವು ಹಾಕುವ ಕೀರೆಗೆ, ಬರಗಿನ ಒಗರಕ್ಕೆ ಹುಟ್ಟಿದವನಲ್ಲ, ದಿವ್ಯಾನ್ನ ದಿವ್ಯಫಲ, ದಿವ್ಯಾಮೃತರಸ

■ ಎಸ್. ಎಸ್. ಹಿರೇಮಠ



ಗಳನ್ನು ನೀಡಿ ಸಲಹುವೆ. ನಿಮ್ಮ ಬಡತನ ತೀರುತ್ತದೆ, ನನ್ನ ಆಶೆಯೂ ಪೂರೈಸುತ್ತದೆ'' ಎನ್ನುತ್ತಾನೆ. ಅವರು ಮಗುವನ್ನು ಅವನಿಗೆ ನೀಡುತ್ತಾರೆ. ಅರಸ ಅವನಿಗೆ 'ಸೌಂದರ ಪೆರುಮಾಳಿ' ಎಂಬ ಹೆಸರಿಡುತ್ತಾನೆ. ಸಕಲ ವಿದ್ಯೆಗಳನ್ನು ಕಲಿಸುತ್ತಾನೆ. ೧೬ ವರ್ಷದವನಾದಾಗ ಅರ್ಧ ರಾಜ್ಯವನ್ನೇ ಕೊಡುತ್ತಾನೆ.

ಸಾಮಾನ್ಯ ಗ್ರಾಮವೊಂದರ ರಾಜರು ಬ್ರಾಹ್ಮಣರಿಗೆ ದಾನ ಕೊಟ್ಟದ್ದು ಆ ಗ್ರಾಮದ (ಶೂದ್ರ ಗ್ರಾಮವಾಗಿರುತ್ತಿದ್ದುದರಿಂದ) ಹೆಸರನ್ನೆ ಬದಲಿಸಿ ಬ್ರಾಹ್ಮಣ್ಯಕ್ಕೆ ಹೊಂದುವ ಹೆಸರಿಡುತ್ತಿದ್ದರು. ಕನ್ನಡ ಶಾಸನಗಳಲ್ಲಿ ಇಂಥ ಸಾವಿರಾರು ಉದಾಹರಣೆಗಳಿವೆ. ಈ ಕ್ರಮದಂತೆ ನಂಬಿ ಎಂಬ ಸಾಮಾನ್ಯ ಹೆಸರನ್ನು ತೆಗೆದುಹಾಕಿ ಅರಸ 'ಸುಂದರ ಪೆರುಮಾಳಿ' ಎಂಬ ಹೆಸರಿಡುತ್ತಾನೆ. ರಗಳೆಯಲ್ಲಿ ಕೆಲವು ಕಡೆ ಇವನು ಸುಂದರ ಪೆರುಮಾಳೆಯಲ್ಲ ನಂಬಿ ಎಂದು ವೇಷಧಾರಿ ಶಿವ ಹೇಳುವುದನ್ನು ಕೇಳುತ್ತೇವೆ. ಹೆಸರೂ ಕೂಡ ತಾರತಮ್ಯವನ್ನು ಶ್ರೇಣೀಕರಣವನ್ನು ಸೂಚಿಸುತ್ತದೆ.

ನಂಬಿಯ ಆಸ್ಥಾನದಲ್ಲಿರುವ ಶೋಷಕ ವರ್ಗ ಮತ್ತು ಪರಿವಾರದ ಹೆಸರುಗಳು ಸ್ವಾರಸ್ಯಕರವಾಗಿವೆ – ಕವಿ, ಗಮಕಿ, ವಾದಿ, ವಾಗ್ಮಿ, ತಂತ್ರಿ, ಮಂತ್ರಿ, ನಾಯಕ, ಗಾಯಕ, ನರ್ತಕ, ವರ್ತಕ, ನಾಟಕರು, ಪಾಠಕರು, ಭೂಮಿಪರು, ಸಾಮಂತರು, ರಾಜಪುತ್ರರು, ಮಕುಟವರ್ಧನರು, ಮಾವಂತರು, ರಾಯರಾವುತರು, ಅತಿರಥ ಮಹಾರಥ, ಅರ್ಧರಥ, ಸಮರಥ, ಫಳಕಕಾರ, ಅರೆಕಾರ, ಸುರಿಗೆಕಾರ, ವೀರಜೋಧ, ನಿಯೋಗದವರು, ವಿಳಾಸಿನಿಯರು. ಈ ಬಗೆಯ ಪರಿವಾರ ಪ್ರಭುವಿನ ಪ್ರತಿಷ್ಠೆಯನ್ನು, ಸಂಪತ್ತು, ಐಶ್ವರ್ಯವನ್ನು ಸೂಚಿಸುತ್ತಿತ್ತು.

ಮಂತ್ರಿ ತುಂಬುರ, ನಂಬಿಯಣ್ಣ ಮನುಷ್ಯನಲ್ಲ, ಯಾವುದೋ ಕಾರಣದಿಂದ ಭೂಮಿಗೆ ಬಂದ ಗಣೇಶ್ವರನಿರಬೇಕೆಂದು ತರ್ಕಿಸುತ್ತಾನೆ. ಮಣಮಂದ ಪುತ್ತೂರಿನ ಸುಂದರಿಯೋರ್ವಳನ್ನು ನಂಬಿಗೆ ಮದುವೆ ಮಾಡಿಸಲು ತೊಡಗುತ್ತಾನೆ. ಇಲ್ಲಿಯ ಎಲ್ಲ ವಿವರಗಳು ಊಳಿಗ ದೊರೆಗಳ ವೈಭವದ ಆಡಂಬರದ ವಾಸ್ತವ ವರ್ಣನೆಗಳೇ. ಮಣಮಂದ ಪುತ್ತೂರ ಹೊರವಲಯದ ಬನದಲ್ಲಿ ನಿಬ್ಬಣ ಬೀಡುಬಿಟ್ಟಿದೆ. ನಂಬಿ ವಿವಾಹಾತುರನಾಗಿದ್ದಾನೆ. ಇತ್ತ ಶಿವ ವೃದ್ಧ ಬ್ರಾಹ್ಮಣ ವೇಷದಿಂದ ಮದುವೆಯ ಚಪ್ಪರವನ್ನು ಹೊಕ್ಕು ಅಮಂಗಲ ಮಾಡತೊಡಗುತ್ತಾನೆ. ಕೈಲಾಸದಲ್ಲಿ ಶಿವ ಪಾರ್ವತಿಗೆ ''ನಮ್ಮ ಮಗ ಪುಷ್ಪದತ್ತ, ನಂಬಿ ಎಂಬ ಹೆಸರಿನಿಂದ ಸಂಸಾರದಿಂದಾಗಿ ಕೆಟ್ಟು ಹೋಗಲನುವಾಗಿರುವನು. ಭೂಲೋಕದಲ್ಲಿ ತೊತ್ತುಗೊಂಡು ನಾವು ಕಳಿಸಿದ ರುದ್ರಕನ್ನಿಕೆಯರ ಜತೆ ಸೇರಿಸುವೆ'' ಎಂದು ಹೇಳಿ ಬಂದಿರುತ್ತಾನೆ.

ಮದುವೆ ಮಂಟಪದಲ್ಲಿ ನೆರೆದ ಮಾನ್ಯರು, ಹಿರಿಯರು ಈ ವೃದ್ಧನನ್ನು ತಡೆದು ಕೇಳುತ್ತಾರೆ. ''ನನ್ನ ತೊತ್ತಿನ ಮಗನನ್ನು ಸತ್ಕುಲಜನೆಂದು ತಿಳಿದು ಹೆಣ್ಣು ಕೊಟ್ಟು ನಿಮ್ಮ ಕುಲವನ್ನು ಕೆಡಿಸಿಕೊಳ್ಳಬೇಡಿ. ನಾನಾದರೆ ಮದುವೆ ಮಾಡಿಗೊಡಲಾರೆ. ಈತ ನರಸಿಂಗ ಮೊನೆಯರ ಮಗನಲ್ಲ. ಅವರು ಸಾಕಿದ ಮಗ. ಶಿವಬ್ರಾಹ್ಮಣ ಸೌಂದರ ಪೆರುಮಾಳೆಯಲ್ಲ, ಈತ ನಂಬಿಯಣ್ಣನೆಂಬ ಹೆಸರಿನವ. ನನ್ನ ತೊತ್ತಿನ ಮಗನೆಂಬುದಕ್ಕೆ ಪ್ರಮಾಣ ಪತ್ರವಿದೆ''

ತಾತ್ವಿಕ ಹಿನ್ನೆಲೆಯಲ್ಲಿ ಹರಿಹರನ ಉತ್ಕೃಷ್ಟ ಬರಹಗಳಲ್ಲಿ ಒಂದಾದ 'ನಂಬಿಯಣ್ಣನ ರಗಳೆ'ಯಲ್ಲಿರುವ ಬಳಿದೊತ್ತಿನ ವಿಷಯವನ್ನು ಚರ್ಚಿಸುವುದು ಈ ಲೇಖನದ ಉದ್ದೇಶ. ಹಾಗೆ ನೋಡಿದರೆ ಇಡೀ ರಗಳೆಯ ಕಥೆ ಬಳಿದೊತ್ತಿನ ಕೇಂದ್ರದ ಸುತ್ತ ತಿರುಗುತ್ತಿರುವಂತೆ ತೋರುತ್ತದೆ. ನರಸಿಂಗಮೊನೆಯೆಂಬ ಅರಸು ಸಾಕಿದ ನಂಬಿಯಣ್ಣ ಶ್ರೀಮಂತ ಶೈವ ಬ್ರಾಹ್ಮಣನೊಬ್ಬನ ಬಳಿದೊತ್ತಾಗಿದ್ದರಿಂದ ಉಂಟಾದ ಸಾಮಾಜಿಕ, ಆರ್ಥಿಕ ಅಲ್ಲೋಲಕಲ್ಲೋಲವನ್ನು ರಗಳೆ ಸೂಕ್ಷ್ಮವಾಗಿ ಚಿತ್ರಿಸುತ್ತದೆ. ನಂಬಿಯಣ್ಣ ಬಡವರಾದ ಶೈವ ಬ್ರಾಹ್ಮಣರ ಮಗ. ಹಾಗಾಗಿ ಬಡ ಬ್ರಾಹ್ಮಣರು ಶ್ರೀಮಂತ ಬ್ರಾಹ್ಮಣರಿಗೆ ಸೇವಕರಾಗಿ ತಮ್ಮನ್ನು ಮಾರಿಕೊಳ್ಳುತ್ತಿದ್ದರೇ ಎಂಬ ಪ್ರಶ್ನೆ ಇದೆ. ಇದು ಅಪರೂಪದ ಅಥವಾ ಅಪವಾದಾತ್ಮಕವಾದ ಪ್ರಸಂಗ ಎಂದು ಭಾವಿಸಿಕೊಂಡರೂ ಒಟ್ಟಾರೆ ಊಳಿಗಮಾನ್ಯಕಾಲದುದ್ದಕ್ಕೂ ಉತ್ಪಾದನಾ ಸಂಬಂಧದಲ್ಲಿ ಮಹತ್ವದ್ದಾದ ಬಳಿದೊತ್ತಿನ ಸಮಸ್ಯೆಯನ್ನು ಬಿಚ್ಚಿಡುತ್ತದೆ. ಬಳಿದೊತ್ತು ಎಂಬುದಕ್ಕೆ 'ಆನುವಂಶಿಕವಾಗಿ ಬಂದ ಸೇವಕ' ಎಂಬ ಸ್ಥೂಲಾರ್ಥವನ್ನು ನೀಡಲಾಗುತ್ತದೆ.

ಎನ್ನುತ್ತಾನೆ. ಮದುಮಗಳ ತಂದೆ ತಾಯಿಗಳು ''ಈ ಮದುವೆ ಹೀಗಿರಲಿ, ಈ ಬ್ರಾಹ್ಮಣನ ಬ್ರಹ್ಮಹತ್ಯಾ ದೋಷ ತಪ್ಪಿತು, ಇಷ್ಟೇ ಸಾಕು'' ಎಂದುಕೊಳ್ಳುತ್ತಾರೆ. ''ಪ್ರತ್ಯಕ್ಷ ಶಿವನಂತಿರುವ ನೀನೇ ಬಂದು ಕುಲವು ಹೊಲ್ಲದು ಎಂದಾಗ ನಾವೇಕೆ ಮದುವೆ ಮಾಡೇವು ? ನೀವು ಹುಡುಕುವ ನಂಬಿಯಣ್ಣ ಬನದಲ್ಲಿದ್ದಾನೆ ನೋಡಿ'' ಎಂದಾಗ ಸಾಧು ಬ್ರಾಹ್ಮಣನಂತೆ ವನಕ್ಕೆ ಬಂದು ನಂಬಿಯ ಮುಂದೆ ನಿಂತರೆ, ಆತ ''ಒಳ್ಳೇ ಸಮಯಕ್ಕೆ ಬಂದಿರಿ ಏನು ಬೇಕು ಬೇಡಿ'' ಎನ್ನುತ್ತಾನೆ. ಈತ ''ಎಲವೋ ನಾ ಬೇಡಿ ಬರುವವ ನೀ ಕೊಡುವವನೇ ? ಹೌದು ಹೌದು ಏಕೆ ತಪ್ಪೀತು ? ನಡೆ, ನಡೆ, ನಿನ್ನನ್ನೇ ಬೇಡಿ ಬಂದಿರುವೆ, ನೀನು ನನ್ನ ತೊತ್ತಿನ ಮಗ, ನಿನ್ನ ಹೆಸರು ಸೌಂದರ ಪೆರುಮಾಳಿ ಅಲ್ಲ, ನಂಬಿ. ಇಷ್ಟು ದಿನ ನಿನ್ನನ್ನು ಸಾಕಲಾಗದ್ದಕ್ಕೆ ಬರಲಿಲ್ಲ. ಈಗ ಹತ್ತೆಂಟು ಹರೆಯದ ಗಂಡುದೊತ್ತಾಗಿರುವೆ, ಏಳೇಳು, ಕೊಡೆ, ಕೋಲು, ಕಮಂಡಲು ಹಿಡಿ'' ಎನ್ನುತ್ತಾನೆ. ಸಭೆಯಲ್ಲಿರುವವರೆಲ್ಲ ಮುಟ್ಟಬಾರದು, ಮಾಹೇಶ್ವರನಾಗಿದ್ದಾನೆ ಎಂದು ಏನು ಮಾಡಲೂ ತೋಚದೇ ಸ್ತಬ್ಧರಾಗುತ್ತಾರೆ.

ನಂಬಿ ತಾನು ಅರಸನೆಂದು ಬೀಗುತ್ತಿರುವ, ಮದುಮಗನಾಗಿ ಬಂದು ನಿಂತ ಸಂದರ್ಭ, ಇಂಥ ಸಮಯದಲ್ಲೇ ಶಿವ ಅವನ ಪ್ರತಿಷ್ಠೆ ಗೌರವ, ಆತ್ಮಾಭಿಮಾನಕ್ಕೆ ಆಘಾತವನ್ನುಂಟುಮಾಡುತ್ತಾನೆ. ಅರಸುತನದ ಗೌರವ, ಪ್ರತಿಷ್ಠೆ ಹೆಮ್ಮೆ, ಅಭಿಮಾನ, ಸಂಪತ್ತು ಎಲ್ಲವನ್ನೂ ಕಳೆದುಕೊಂಡು ತೊತ್ತಾಗಿ ಮಾರ್ಪಡುವ ಪ್ರಸಂಗ ಅತ್ಯಂತ ಆಘಾತವನ್ನುಂಟುಮಾಡುತ್ತದೆ. ಹೀಗೆ ಅತೀ ಕಷ್ಟದ ಪ್ರಸಂಗಗಳನ್ನು ಶಿವನ ಪರೀಕ್ಷೆ ಎಂದು ಕಲ್ಪಿಸಲಾಗುತ್ತದೆ. ಇದು ಕಷ್ಟವನ್ನು ಸಹಿಸುವಂತೆ ಪ್ರೇರಿಸುತ್ತದೆ. ಏಕೆಂದರೆ ಇದೇ ಕೊನೆಯಲ್ಲ, ಅನಂತರವೂ ಬದುಕು ಇದೆ, ಬೇರೆಯದೇ ಆದ ಬದುಕು.

''ಈ ಪೆಚ್ಚ ಬ್ರಾಹ್ಮಣನನ್ನು, ಈ ಹೆಡ್ಡ ವೃದ್ಧನನ್ನು ಯಾರು ತಂದರು ? ನೂಕು ನೂಕು'' ಎನ್ನುತ್ತಾನೆ. ನಂಬಿ ಪ್ರತಿಹಾರಿಗಳು ವೃದ್ಧನನ್ನು ನೂಕಿ ತೋಪಿನ ಹೊರಗಿಕ್ಕುತ್ತಾರೆ. ಮುದುಕನ ಆರ್ಭಟ ಇನ್ನೂ ಹೆಚ್ಚುತ್ತದೆ. ದಿಣ್ಣೆಯನ್ನೇರಿ ಕಣಿಗಿಲೆ ಸೊಪ್ಪು ಹಿಡಿದು ಜೋರಾಗಿ, ''ಇವ ನರಸಿಂಗಮೊನೆಯರ ಮಗನಲ್ಲ, ಕೊಂಡು ಸಾಕಿದವ, ಇವನ ಹೆಸರು ನಂಬಿ. ಈತನ ತಂದೆ ತಾಯಿಗಳು ಶಿವಬ್ರಾಹ್ಮಣರಾದ ಜಡೆಯನಾಯನಾರ, ಯಶ್ಯಜ್ಞಾನ ದೇವಿ. ಅವರು ನನಗೆ ಕುಲವಳಿಯ ಬಳಿದೊತ್ತಿರು. ಹಾಗಾಗಿ ನಂಬಿಯನ್ನು ನನಗೆ ತೊತ್ತಿನ ಮಗನಾಗಿ ಕೊಟ್ಟರು. ಇದಕ್ಕೆ ಪ್ರಮಾಣಪತ್ರ, ಸಾಕ್ಷಿ ಎಲ್ಲ ಇವೆ. ಈ ದೊಡ್ಡಿಯಾಳು ಕುದುರೆಯನ್ನು ತೋರಿಸಿ, ಮೀರಿ ಕಾಡಿದರೆ ನಾನು ಸತ್ತ ಸಾವು, ಕೆಟ್ಟ ಕೇಡು ನಂಬಿಯನ್ನು ನರಸಿಂಗಮೊನೆಯರನ್ನು ತಾಕುತ್ತದೆ. ಇದನ್ನು ಚೋಳ ದೇಶದ ಮಹಾಗಣಗಳು ತಿಳಿದಿರಬೇಕು'' ಎಂದು ಕೈ ಎತ್ತಿ ಶಿವದಿಡುತ್ತಾನೆ. ಅತ್ತ ಮಣಮಂದ ಪುತ್ತೂರಿಂದ ಒಬ್ಬ ಬಂದು ಮದುವೆ ಆಗದು ಎಂದು ಹೇಳಿ ಹೋಗುತ್ತಾನೆ.

ಮಂತ್ರಿ ತುಂಬುರ ನಂಬಿಗೆ ''ದೇವಾ ಈ ಬ್ರಾಹ್ಮಣ ಅಲ್ಲಿ ಹಾಗೆ ಮಾಡಿದ. ಇಲ್ಲಿ ಪತ್ರ ಪ್ರಮಾಣ ಇದೆ ಎಂದು ಶಿವದಿಡುತ್ತಾನೆ. ಆತನನ್ನು ಕರೆಸಿ ಕೇಳಿವ. ಮೊದಲು ಈ ಕೆಲಸ ತೀರಿಸಬೇಕು. ಹಾಗಲ್ಲದೆ ಇಲ್ಲಿ ಮಾಹೇಶ್ವರ ಸಮಯ

(ಪಂಥ) ಅತೀ ಪ್ರಬಲವಿದೆ. ಆತ ಚೋಳಾದಿಗಳಿಗೂ ಉಬ್ಬಸ, ಇಂದ್ರಾದಿಗಳಿಗೂ ಕೂಡ ಮೀರಲಾರರು. ಆ ಕಾರಣ ಉದಾಸೀನ ಬೇಡ. ಇದನ್ನು ಮೀರಿದರೆ ನರಸಿಂಗ ಮೊನೆಯರೂ ಸಿಟ್ಟಾಗುವರು'' ಎಂದು ಆ ಮುದುಕನನ್ನು ಕರೆಸಿ ಪ್ರಮಾಣಪತ್ರವನ್ನು ಗಣಕನಿಂದ ಓದಿಸುತ್ತಾನೆ.

''ಮೊದಲ ಈಶ್ವರ ಸಂವತ್ಸರದ ಮಾಘ ಬಹುಳ ಚತುರ್ದಶಿ ಸೋಮವಾರದಂದು ಭಕ್ತಪುರದ ಸ್ಮಶಾನಶಯನ ಭಟ್ಟರಿಗೆ ಶಿವಬ್ರಾಹ್ಮಣರಾದ ಜಡೆಯ ನಾಯನಾರ, ಯಶ್ವಜ್ಞಾನದೇವಿಯರು ತಾವಿಬ್ಬರೂ ವಂಶಾವಳಿಯಾಗಿ ಬಂದ ಬಳಿದೊತ್ತಿರ ಮಕ್ಕಳಾದ ಕಾರಣದಿಂದ ತಮ್ಮ ಪುತ್ರ ನಂಬಿಯನ್ನು ಬಳಿದೊತ್ತಾಗಿ ಕೊಟ್ಟರು'' ಎಂದಿದ್ದು ಸಾಕ್ಷಿ, ಗಣಕರ ಸಹಿಗಳೂ ಇರುತ್ತವೆ. ಈ ಸುದ್ದಿಯನ್ನು ಅರಸನಿಗೆ ತಿಳಿಸುತ್ತಾನೆ ಮಂತ್ರಿ. ರಾಜ ನ್ಯಾಯವೇನಿದೆಯೋ ಅದನ್ನೇ ಮಾಡಿ ಎಂದು ಹೇಳಿಕಳಿಸುತ್ತಾನೆ.

ಎಲ್ಲರೂ ತಿರುವಣ್ಣೆನಲ್ಲೂರಿಗೆ ಬರುತ್ತಾರೆ. ಅಲ್ಲಿಯ ಮಹಾಜನರು ಅರಸನನ್ನು ಕಂಡು ಕಾಣಿಕೆ ನೀಡಿದರೆ, ನಂಬಿ ಸಿಟ್ಟಿನಿಂದ ಎಲ್ಲರನ್ನೂ ಕರೆಸುತ್ತಾನೆ. ''ನಿಮ್ಮೂರ ವೃದ್ಧ ಬ್ರಾಹ್ಮಣ ತನಗೆ, ನಾನು ಆಳು ಎಂದು ಪತ್ರ ತೋರಿಸುತ್ತಿದ್ದಾನೆ ಎಂದು ಕೇಳಿದರೆ, ಆ ವೃದ್ಧ ಬ್ರಾಹ್ಮಣ ಅಲ್ಲಿರುವ ಬ್ರಾಹ್ಮಣರೆಲ್ಲರ ಹೆಸರಿಡಿದು ಮಾತನಾಡಿಸುತ್ತ ಬರುತ್ತಾನೆ. ಆದರೆ ಅವರಿಗೆಲ್ಲ ಆತ ಅಪರಿಚಿತ. 'ನಿಮ್ಮ ಹೆಸರು ವೃತ್ತಿ ಹೇಳಿ' ಎಂದು ಕೇಳಿದರೆ, 'ನನ್ನ ಹೆಸರು ಮೊದಲು ವಿಶ್ವೇಶ್ವರ ಪ್ರಭುಗಳು.' ನಮ್ಮವರೆಲ್ಲ ಈ ಊರಲ್ಲಿ ಹುಟ್ಟಿದ ಪ್ರಭುಗಳು. ನನಗೆ ೧೬ ವರ್ಷವಿರುವಾಗಲೇ ಕಾಶಿಗೆ ಮೈದುನ ವಿಷ್ಣುಭಟ್ಟನ ಜತೆ ಹೋಗಿ ಹಲವು ವರ್ಷ ಇದ್ದು ತಿರುಗಿ ಬರುವಾಗ ಒಂದೂರ ಸ್ಮಶಾನದಲ್ಲಿ ಇರಬೇಕಾಗಿಬಂದಿತು. ಮೈದುನ ತಮಾಷೆಗೆ ಸ್ಮಶಾನ ಶಯನರೆಂದು ಕರೆದ. ನನಗೆ ಅದೇ ಹೆಸರು ಉಳಿಯಿತು. ಈ ಊರಲ್ಲಿ ನಮ್ಮ ವೃತ್ತಿಸ್ಥಲ ಹೊರಗೆ ಇದೆ. ಅದನ್ನು ದೇವಾದಾಯಕ್ಕೆ ಕೊಟ್ಟರೋ ತಿಳಿಯೆವು'' ಎಂದು ಕುಲಸ್ಥಲ ತೋರಿಸುತ್ತಾನೆ. ಪತ್ರ ಓದಿಸುತ್ತಾರೆ, ಸಹಿ ನೋಡುತ್ತಾರೆ. ನಂಬಿ ''ನಿನ್ನ ಶಕ್ತಿಯೇ ನನ್ನನ್ನು ಆಳು ಮಾಡಿಕೊಳ್ಳುವುದು'' ಎಂದು ಕೋಪದಿಂದ ಪತ್ರ ಹರಿದುಹಾಕುತ್ತಾನೆ. ಇದು ಪಡಿಪತ್ರ ಮೂಲಪತ್ರ ಶಿವಾಲಯದಲ್ಲಿದೆ ಎಂದು ಬ್ರಾಹ್ಮಣ ತೋರಿಸಲೆಂದು ಕರೆಹು ಕಳೆಯದೇ ಹೋಗಿ ಲಿಂಗದಲ್ಲಿ ಐಕ್ಯನಾಗುತ್ತಾನೆ.

ಮೆಲ್ಲಮೆಲ್ಲನೆ ನಂಬಿಗೆ ಪೂರ್ವವಾಸನೆ ತಿಳಿದು ಇದೆಲ್ಲ ಕನಸೆಂದು ಭಾವಿಸಿ ಶಿವನ ಪಾದದಲ್ಲಿ ಬೀಳುತ್ತ ''ನಂಬಿದ ಸೇವಕನನ್ನು ಹೀಗೆ ಕಾಡುತ್ತಾರೆಯೇ?'' ಎಂದು ಅಳುತ್ತ ಹಾಡತೊಡಗುತ್ತಾನೆ. ''ನೀನೇ ಆಳು ಮಾಡಿಕೊಳ್ಳಲು, ತೊತ್ತು ಮಾಡಿಕೊಳ್ಳಲು ಅಲ್ಲ ಎನ್ನಲಾದೀತೇ? ನೀನೇ ಬಂದು ಆಳು, ನೀನು ಎಂದರೆ ಧರ್ಮ ಉಂಟೇ? ಸಾಕ್ಷಿ ಉಂಟೇ? ನಾನು ನಿನ್ನ ತೊತ್ತು'' ಎಂದು ಗೋಗರೆಯುತ್ತಾನೆ. ''ದೇವಾಲಯಗಳಿರುವಲ್ಲಿ ಇರು, ನಿತ್ಯವೂ ಸಾವಿರ ಹೊನ್ನ ಕೊಡುವೆವು'' ಎಂದು ಸಂದಿಯುಂಡಿಗೆಯ ಬಂಗಾರ ನಾಣ್ಯ ಕೊಟ್ಟು ಶಿವ ಮಾಯವಾಗುತ್ತಾನೆ.

ಇಷ್ಟು ದೀರ್ಘವಾಗಿ ಈ ಕತೆಯನ್ನು ಸಂಗ್ರಹಿಸಿರುವುದಕ್ಕೆ ಕಾರಣವಿದೆ. ಊಳಿಗಮಾನ್ಯ ಕಾಲದ ಆಳು ಆಳ್ವ ಸಂಬಂಧದಲ್ಲಿ ತೊತ್ತುತನದ ಸ್ಥಿತಿ ಹೇಗಿತ್ತು ಎಂಬುದಕ್ಕೆ ಈ


ಭಿಕ್ಷೆ

ಬೊಗಸೆ ಒಡ್ಡಿದರೆ
ಕುಡಿಯಲು ನೀರು
ಭಿಕ್ಷೆ ನೀಡೇವು
ಕಾವೇರಿಯ ಕೆಚ್ಚಲಿಗೆ
ಕೈ ಇಟ್ಟರೆ
ಕಪಾಳಕ್ಕೆ ಕೊಟ್ಟೇವು!

ಡಿ. ಎ. ಬಡಿಗೇರ
ವಿರೂಪಾಕ್ಷ ನಿಲಯ, ತುಗ್ಗಿನಪೇಟೆ, ಗದಗ,
ಬೆಟಗೇರಿ - ೫೮೨ ೧೦೨

ರಗಳೆ ಅದ್ಭುತವಾದ ವಿವರಗಳನ್ನು ನೀಡಿದೆ. ಈ ವಿವರಗಳಿಂದ ಈ ಕೆಳಗಿನಂತೆ ಕೆಲವು ನಿರ್ಣಯಗಳಿಗೆ ಬರಬಹುದು :

೧. ತೊತ್ತು, ತೊತ್ತಿನ ಮಕ್ಕಳು ಸತ್ಕುಲಜರಾಗಿರುತ್ತಿರಲಿಲ್ಲ. ಆಕಸ್ಮಾತ್ತಾಗಿ ಸತ್ಕುಲಜರು ತೊತ್ತುಗಳಾದರೆ ತಮ್ಮ 'ಸತ್'ಕುಲವನ್ನೇ ಕಳೆದುಕೊಳ್ಳುತ್ತಿದ್ದರು. ಅಂತೆಯೇ ನಂಬಿಯ ತಂದೆ ತಾಯಿಯರು ಶೈವಬ್ರಾಹ್ಮಣರಾಗಿದ್ದರೂ ಆರ್ಥಿಕ ದುಃಸ್ಥಿತಿಯಿಂದ ದಾಸರಾದ ನಂತರ ತಮ್ಮ ಸತ್ ಕುಲವನ್ನೇ ಕಳೆದುಕೊಂಡಿದ್ದಿರಬೇಕು. ಅಂದರೆ ದಾಸತ್ವವು ಬ್ರಾಹ್ಮಣತ್ವವನ್ನೇ ನಾಶಮಾಡಬಹುದಿತ್ತು. ಆದರೆ ಬ್ರಾಹ್ಮಣರು ಶ್ರೀಮಂತ ಬ್ರಾಹ್ಮಣರಿಗೆ ಮಾತ್ರ ದಾಸರಾಗಬಹುದಿತ್ತು. ಹಾಗೆ ದಾಸರಾಗುವ ಸಂದರ್ಭಗಳು ಅಪವಾದಾತ್ಮಕವಾಗಿರುತ್ತಿದ್ದವು. ಅಂಥ ಒಂದು ನಿದರ್ಶನ ನಂಬಿಯ ವಂಶಜರು. ಹರಿಹರನಿಗೆ ಮೂಲ ಆಕರವಾದ ತಮಿಳಿನ ಪೆರಿಯ ಪುರಾಣದಲ್ಲಿ ''ಬ್ರಾಹ್ಮಣನು ಮತ್ತೊಬ್ಬ ಬ್ರಾಹ್ಮಣನಿಗೆ ದಾಸನಾಗುವುದುಂಟೇ? ಈ ಮಾತು ಹೇಳಲು ನೀನು ಹುಚ್ಚನೋ?'' ಎಂದು ನಂಬಿಯಣ್ಣ ಕೇಳಿದಾಗ ''ಹುಚ್ಚ ನಾಗಲೀ, ಪಿಶಾಚಿಯಾಗಲೀ, ನೀನೇನೆಂದರೂ ನನಗೆ ನಂಬಿಕೆಯಿಲ್ಲ.. ಜಾಣತನ ಮಾತಾಡಬೇಡ. ಸೇವೆಗೆ ಸಿದ್ಧನಾಗು'' ಎನ್ನುತ್ತಾನೆ ವೃದ್ಧ.

೨. ಕುಲದ ಒಳಗಿನ ಮದುವೆ ಮಾತ್ರ ಕುಲದ ಗೌರವ, ಸ್ಥಾನಮಾನಗಳನ್ನು ಉಳಿಸುತ್ತದೆಂಬ ನಂಬಿಕೆಯಿತ್ತು. ದಾಸರದ್ದೇ ಒಂದು ಕುಲ ಇತ್ತೋ, ಇಲ್ಲವೋ ತಿಳಿಯದು. ಇದ್ದರೆ ಇದು ಅತ್ಯಂತ ಕೀಳು ಎಂದು ಭಾವಿಸಲ್ಪಡುತ್ತಿತ್ತು. ಬಹುಶಃ ಇಂದಿನ ಗ್ರಾಮಗಳಲ್ಲಿರುವ ಅಸ್ಪೃಶ್ಯತೆಯನ್ನು ಅದು ಹೋಲುತ್ತಿತ್ತು.

೩. ದಾಸ ಅಥವಾ ದಾಸನ ಮಗ ಆಕಸ್ಮಿಕವಾಗಿ ಮೇಲ್ವರ್ಗದ ಪ್ರತಿಷ್ಠಿತ ಸ್ಥಾನಕ್ಕೇರಿದರೂ ಕೂಡ ಅವನ ದಾಸತ್ವದ ಹೀನಸ್ಥಿತಿ ನಾಶವಾಗುತ್ತಿರಲಿಲ್ಲ. ದಾಸ ಅವನ ಒಡೆಯನ ಸೊತ್ತಾದುದರಿಂದ ಒಡೆಯನ ಮನಸಿಚ್ಛೆಯಂತೆ ನಡೆಯಬೇಕಿತ್ತು. ದಾಸ ಸ್ವತಂತ್ರನಿರಲಿಲ್ಲ. ಹಾಗಾಗಿ ತನಗೆ ಲಭಿಸಿದ ಸಂಪತ್ತನ್ನು ಭೋಗಿಸಲೂ ಕೂಡ ಅವನಿಗೆ ಸಾಧ್ಯವಿರಲಿಲ್ಲ.

೪.'ಬಳಿದೊತ್ತು' ಎಂಬುದು ಜಾತಿಯಂತೆ ದಾಸತ್ವದ ಶಾಶ್ವತ ಸ್ಥಿತಿಯಾಗಿತ್ತು. ಅದನ್ನು ಯಾವ ಕಾರಣದಿಂದಲೂ ಕಳೆದುಕೊಳ್ಳಲು ಸಾಧ್ಯವಿರಲಿಲ್ಲ. ಊಳಿಗಮಾನ್ಯ ಪದ್ಧತಿ ನಾಶವಾದಾಗಷ್ಟೇ ಇದೂ ನಾಶವಾಗಬೇಕಿತ್ತು. ಆನುವಂಶಿಕ ದಾಸತ್ವವೇ 'ಬಳಿದೊತ್ತು'.

೫. ಒಡೆಯ ದಾಸನನ್ನು ಸಾಕಲಾರದೆ ದಾಸ ಬೇರೆಲ್ಲೋ ಬೆಳೆದರೂ ಕೂಡ ಒಡೆಯನ ಒಡೆತನ, ಒಡೆತನದ ಹಕ್ಕು ನಾಶವಾಗುತ್ತಿರಲಿಲ್ಲ. ಒಡೆಯಬೇಕೆಂದಾಗ ದಾಸನ ಮೇಲಿನ ತನ್ನ ಹಕ್ಕನ್ನು ಸಾಧಿಸಬಹುದಿತ್ತು.

೬. ಲಿಂಗಾಧಾರದಲ್ಲಿ ಗಂಡುದೊತ್ತು, ಹೆಣ್ಣುದೊತ್ತು ಎಂಬ ವಿಭಾಗಗಳಿದ್ದವು. ಲಿಂಗ ಮತ್ತು ವಯಸ್ಸಿಗೆ ಅನುಗುಣವಾಗಿ ದಾಸರ ಮಾರುಕಟ್ಟೆಯ ಬೆಲೆ ಹೆಚ್ಚು ಕಡಿಮೆ ಆಗುತ್ತಿತ್ತು ಎಂಬುದಕ್ಕೆ ಬೇರೆ ಕಾವ್ಯ, ಶಾಸ್ತ್ರಗಳಲ್ಲಿ ಮತ್ತು ಶಾಸನಗಳಲ್ಲಿ ಆಧಾರವಿದೆ. ಅಂದರೆ ಒಡೆಯರು ಬೇಕಿದ್ದರೆ ತಮ್ಮ ದಾಸರನ್ನು ದನಗಳಂತೆ ಮಾರಬಹುದಿತ್ತು.

೭. ಊಳಿಗಮಾನ್ಯ ಪ್ರಭು ಮತ್ತು ತೊತ್ತುಗಳ ಒಡೆಯ ಶೈವಬ್ರಾಹ್ಮಣನೊಬ್ಬನ ನಡುವಿನ ಈ ಘರ್ಷಣೆ ಫ್ಯೂಡಲ್ ವ್ಯವಸ್ಥೆಯ ನ್ಯಾಯ ಮತ್ತು ಹಕ್ಕು ಬಾಧ್ಯತೆಯ ಸಮಸ್ಯೆಯನ್ನು ಬಿಡಿಸಿಡುತ್ತದೆ.

೮. ನಂಬಿಯಣ್ಣ ತನ್ನ ಪ್ರಭುತ್ವದ ಬಲವನ್ನು ಉಪಯೋಗಿಸಿ ವೃದ್ಧ ಬ್ರಾಹ್ಮಣನನ್ನು ಕೊಂದುಹಾಕಲು ಅಥವಾ ಬಾಯಿಮುಚ್ಚಿಸಲು ಯತ್ನಿಸಿ ವಿಫಲನಾಗುತ್ತಾನೆ. ಕೊನೆಗೆ ಶಿವ ದೇಗುಲದಲ್ಲಿ ವೃದ್ಧ ತೀರಿಹೋದಾಗ ನಂಬಿಯಣ್ಣ ಬ್ರಾಹ್ಮಣ ಹತ್ಯೆಯ ದೋಷಕ್ಕೂ ಬಹುಶಃ ಒಳಗಾಗುತ್ತಾನೆ. (ಇದನ್ನು ಹರಿಹರ ಹೇಳುವುದಿಲ್ಲ ನಿಜ.) ಬಳಿದೊತ್ತುತನದಿಂದ ಮುಕ್ತವಾಗಲು ಅವಕಾಶ ಇರುತ್ತಿದ್ದರೆ ಅದಕ್ಕೆ ತಗಲುವಷ್ಟು ಹಣ ಕೊಟ್ಟು ನಂಬಿ ಮುಕ್ತನಾಗಬಹುದಿತ್ತು.

೯. ತೊತ್ತಿನ ಒಡೆಯ ವೃದ್ಧ ಬ್ರಾಹ್ಮಣ ತನಗೆ ಅನ್ಯಾಯವಾಗುತ್ತಿದೆ ಎಂಬುದನ್ನು 'ಮಾನ್ಯರಿಗೆ' ಮೊರೆ ಹೋಗುವ ಸಂದರ್ಭದಲ್ಲಿ ಕಣಗಿಲೆ ಸೊಪ್ಪು ಹಿಡಿದು ದಿಬ್ಬ ಏರಿ ಎಲ್ಲರಿಗೂ ಕೇಳುವಂತೆ ಕೂಗಿ ಹೇಳುತ್ತಾನೆ. ಇದೇ ಸೊಪ್ಪು ಏಕೆ ಹಿಡಿಯಬೇಕಿತ್ತು?

೧೦. 'ಕುಲವಳಿಯ ಬಳಿದೊತ್ತು' ಆನುವಂಶಿಕ ತೊತ್ತುತನವನ್ನು ಸೂಚಿಸುವ ಪದ. ನಂಬಿಯ ತಂದೆ ತಾಯಿಗಳು ಬಳಿದೊತ್ತುಗಳೇ. ಅವರ ಹಿಂದಿನ ವಂಶಸ್ಥರು ದಾಸರಾಗಿದ್ದರು. ಪ್ರಮಾಣಪತ್ರ ಇದನ್ನು ಖಚಿತಪಡಿಸುತ್ತದೆ.

೧೧. ಈ ಪ್ರಕರಣದಲ್ಲಿ ತಾನು ಸತ್ತರೆ ಈ ಅಪರಾಧ ನಂಬಿ ಮತ್ತು ನರಸಿಂಗಮೊನೆಯರದಾಗುತ್ತದೆಂದು ಬ್ರಾಹ್ಮಣ ಹೇಳುತ್ತಾನೆ. ನರಸಿಂಗಮೊನೆಯರಂಥ ಪ್ರಭುವನ್ನೂ ತಪ್ಪಿತಸ್ಥನನ್ನಾಗಿ ಮಾಡುವಷ್ಟು ಕಾನೂನು ಪ್ರಬಲವಾಗಿತ್ತು ಎಂಬುದೇ ಇಲ್ಲಿರುವ ಗುಟ್ಟು. ಅಂದರೆ ದಾಸತ್ವಕ್ಕೆ ಸಂಬಂಧಪಟ್ಟ ಅಪರಾಧ ಗಂಭೀರವಾಗಿತ್ತು. ಅದರಲ್ಲೂ ಬ್ರಾಹ್ಮಣರ ದಾಸರಾದವರ ಸ್ಥಿತಿ ಏನಿರಬೇಡ?

೧೨. ವೃದ್ಧ ಬ್ರಾಹ್ಮಣ ಚೋಳ ದೇಶದ ಮಹಾಗಣಗಳನ್ನು ಸಂಬೋಧಿಸಿ ತನ್ನ ತಕರಾರು ಹೇಳುತ್ತಿದ್ದಾನೆ. ಪ್ರಭುವನ್ನೇ ಅಪರಾಧಿ ಸ್ಥಾನದಲ್ಲಿಡುವ ಪ್ರಸಂಗ ಬಂದಿರುವುದರಿಂದ ಅಂತಿಮವಾಗಿ ಮಹಾಗಣಗಳೇ ನಿರ್ಣಾಯಕರಾಗುತ್ತಿದ್ದರು. ಮಹಾಗಣ ಶೈವ ಮತದ ಹಿರಿಯರನ್ನು ಸೂಚಿಸುತ್ತದೆ. ಅಗ್ರಹಾರಗಳ ಮಹಾಜನರಂತೆ (ಬ್ರಾಹ್ಮಣರು) ಶಿವಪುರಗಳಲ್ಲಿ ಮಹಾಗಣಗಳು ಪ್ರಬಲ ಶಕ್ತಿಯಾಗಿದ್ದರು. ನಂಬಿಯ ಮಂತ್ರಿಯ ಎಚ್ಚರಿಕೆಯ ಮಾತುಗಳನ್ನು ನೆನಪಿಸಿಕೊಳ್ಳಬಹುದು. ದಾಸತ್ವದ

ಸಮಸ್ಯೆಯಲ್ಲಿ ನ್ಯಾಯ ಖಂಡಿತವಾಗಿ ಒಡೆಯರ ಪರವಾಗೇ ಇರುತ್ತಿದ್ದಿತು. ದಾಸನಂತೂ ಈ ಪದ್ಧತಿ, ಪರಂಪರೆಯನ್ನು (ರೂಢಿಗತ ಕಾನೂನು) ಮೀರುವಹಾಗಿರಲಿಲ್ಲ. ಪ್ರತಿಭಟಿಸುವಂತಿರಲಿಲ್ಲ, ಹೋರಾಡುವಂತಿರಲಿಲ್ಲ. ಈ ಪ್ರವೇಶದಲ್ಲಿ ಪ್ರಬಲವಿದ್ದ ಮಾಹೇಶ್ವರ ಪಂಥವನ್ನು ಚೋಳ ಅರಸರನ್ನು, ದೇವತೆಗಳನ್ನು (ಇಂದ್ರಾದಿ) ಎದುರು ಹಾಕಿಕೊಳ್ಳುವ ಭಯ ಇಡುತ್ತಾನೆ ಮಂತ್ರಿ. ಇಡೀ ಶೋಷಕ ವರ್ಗವನ್ನೇ ಎದುರುಹಾಕಿಕೊಳ್ಳುವ ಸಂದರ್ಭ ಅದು.

೧೩. ವಂಶಪಾರಂಪರ್ಯವಾಗಿದ್ದರಿಂದ 'ಬಳಿದೊತ್ತು' ದಾಖಲೆಯಾಗಬೇಕಾಗಿದ್ದ ಮಹತ್ವದ ಘಟನೆಯಾಗಿತ್ತು. ಒಡೆಯರು, ಹಿರಿಯರ ಮಧ್ಯೆ ಪ್ರಮಾಣಪತ್ರ ಬರೆಯಿಸಿ, ಜೋಪಾನವಾಗಿಟ್ಟುಕೊಳ್ಳುತ್ತಿದ್ದರು. ಅದರ ಪ್ರತಿಗಳನ್ನು ಕೂಡ ಮಾಡಿಸಿಟ್ಟುಕೊಳ್ಳುತ್ತಿದ್ದರು. ಪ್ರತಿಗಳು ಕಳೆದು, ಹರಿದು ನಾಶವಾದರೆ ಮೂಲಪ್ರತಿ ಜೋಪಾನವಾಗಿರುತ್ತಿತ್ತು. ಅದನ್ನು ದೇಗುಲದಲ್ಲಿ ಭದ್ರವಾಗಿಡುತ್ತಿದ್ದರು.

೧೪. ಬ್ರಾಹ್ಮಣ ಮತ್ತು ಕ್ಷತ್ರಿಯರ ಮಧ್ಯದ ಸಂಘರ್ಷದಲ್ಲಿ ಬ್ರಾಹ್ಮಣನೇ ಗೆಲ್ಲುತ್ತಾನೆ. ರಾಜತ್ವದ ಕ್ಷತ್ರಿಯ ಅಧಿಕಾರವನ್ನು ಕೂಡ ಮೀರಿ ಬ್ರಾಹ್ಮಣತ್ವದ ಜಾತಿ ಅಧಿಕಾರ ಬಲಯುತವಾಗಿತ್ತು. ರಾಜತ್ವ ರೂಢಿಯನ್ನು ಮೀರಿ ಬಾಳುವಂತಿರಲಿಲ್ಲ.

೧೫. ಊಳಿಗಮಾನ್ಯ ಸಮಾಜದಲ್ಲಿ ತೊತ್ತುತನವನ್ನು ಕಳೆದುಕೊಳ್ಳಲು ಇದ್ದ ಏಕೈಕ ಮಾರ್ಗ ಭಕ್ತಿಪಂಥಕ್ಕೆ ಸೇರುವುದು. ಇದಕ್ಕೂ ಹಿಂದೆ ಜೈನ, ಬೌದ್ಧ ಧರ್ಮಗಳಿಗೆ ಮತಾಂತರವಾಗುವ ಮೂಲಕವೂ ಇದು ಸಾಧ್ಯವಾಗಿತ್ತು. ಬಸವಣ್ಣ ತನ್ನನ್ನು ಪದೇ ಪದೇ ಶಿವನ 'ಬಳಿಹೊತ್ತು' ಎಂದು ಹೇಳಿಕೊಳ್ಳುವುದನ್ನು ಅವನ ವಚನಗಳಿಂದ ನೋಡಬಹುದು. ನಂಬಿಯಣ್ಣ ಆಂಡಿಯಾದುದರಿಂದಲೇ (ಶಿವನ ಬಳಿಹೊತ್ತು) ಅಂದರೆ ಲೌಕಿಕ ವ್ಯಕ್ತಿಗಲ್ಲ, ಅಲೌಕಿಕ ಶಕ್ತಿಗೆ ತೊತ್ತಾದುದರಿಂದ ಅಲ್ಪಮಟ್ಟಿಗೆ ತನ್ನ ಪ್ರಭಾವವನ್ನು ಪ್ರತಿಷ್ಠೆಯನ್ನು ಉಳಿಸಿಕೊಳ್ಳಲು ಸಾಧ್ಯವಾಗುತ್ತದೆ. ಅಲ್ಲದೆ ಅವನ ಒಡೆಯನೂ ಈಗ ಸತ್ತುಹೋಗಿದ್ದಾನೆ. ಅಂತೆಯೇ ನರಸಿಂಗಮೊನೆ ಆತನ ಪಾದೋದಕವನ್ನು ಪವಿತ್ರವೆಂದು ಸ್ವೀಕರಿಸುವ ಮೂಲಕ ಇಡೀ ರಾಜ್ಯದ ಜನತೆ ನಂಬಿಯಣ್ಣನನ್ನು ಗೌರವದಿಂದ ಕಾಣುವಂತೆ ಮಾಡುತ್ತಾನೆ.

೧೬. ನಂಬಿಯಣ್ಣನ ಕತೆ ತಮಿಳುನಾಡಿನದಾದರೂ ಕಾಲ ಮತ್ತು ಪ್ರದೇಶಗಳ ದೃಷ್ಟಿಯಿಂದ ಅದಕ್ಕೆ ಸಮೀಪವಿದ್ದ ಹರಿಹರ ಕನ್ನಡ ನಾಡಿನಲ್ಲಿದ್ದ ಪದ್ಧತಿ ಪರಂಪರೆಗಳನ್ನು ಕಂಡವನಾಗಿದ್ದ. ಹರಿಹರ ತಮಿಳುನಾಡನ್ನು ಸಂಚರಿಸಿದ್ದನೆಂದು ಸಾಧಾರವಾಗಿ ಊಹಿಸಲಾಗಿದೆ. ಅನೇಕ ಪದ್ಧತಿಗಳು ತಮಿಳುನಾಡು ಮತ್ತು ಕರ್ನಾಟಕದಲ್ಲಿ ಸಮಾನವಾಗಿದ್ದವು. ಅವು ಬದಲುವಂತೆಯೂ ಇರಲಿಲ್ಲ. ಈ ಎಲ್ಲ ಕಾರಣಕ್ಕಾಗಿ ಇಲ್ಲಿ ಪ್ರಸ್ತಾಪಿಸಲಾಗಿರುವ ವಿಚಾರಗಳು ಸತ್ಯಕ್ಕೆ ದೂರವಿರಲಾರದೆಂದು ಭಾವಿಸಬಹುದು.

ಬಹುಶಃ ಮುದಿಬ್ರಾಹ್ಮಣ ಶಿವದೇಗುಲದಲ್ಲಿ ಸತ್ತುಹೋಗುತ್ತಾನೆ. ನಂಬಿಯಣ್ಣ ರಾಜ್ಯವನ್ನು ತ್ಯಜಿಸಬೇಕಾಗುತ್ತದೆ. ಆದರೆ ನರಸಿಂಗಮೊನೆ ಅಥವಾ ಶಿವಪುರದ ಗಣವ್ಯವಸ್ಥೆ ಅವನಿಗೆ ಜೀವನ ನಿರ್ವಹಣೆಗೆ ಒಂದು ವ್ಯವಸ್ಥೆಯನ್ನು ಮಾಡುತ್ತದೆ. ಇದರ ಪ್ರಕಾರ ಪ್ರತಿ ಶೈವದೇಗುಲ ಆತನಿಗೆ ೧೦೦೦ ಹೊನ್ನು ಕೊಡಬೇಕಾಗುವುದು.

ಹೀಗೆ ರಾಜಶಾಹಿಯನ್ನು ಕೂಡ ಬುಡಮಟ್ಟ ಅಲುಗಾಡಿಸಿಬಿಡುತ್ತದೆ. ಬಳಿಹೊತ್ತಿನ ಪ್ರಸಂಗ, ರಾಜನಾಗಿರುವ ನಂಬಿಯ ಸರ್ವತಂತ್ರ ಸ್ವಾತಂತ್ರ್ಯಕ್ಕೆ ಧಕ್ಕೆಯುಂಟಾಗಿ ತೊತ್ತುತನದ ಪರತಂತ್ರ ಸ್ಥಿತಿಗಿಳಿಯುವ ಈ ದುರಂತ ಕತೆ ಊಳಿಗಮಾನ್ಯ ವ್ಯವಸ್ಥೆಯ ಪದರವೊಂದನ್ನು ತುಂಬ ಸಮರ್ಥವಾಗಿ ಬಿಚ್ಚಿಡುತ್ತದೆ.

ಅತ್ಯಂತ ಶೋಷಣೆಗೆ ಒಳಗಾದ ದಲಿತರು ಮಾತ್ರ ಬಳಿಹೊತ್ತುಗಳಾಗುತ್ತಿದ್ದಿರಬೇಕು. ಹೀಗೆ ವಂಶಪಾರಂಪರ್ಯ ತೊತ್ತುತನಕ್ಕೆ ಬಲಿಯಾದುದರಿಂದಲೇ ದಲಿತರ ಹೀನಸ್ಥಿತಿ ಈವರೆಗೂ ಉಳಿದು ಬಂದಿರುವಂತಿದೆ. ಇದು ಜಾತಿ ವ್ಯವಸ್ಥೆಯ ವಂಶಪಾರಂಪರ್ಯತೆಗೂ ಕಾರಣವಾಗಿರುವಂತಿದೆ.

ಸ್ವತಃ ರಾಜನೂ ರೂಢಿಗತ ಕಾನೂನನ್ನು ಮೀರುವಂತಿರಲಿಲ್ಲ. ಹೀಗಾಗಿ ನಂಬಿ ರಾಜನ ಮಗನಾಗಿ ಉಳಿಯಲು ಹಕ್ಕಿಲ್ಲದವನಾಗುತ್ತಾನೆ. ನರಸಿಂಗಮೊನೆಯಾರನ ಸಾಕುಮಗ ಹೀಗೆ ಕೈಬಿಟ್ಟು ಹೋಗುತ್ತಾನೆ. ಇದರಿಂದ ರಾಜನಿಗೆ ಅನಿವಾರ್ಯವಾಗಿದ್ದ ಪರಿವಾರ, ಬಿರುದಾವಳಿ, ಸೌಕರ್ಯ ಸವಲತ್ತು ಐಶ್ವರ್ಯ ಸುಖಭೋಗ ಎಲ್ಲವನ್ನೂ ನಂಬಿ ಕಳೆದುಕೊಳ್ಳುತ್ತಾನೆ. ಅನುಕಂಪೆಯಿಂದಾಗಿಯಷ್ಟೇ ಅವನಿಗೆ ಪ್ರತಿ ಶೈವ ದೇಗುಲ ಸಾವಿರ ಹೊನ್ನು ಕೊಡುವ (ಭಿಕ್ಷೆಯಂತೆ) ಕರಾರಾಗುತ್ತದೆ.

ಹಕ್ಕು ಸಾಧಿಸುತ್ತಿದ್ದ ವೃದ್ಧ ಬ್ರಾಹ್ಮಣ ಯಜಮಾನನೇ ತೀರಿಹೋದಾಗ ನಂಬಿ, ಮತ್ತೆ ಅದೇ ಸಂಪ್ರದಾಯದ ಪ್ರಕಾರ ಶಿವ ದೇಗುಲದ ತೊತ್ತಾಗಬೇಕಾಗುತ್ತದೆ. ವಾರಸುದಾರರಿಲ್ಲದೆ ಸತ್ತವರ ಆಸ್ತಿಯನ್ನೆಲ್ಲ ದೇಗುಲಕ್ಕೆ ಅರ್ಪಿಸಲಾಗುತ್ತಿತ್ತು. ತೊತ್ತು ಕೂಡ ಆಸ್ತಿಯ ಭಾಗವೇ. ಹಾಗಾಗಿ ನಂಬಿ ದೇಗುಲದ ತೊತ್ತಾಗುವುದು ಅನಿವಾರ್ಯವಾಗುತ್ತದೆ. ಈ ತೊತ್ತುತನವನ್ನೇ ನಂಬಿ ಶಿವಭಕ್ತಿಯನ್ನಾಗಿ ಮಾಡಿಕೊಂಡ ಎಂಬುದು ಹರಿಹರನಂಥ ಕವಿಗಳ ವಾದವೈಖರಿ.

ದಲಿತರು ಯಾರು ? ಅವರಿಗೆ ಈ ದುಃಸ್ಥಿತಿ ಏಕೆ ಉಂಟಾಯಿತು ? ಈ ಮೂಲಭೂತ ಪ್ರಶ್ನೆಗೆ ಒಂದು ಊಹಾತ್ಮಕ ಉತ್ತರವನ್ನು ಈ ಚರ್ಚೆಯಿಂದ ಕಂಡುಕೊಳ್ಳಬಹುದೆ ?

ಬಳಿದೊತ್ತಾಗಿದ್ದ ಜನಸಮೂಹವೇ ಹೊಲೆಯ ಮಾದಿಗರೆಂಬ ದಲಿತರೇ ? ಉತ್ತರ, ದಕ್ಷಿಣ ಕರ್ನಾಟಕದ ಗ್ರಾಮೀಣ ಭಾಗದಲ್ಲಿ ಹೊಲೆಯರು, ಮಧ್ಯ ಕರ್ನಾಟಕದಲ್ಲಿ ಮಾದಿಗರು ಹೀಗೆ ಬಳಿದೊತ್ತಾಗಿದ್ದರೆಂದು ಊಹಿಸಲು ಸಾಧ್ಯವಿದೆ. ಊಳಿಗಮಾನ್ಯ ಕಾಲದಲ್ಲಿ ಭೂಮಿಯೆ ಎಲ್ಲ ಸಂಪತ್ತಿನ ಮೂಲ ಆಕರವಾಗಿತ್ತು. ಈ ಭೂಮಿಗೆ ಅಂಟಿಕೊಂಡುಬಂದ ಸೇವಕ ವರ್ಗದಲ್ಲಿ ಹೊಲೆಯರು ಅಥವಾ ಮಾದಿಗರು ಪ್ರಮುಖರು. ಹಾಗಾಗಿ ಭೂಸಂಬಂಧದಲ್ಲಿ ಹೊಲೆಯರು ಮತ್ತು ಮಾದಿಗರು ಬಳಿದೊತ್ತುಗಳಾಗಿದ್ದು ಉಳಿದುಬಂದಿರುವ ಸಾಧ್ಯತೆ ಇದೆ. ಭೂಮಾಲಿಕತ್ವ ಬೇರೆಯಾದರೂ ದಲಿತರ ಭೂಮಿಯ ಜತೆಯ ಸೇವಾ ಸಂಬಂಧ ತಪ್ಪದಂತಿರಲು 'ಬಳಿಹೊತ್ತು' ಪದ್ಧತಿಯೇ ಕಾರಣವಿರುವಂತಿದೆ. ಹಿಂದೆಯೂ ಹೀಗೆ ಇತ್ತು – ಭೂಮಾಲಿಕ ಭೂಮಿ ಮಾರಿದಾಗ ಭೂಮಿಗಂಟಿದ್ದ ಸೇವಕರನ್ನು ಆ ಭೂಮಿಯ ಜತೆಗೆ ಕೊಡಬೇಕಾಗುತ್ತಿತ್ತು.

ಹರಿಹರನನ್ನು ಇನ್ನು ಮುಂದೆಯೂ ಓದುವುದು ಪ್ರಯೋಜನಕಾರಿ. ನಾಪೀಗ ರಗಳೆಯ ೮ನೇ ಸ್ಥಲಕ್ಕೆ ಬರುತ್ತೇವೆ. ಇಲ್ಲಿರುವ ನಂಬಿ ಈಗ ನರಸಿಂಗಮೊನೆಯವರಿಗೆ ಸಾಕುಮಗನಲ್ಲ. ಲೋಕಪೂಜ್ಯ ತಂದೆ ತಾಯಿಗಳಿಗೂ ಈತ ಗೌರವಾರ್ಹ. ಏಕೆಂದರೆ, ಈಗ ಶಿವನ ಮಗ, ಶಿವನ ತೊತ್ತು. ಇದರಿಂದಾಗಿ ಅನಾಥತ್ವ ಹಿಂಗಿ ಸನಾಥತ್ವ ಪ್ರಾಪ್ತವಾಯಿತಂತೆ. ತನ್ನ ಮುಂದಿನ ಚದುರಂಗ ಬಲವನ್ನು ನೋಡಿ ನಂಬಿ ''ನಮಗೂ ನಿಮಗೂ ಸೊಮ್ಮು ಸಂಬಂಧವಿಲ್ಲ. ನೀವೆಲ್ಲ ನಿಮ್ಮರಸನಲ್ಲಿ ಹೋಗಿ'' ಎನ್ನುತ್ತಾನೆ. ಮಂತ್ರಿ ತುಂಬರ ಮಾತ್ರ : ''ಈತ ಮಹಾ ಸಮರ್ಥಶಾಲಿ. ಈತನನ್ನು ಬಿಡಬಾರದು'' ಎಂದು ನಿಶ್ಚೈಸಿದಾಗ ಶಿವನಿಗೆ ನಂಬಿ ತೊತ್ತಾದಂತೆ ಈಗ ನಂಬಿಗೆ ತೊತ್ತಾಗುತ್ತಾನೆ. ತೊತ್ತಿಗೆ ತೊತ್ತಾಗಿರಲು ಸಾಧ್ಯವಿತ್ತು. ಆತನನ್ನು ನಂಬಿಯಣ್ಣ 'ಆಳುಗೊಂಡು' ತನ್ನ ಜತೆಗಿಟ್ಟುಕೊಳ್ಳುತ್ತಾನೆ. ಶಿವ ಕೊಟ್ಟ ಹಣವನ್ನು ಭಕ್ತರಿಗೆ, ಯುಕ್ತರಿಗೆ, ಬಂದವರಿಗೆ, ನಿಂದವರಿಗೆ, ನೆರೆದವರಿಗೆ, ಬೇಡಿದವರಿಗೆ, ನೋಡಿದವರಿಗೆ ನೀಡುತ್ತಾನೆ. ಇದು ತೊತ್ತಿನ ಹಣವಾದ್ದರಿಂದ ಅವನ್ನು ತೀರ ಬಡವರಾದ ಸಾಮಾನ್ಯ ಜನರೇ ಪಡೆದಿದ್ದಾರೆ. ಈತನ ಈ



ಸ್ಥಿತಿಯನ್ನು ನೋಡಲು ಅರಸುಮಕ್ಕಳು ಶರಣರು, ಹಿರಿಯರು, ಪುರಸಮಯಿಗಳು, ಸಾಮಂತರು ಸಂದಣಿಗೊಳ್ಳುತ್ತಾರೆ. ಲೌಕಿಕ ಸಂಬಂಧಗಳನ್ನು ಕೈಬಿಟ್ಟು ಶಿವದೀಕ್ಷಾ ಸಂಬಂಧ ಪಡೆದುದರಿಂದಾಗಿ 'ನಂಬಿ' ಲೌಕಿಕದಲ್ಲಿದ್ದು ತೊತ್ತುತನದ ಕಳಂಕ ಕಳೆದುಕೊಂಡು ಲೋಕ ಪೂಜ್ಯನಾಗುತ್ತಾನೆ. ಬೌದ್ಧಮತದ ಪ್ರಭಾವ ಇಲ್ಲಿದೆಯೋ ನೋಡಬೇಕು. ಗುಲಾಮಗಿರಿ-ಜಾತಿ ವ್ಯವಸ್ಥೆಗಳ ಹುದುಲಲ್ಲಿ ಸಿಕ್ಕ ಘನ ವ್ಯಕ್ತಿತ್ವಕ್ಕೆ ಬಿಡುಗಡೆ ಲಭಿಸುತ್ತಿದ್ದುದು, ಜೈನ, ಬೌದ್ಧ, ಭಕ್ತಿಶೈವ ಪಂಥಗಳ ಮೂಲಕ. ಅದಕ್ಕೆ ಮತಾಂತರಗೊಂಡ 'ಗುಲಾಮ' ತನ್ನ ವ್ಯಕ್ತಿತ್ವದ ಘನತೆಯಿಂದ ಗೌರವಾರ್ಹನಾಗಲು ಸಾಧ್ಯವಿತ್ತು.




ಶಿವಕರುಣವಾದುದನ್ನು ಕೇಳಿ ನರಸಿಂಗಮೊನೆಯರು ಬಂದು ಅಪ್ಪಿಕೊಳ್ಳಲಾಗದೆ, ನಮಸ್ಕರಿಸಿ, ಬಾಯಿಗೆ ಬಂದುದನ್ನು ಹೊಗಳುತ್ತಾನೆ : ಶಿವನ ಶಿಶುವೆ, ಶಿವನ ಕಣ್ಣೇ, ಶಿವನ ಪುಣ್ಯವೇ ಇತ್ಯಾದಿ. ಅರಮನೆಗೆ ಕರೆತಂದು ಅವನ ಪಾದವನ್ನು ತೊಳೆದು ಪಾದೋದಕ ಪಡೆದು ಕೃತಾರ್ಥನಾಗುತ್ತಾನೆ. ತಂದೆ, ತಾಯಿಗಳೂ ಬರುತ್ತಾರೆ. ''ನನ್ನ ಹಡೆದ ನಿಮಗೂ ಸಲುಹಿದ ರಾಜನಿಗೂ, ಸಂಸಾರ ಭಯವಿಲ್ಲ. ಶಿವನ ಕರುಣವಾಗುತ್ತದೆ'' ಎಂದು ಹೇಳಿ ನಂಬಿ, ''ನನಗೆ ಪಾರ್ವತಿಯೇ ತಾಯಿ, ವಿರೂಪಾಕ್ಷನೇ ತಂದೆ, ಶಿವಭಕ್ತರೇ ಬಂಧುಗಳು, ಶಿವಾಲಯವೇ ಅರಮನೆ, ಶಿವಪುರವೇ ಪಟ್ಟಣ'' ಎಂದು ಹೊರಟುಬರುತ್ತಾನೆ. ಈಗ ಆತನಿಗೆ ಚಾಮರ ಸೀಗುರಿ ವಾದ್ಯ ಮೇಳದ ಗೌರವ ದೊರೆಯುತ್ತದೆ. ಪೆರುಮಳಲೆಯ ಕುರುಂಬ, ತಾನು ನಂಬಿಯಣ್ಣನ ತೊತ್ತಿನ ತೊತ್ತು ಎಂದು ಹೇಳಿ ಅವನ ಸುತ್ತ ಕುಣಿಯುವ ಕಾಯಕದಲ್ಲಿ ನೆಲೆಸುತ್ತಾನೆ. ಶಿವಪುರಗಳ ಶಿವದೇಗುಲಗಳನ್ನು ಭೆಟ್ಟಿ ಕೊಡುತ್ತ ನಂಬಿ ಪಡಿಹೊನ್ನು ಸ್ವೀಕರಿಸುತ್ತ ತ್ಯಾಗ ಭೋಗದಲ್ಲಿರುತ್ತಾನೆ. ಈಗಲೂ ನಂಬಿಯಣ್ಣ ಅರಸ ಮಗನಂತೆಯೇ ಬಾಳಿ ಲೌಕಿಕದ ಸುಖಸಂಸಾರ ಮಾಡಿ ಕೈಲಾಸ ಕಾಣುತ್ತಾನೆ. ಅವನು ತನ್ನ ಇಹದ ಆಶೆಗಳನ್ನು ಹತ್ತಿಕ್ಕಲು ಹೋಗಲಿಲ್ಲ. ಸಂಸಾರಪನ್ನು ತ್ಯಜಿಸಬೇಕು, ನಿರ್ಲಕ್ಷಿಸಬೇಕು ಎಂದೇನು ಭಕ್ತಿಪಂಥ ಹೇಳುವುದಿಲ್ಲ. ಒಬ್ಬೊಬ್ಬ ಭಕ್ತನ ಚರಿತ್ರೆ ಒಂದೊಂದು ಮಾರ್ಗವನ್ನೇ ಸೂಚಿಸುತ್ತದೆ. ಇದೇ ಮಾರ್ಗ ಸೂಕ್ತವೆಂದು ಅನುಸರಿಸಹೊರಟವರು ಒಬ್ಬರೂ ಇಲ್ಲ. ಎಲ್ಲರಿಗೂ ಅವರವರದೇ ಆದ ಅನನ್ಯ ಅನುಭವವಿದೆ. ಇದೇ ಭಕ್ತಿ ಪಂಥದ ಪ್ರಜಾಪ್ರಭುತ್ವೀಯ ಗುಣ.

ತುಂಬುರ, ಕುರುಬರಂಥವರ ಪರಿವಾರದಲ್ಲಿ ದಂಡಿಗೆಯಲ್ಲಿ ಹೋಗುವುದು, ಹೋದ ಶಿವಪುರಗಳಲ್ಲಿ ಸಕಲ ಸಂಭ್ರಮ ಗೌರವಾದರ, ಮಾನ ಸನ್ಮಾನಗಳಿಂದ ಸ್ವಾಗತ ಪಡೆಯುವುದು, ಇವೆಲ್ಲ ಶಿವನ ಬಳಿದೊತ್ತಾದ ನಂಬಿಯ ರಾಜತ್ವದ ಪ್ರಭಾವ ಕಳೆದಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ತಿರುವಾರೂರಲ್ಲಿ ಪರವೆಯೆಂಬ ವೇಶ್ಯೆಯನ್ನು ಕಂಡು ನಂಬಿ ಮೋಹಗೊಳ್ಳುತ್ತಾನೆ. ಪರವೆಯಂಥ ವೇಶ್ಯೆಯ ಜತೆಗಷ್ಟೇ ನಂಬಿಕೆ ಈ ದೇಹಸಂಬಂಧ ಸಾಧ್ಯ. ಈತ ಶಿವಬ್ರಾಹ್ಮಣನಾಗಿದ್ದರಿಂದ ಯುವಕನೂ ಚೆಲುವನೂ ಆಗಿದ್ದರಿಂದ ಪರವೆ ಆತನನ್ನು ಕಂಡು ಮೋಹಿತಳಾಗಿದ್ದರಿಂದ ನಂಬಿಗೆ ಈ ಸಂಬಂಧ ಸಾಧ್ಯವಾಗುತ್ತದೆ. ಪರವೆ ಶಿವನ ಓಲಗದ ತೊತ್ತುತನವೇ ಚಿಗುರಿದ ತಳಿಯಲಾರ ಕುಲದವಳು. ನಂಬಿ ಈಗ 'ತೊತ್ತುಕುಲ'ದವನಾದ್ದರಿಂದ ಅವನ ಸಂಬಂಧ ಕೂಡ ಕೆಳಜಾತಿಯ ಜತೆಗೆ ಆಗಬೇಕಷ್ಟೇ.

ಪಂಗುನಿಯ ತಿರುನಾಳು ಎಂಬ ಹಬ್ಬ ಬರಲು ಪರವೆಯ ತಾಯಿ ''ನಮ್ಮ ಹೆಸರು ಅಧಿಕ, ಆದರೆ ಮನೆಯಲ್ಲೇನೂ ಇಲ್ಲ'' ಎಂಬ ಮಾತು ಕೇಳಿದ ನಂಬಿ ತಿರುನಾಳ್ ಬೀಯಕ್ಕೆಂದು ಯಾವ ಪುರದವರು ಕೊಟ್ಟಿಲ್ಲವೋ ಆ ಪುರದ ಶಿವ ದೇಗುಲಕ್ಕೆ ಪರಿವಾರ ಸಮೇತ ಹೊರಡುತ್ತಾನೆ. ತಿರುಕೊಂಡೆಯೂರ ಶಿವದೇಗುಲಕ್ಕೆ ಬಂದು, ''ನನ್ನನ್ನು ಆಳ್ಕೊಂಡ ಶಿವನೇ ತಿರುನಾಳನೆಲ್ಲಿಲ್ಲ. ಪರವೆ ಮುನಿವಳು, ಪಡಿಹೊನ್ನು ಕೊಡು'' ಎಂದು ಕಾಡುವನು. ಹೀಗೆ ಅನೇಕ ಊರುಗಳ ಶಿವದೇಗುಲಗಳಿಂದ ನೆಲ್ಲು ಬೆಲ್ಲ, ಪಡಿಹೊನ್ನು ಸಂಗ್ರಹಿಸಿ ತರುತ್ತಾನೆ. ಹೊನ್ನು ಹೊರಲು ಆಳು ಇಲ್ಲದೆ ಪರದಾಡುತ್ತಾನೆ. ಪರವೆಯ ಊರೆಲ್ಲ ನೆಲ್ಲಾಗುತ್ತದೆ. ಅವರವರ ಮನೆಯ ಮುಂದಿನ ನೆಲ್ಲು ಅವರೇ ತಕ್ಕೊಳ್ಳಲಿ ಎಂದು ಹೇಳುತ್ತಾನೆ ನಂಬಿ. ''ಮಹಿಳೆಯರ ದಾನವನ್ನು ಮಹಿಳೆ ಪಡೆಯಬಾರದು'' ಎಂದು ಒಬ್ಬಳು ಮಾತ್ರ ಅದನ್ನು ಸ್ವೀಕರಿಸುವುದಿಲ್ಲ.

ತಿರುನಾಳ ಹಬ್ಬದ ದಿನ ಶಿವನ ಮೆರವಣಿಗೆ. ಶಿವಪುರದ ಜನಕ್ಕೆಲ್ಲ ಸಂಭ್ರಮ. ಆಡಂಬರದ ಮೆರವಣಿಗೆ ಪರವೆಯ ಮನೆ ಹತ್ತಿರ ನಿಂತಾಗ, ನಂಬಿ ಪರವೆಯಪರು ಬೀದಿಗಳಲ್ಲಿ ಹಾಡಿ ಪಡಿ ಹೊನ್ನು ಪಡೆಯುತ್ತ ಬರುತ್ತಾರೆ. ಇದರಿಂದ ನಮಗೆ ತಿಳಿಯುವುದು – ಶಿವನ ಮುಂದೆ ಹಾಡಿ, ಪಡಿ ಹೊನ್ನು ಪಡೆವ ಕಾಯಕ ನಂಬಿಗಿತ್ತು ಎಂದು.

ಎರಡನೆಯ ತಿರುನಾಳಿಗೆ ಪಡಿಹೊನ್ನು ಪಡೆಯುವ ಸಲುವಾಗಿ ಹೊರಡುವ ನಂಬಿಗೆ ಈಗ ಪಟ್ಟದಾನೆ, ತುರಗಬಲ, ಪದಾತಿ ಕೂಡ ಇದೆ. ತಿರುವತ್ತಿಯೂರಿಗೆ ಬಂದಾಗ ಸಂಕಿಲೆ ನಾಚಿಯನ್ನು ಕಂಡು ಮೋಹಗೊಂಡು, ಶಿವನಿಗೆ ಪೀಡಿಸ ತೊಡಗುತ್ತಾನೆ. ಪತ್ರ ಕೊಡು ಎಂದು ಬ್ಲಾಕ್‌ಮೇಲ್ ಮಾಡುತ್ತಾ, ಅವನ ಕುಂಟಲಗಿತ್ತಿತನದಿಂದ ಸಂಕಿಲೆ ನಾಚಿ ಜತೆ ಮೂರು ವರ್ಷ ಇರುವುದೂ ಒಂದು ಕತೆಯೇ. ೩ ವರ್ಷದ ನಂತರ ತಿರುವಾರೂರಿಗೆ ಸಂಪತ್ತಿನ ಪೆಟ್ಟಿಗೆಗಳ ಜತೆ ಬರುತ್ತಾನೆ. ಪರವೆಯನ್ನು ಕಾಣಲಿಕ್ಕೂ ಮತ್ತೆ ಶಿವನ ಮಧ್ಯಸ್ಥಿಕೆ ಬೇಕಾಗುತ್ತದೆ.

ಒಂದುಸಲ ಅಂಬಲೂರ ಅಗ್ರಹಾರ ವಾಸಿ ಸೋಮಾಸಿ ಮಾರ ''ನಿಮ್ಮ ತೊತ್ತಿನ ತೊತ್ತು, ಭೃತ್ಯ ನಾನು'' ಎಂದು ನಂಬಿಗೆ ಹೇಳಿ ಶಿವನನ್ನು ಯಜ್ಞಕ್ಕೆ ಕಳಿಸಲು ವಿನಂತಿಸಿಕೊಳ್ಳುತ್ತಾನೆ. ಕತೆ ಹೀಗೆ ಮುಂದುವರಿಯುತ್ತದೆ.

ತಮಿಳುನಾಡಿನಲ್ಲಿ ಕ್ರಿ.ಶ. ನಾಲ್ಕನೇ ಶತಮಾನದಿಂದ ಸುಮಾರು ಹತ್ತು- ಹನ್ನೊಂದನೇ ಶತಮಾನದವರೆಗೆ ಇದ್ದ ೬೩ ಶಿವಭಕ್ತರು ತಮಿಳರಿಗೆ ಅತ್ಯಂತ ಪೂಜ್ಯರು. ಕೆಲವು ದೇವಸ್ಥಾನಗಳಲ್ಲಿ ಅವರ ಮೂರ್ತಿಗಳಿಗೆ ಪೂಜೆ ಕೂಡ ಸಲ್ಲುತ್ತದೆ. ಇವರಲ್ಲಿ ಅಪ್ಪರ್, ಸುಂದರರ್, ತಿರುಜ್ಞಾನ ಸಂಬಂಧರ್ ಎಂಬ ಮೂವರು ಸಮಯಾಚಾರ್ಯರೆಂದು ಖ್ಯಾತಿ ಇದೆ. ಇವರು ಶೈವ ಕ್ಷೇತ್ರಗಳಿಗೆ ಭೆಟ್ಟಿ ನೀಡಿ ತೇವಾರ (ದೇವರ ಸ್ತೋತ್ರ)ಗಳನ್ನು ರಚಿಸಿದ್ದಾರೆ. ೬೩ರಲ್ಲಿ ಇಂಥ ಪಂಡಿತರಿರುವಂತೆ ಕಣ್ಣಪ್ಪನಂಥ ಜನಸಾಮಾನ್ಯರೂ ಇದ್ದಾರೆ. ಆದರೆ ಇವರೆಲ್ಲ ಶಿವನಿಷ್ಠೆಗೆ, ತಮ್ಮ ಸರ್ವಸ್ವವನ್ನು ತ್ಯಾಗ ಮಾಡಿದ 'ಮಹಿಮರು'.

ಸಮಯಾಚಾರ್ಯರಲ್ಲಿ ಸುಂದರ ಮೂರ್ತಿಗಳನ್ನೇ ನಂಬಿಯಣ್ಣನೆಂದು ತಿಳಿಯಲಾಗುತ್ತದೆ. ವಿರನ್ಮಾಂಡನೆಂಬ ನಾಯನ್ಮಾರರ ಜತೆಗಿನ ಸಂಘರ್ಷದಲ್ಲಿ ಸುಂದರ ಮೂರ್ತಿಗಳು ಶಿವಭಕ್ತರಿಗೆಲ್ಲ ನಾನು ಅಡಿಯಾಳು ಎಂದು ಕ್ಷಮೆ ಕೇಳಿಕೊಂಡು, 'ತಿರುತ್ತೊಂಡತ್ತೊಗೈ' ಎಂಬ ಭಕ್ತಿಗೀತೆಗಳನ್ನು ರಚಿಸಿದರು. ಇದರಲ್ಲಿ ೬೨ ನಾಯನ್ಮಾರರ ಸ್ತುತಿ ಇದೆ.

ಇವೆಲ್ಲವೂ ಚರಿತ್ರೆ (ವಿವರಗಳಿಗೆ ನೋಡಿ : 'ಹರಿಹರ ದೇವ' ಗ್ರಂಥದ ಎಲ್. ಗುಂಡಪ್ಪ ಅವರ ಲೇಖನ, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೭೪). ಆದರೆ ಹರಿಹರನ ನಂಬಿಯಣ್ಣನ ರಗಳೆಗೂ ಈ ನಿಜ ಚರಿತ್ರೆಗೂ ಹಲವಾರು ವ್ಯತ್ಯಾಸಗಳಿವೆ. ಇದು ಬೇರೆ ಚರ್ಚೆಯ ವಸ್ತು.

ಇಡೀ ದೇಶದಲ್ಲಿ ಭಕ್ತಿಪಂಥ ಹುಟ್ಟಿದ್ದು ತಮಿಳುನಾಡಿನಲ್ಲಿ ಎಂದು ಹೇಳಲಾಗುತ್ತದೆ. ಇದಕ್ಕೆ ನಾಯನ್ಮಾರರೆಂಬ ಶಿವಭಕ್ತರು, ಆಳ್ವಾರರೆಂಬ ವಿಷ್ಣುಭಕ್ತರು ಕಾರಣ.

ಭಕ್ತಿಪಂಥವು ವ್ಯವಸ್ಥೆಯ ಜತೆ ಹೊಂದಾಣಿಕೆ ಮಾಡಿಕೊಂಡು ಹೋಯಿತೆ ಅಥವಾ ಪ್ರತಿಭಟಿಸಿತೆ ಎಂಬ ಪ್ರಮುಖ ಪ್ರಶ್ನೆ ಇದೆ. ಪ್ರಗತಿಪರ ಚಿಂತಕರಲ್ಲೇ ಈ ಬಗ್ಗೆ ವಿವಾದಗಳಿವೆ. ತಮಿಳುನಾಡು, ಆಂಧ್ರ, ಕರ್ನಾಟಕದ ಶಿವಭಕ್ತರ ಕತೆಗಳನ್ನು ಹೇಳಿದ ಹರಿಹರನದು ಮುಖ್ಯವಾಗಿ ಭಕ್ತ ಮನೋಧರ್ಮ. ಇದರಿಂದಾದ ಸಮಸ್ಯೆಗಳು ಹಲವು. ನಿದರ್ಶನಕ್ಕೆ ೧೨ನೇ ಶತಮಾನದ ಶರಣರ ಚಳುವಳಿಯನ್ನು ಆತ ಸಮಗ್ರವಾಗಿ ದಾಖಲಿಸುವುದಿಲ್ಲ. ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು ಮೊದಲಾದ ಶರಣರ ಬಗ್ಗೆ ಪ್ರತ್ಯೇಕವಾಗಿ ರಗಳೆ ಗಳನ್ನು ಬರೆಯುವಾಗ, ಪ್ರಾಸಂಗಿಕವಾಗಿ ಚಳುವಳಿಯ ವಿಷಯ ಪ್ರಸ್ತಾಪ ಮಾಡುತ್ತಾನೆ; ಅಲ್ಲಿಯೂ ಕೂಡ ಪವಾಡಗಳಿಗೆ, ವ್ಯಕ್ತಿಯ ವೈಯಕ್ತಿಕ ಸಾಧನೆಗೆ ಮಹತ್ವ ನೀಡುತ್ತಾನೆಯೇ ಹೊರತು, ಶರಣರ ಸುಸಂಘಟಿತವಾದ ರೂಪದ ಪ್ರಯತ್ನಕ್ಕಲ್ಲ. ಅಂದರೆ ಅವನಿಂದ ವಸ್ತು ನಿಷ್ಠವಾದ, ಚರಿತ್ರೆಯನ್ನು ಅಪೇಕ್ಷಿಸುವುದು ಸರಿಯಲ್ಲ. ಹಾಗೆ ನೋಡಿದರೆ ೧೨ನೇ ಶತಮಾನದ ಚಳುವಳಿಯ ಬಗ್ಗೆ ಇಂದು ನಾವು ಗ್ರಹಿಸಿಕೊಂಡಿರುವ ರೀತಿಗಿಂತ ಬೇರೆಯದೇ ಆದ ಒಂದು ಚಿತ್ರ ಹರಿಹರನ ಕನ್ನಡ ಶರಣರ ಕಥೆಗಳಲ್ಲಿ ಸಿಗುತ್ತದೆ. ಈ ವಿಷಯ ಕೂಡ ಬೇರೊಂದು ಲೇಖನದ ವಸ್ತು.

ಎಸ್. ಎಸ್. ಹಿರೇಮಠ
ಪ್ರಾಚಾರ್ಯರು, ಕೊಟ್ಟೂರೇಶ್ವರ ಮಹಾವಿದ್ಯಾಲಯ, ಕೊಟ್ಟೂರು - ೫೮೩ ೧೩೪

# ರೈಲಿನ ಅಂತರಂಗ – ಬಹಿರಂಗ



**ಈ** ದೇಶವನ್ನು ಅರಿಯಬೇಕೆಂದರೆ
ನೀವು ಎರಡನೇ ದರ್ಜೆಯ ರೈಲಿನಲ್ಲೊಮ್ಮೆ
ಪ್ರಯಾಣಿಸಿ, ಕಿಟಕಿಗಳು ತೆರೆದಿರಲಿ

ನಾಗರಿಕತೆಯ ಜೀವನಾಡಿ ರೈಲು
ಓಡುವುದು ಹಳಿಯ ಮೇಲೆಯೆ; ಆದರೂ
ನಾಡಿನ, ಕಾಡಿನ, ನೀರಿನ, ಚಾರಿತ್ರ್ಯವನ್ನೆಲ್ಲ
ಅಯಸ್ಕಾಂತದಂತೆ ತನ್ನತ್ತ ಸೆಳೆದು ಬಿತ್ತರಿಸುತ್ತದೆ
ಬಣ್ಣವಾಗಿ, ವಾಸನೆಯಾಗಿ, ಹೊಗೆಯಾಗಿ

ಊರು ಸಮೀಪಿಸುತ್ತಿದ್ದಂತೆ
ಆಸುಪಾಸು ಕೊಳೆಗೇರಿಗಳು ಹಾಸಿರುತ್ತವೆ
ಮೊದಲು ಹಾಸಿದ್ದು ಹಳಿಯನ್ನೊ ಅಥವಾ ಸ್ಲಮ್ಮನ್ನೊ?
ಅದು ಬೀಜವೃಕ್ಷ ನ್ಯಾಯದಂತೆ
ನಿಮ್ಮ ತಲೆಹೊಕ್ಕರೆ ಮುಗಿಯಿತು

ನಿಲ್ದಾಣದಲ್ಲಿ ಕಬ್ಬಿಣದ ಗಾಲಿ
ಜೋಲಿ ಹೊಡೆದು ನಿಲ್ಲುತ್ತಿದ್ದಂತೆ
ಮಲಮೂತ್ರಾದಿ ಮಾನವ ತ್ಯಾಜ್ಯ
ಸತ್ತ ಮಾರ್ಜಾಲ ಮಿಕ್ಸಿನ ಘಾಟು

ಮೂಗು ಹಿಡಿದು ಕುಳಿತರೆ
ಮತ್ತೆ ಮಲೆತು ಚಲಿಸುವುದು ರೈಲು ನಿಧಾನ
ಮಾಡಿಸಿ ಮುಖಮುಚ್ಚಿ ಕುಳಿತವರ ಹಿಂದೆ ಹಂದಿಗಳ ದರ್ಶನ
ಬೆಳಗಾಯಿತೆಂದರೆ ಸಾಕು
ಭಾರತ ಬೆಳಗುತ್ತದೆ ಅಲ್ಲಿ

ಹೂವುಗಳು ಸೂರ್ಯನ ಕಡೆಗೇ ಹೊರಳುತ್ತವೆ!
ಗಟಾರಗಳು ರೈಲು ನಿಲ್ದಾಣದತ್ತಲೇ ಹೊರಳುತ್ತವೆ!!



-೨-

ರೈಲಿನ ಅಂತರಂಗವನ್ನೊಮ್ಮೆ ಬಿಚ್ಚಿನೋಡಿ
ಇಡೀ ಭಾರತವನ್ನು ಏಕತ್ರಗೊಳಿಸುವ ಐಕ್ಯಕ ಸಂಕೇತ
ಉಪಮೆಗಿಲ್ಲ ಸಾಟಿ, ಬುಸುಗುಟ್ಟುವ ಹಾವೇ
ಅಪ್ಪಟ ಜಾತ್ಯತೀತ ಪ್ರತಿಮೆ, ಕೇರಿಗಳಿಲ್ಲ ಒಳಗೆ

ಅಂಧ ಭಿಕ್ಷುಕನೊಬ್ಬನ ಹಿಂದೂಸ್ತಾನಿ
ಹೆಳವನ ಮೆಚ್ಚಿನ ಚಿತ್ರಗೀತೆ ಎಲ್ಲ ಲಭ್ಯ
ಬಾಲಕನೊಬ್ಬ ಬಲ ಮೊಣಕೈ ಚಿಪ್ಪನ್ನು ಕಂಕುಳ ಚೀಲಕ್ಕೆ ಸರಿಸಿ
ಅಂಗಿ ಬಿಚ್ಚಿ ಎಡಗೈಲಿ ನೆಲಗುಡಿಸುತ್ತಾ ಅನುಕಂಪದ ಕಾಸು ಗಿಟ್ಟಿಸಿ
ಸೀಟಿಯ ಸದ್ದಿಗೆ ಚೆಂಗನೆ ಹೊರಗೆ ಜಿಗಿಯುವ
ಮೋಸದಾಟದ ಮೋಜು ಮತ್ತೆಲ್ಲೂ ಕಾಣಸಿಗದು

ಅಪ್ರಾಪ್ತ ವಯದ ಬಾಣಂತಿ ಹಸುಗೂಸಿನ
ಹಾಲುಗಲ್ಲಕ್ಕೆ ಮಸಿ ಬಳಿದು ತುಂಬಿಸಿಕೊಳ್ಳುವಳು ಜೋಳಿಗೆ
ರಾತ್ರಿ ಮತ್ತೊಬ್ಬ ಬಿಕನಾಸಿಯ ತೊಳ್ಳೆಯ ಹಸಿವೆಗೆ ಆಹಾರವಾಗುವುದಕ್ಕೆ
ಉದರಂಭರಣಕ್ಕೇನೆಲ್ಲ ಅಧೋ ಮಾರ್ಗಗಳು!

ಒರಿಸ್ಸಾದಲ್ಲಿ ಹತ್ತಿದ ಡೆಂಗೆ ಜ್ವರದ ಸೊಳ್ಳೆ
ಕೇರಳದಲ್ಲಿ ಕಚ್ಚಬಹುದು
ದೆಹಲಿಯಿಂದಲೂ ಗೂರಕೆ ಹೊಡೆದ ಇಲಿ
ವೈರಸುಗಳನ್ನು ಹೈದರಾಬಾದಿನಲ್ಲಿ ಕೊಡವಬಹುದು

ಇರಲಿ ಜಿರಲೆ ಇತ್ಯಾದಿ ತರಲೆ
ಸುತ್ತಲೂ ಮುತ್ತುವ ನೊಣಗಳ ನಡುವೆ
ನಡೆಯುವ ಸುಗ್ರಾಸ ಭೋಜನ ವಿನ್ಯಾಸಗಳ ನೋಡಿ
'ಓ ನನ್ನ ಮಹಾನ್ ಭಾರತವೇ' ಎಂದು ಕಿರುಚದಿರಿ.

ಹದಿನೆಂಟೂ ದೇಶಭಾಷೆಗಳಲ್ಲಿ ಮೊಬೈಲೆಂಬ
ಮುಷ್ಟಿಗತ ವಾಣಿಯ ಉತ್ತರಮುಖೀ ಪ್ರಲಾಪಕ್ಕೆ
ಬೆಚ್ಚದಿರಿ, ಶಬ್ದಮಾಲಿನ್ಯದ ಪಾಠ
ಇಲ್ಲ ಪ್ರಾಥಮಿಕ ಪಠ್ಯದಲ್ಲಿ

ಕಿಡಿಗೇಡಿಗಳು
ರೈಲಿಗೇ ಯಾಕೆ ಬಾಂಬಿಡುತ್ತಾರೆಂದರೆ
ಅದು ಓಡಾಡುವ ಭಾರತ ಅದಕ್ಕೆ!!

ಡಾ|| ಮೂಡ್ನಾಕೂಡು ಚಿನ್ನಸ್ವಾಮಿ
ಮುಖ್ಯ ಲೆಕ್ಕಾಧಿಕಾರಿ ಹಾಗೂ ಐ.ಸಿ.,
ಈ.ಕ.ರ.ಸಾ. ಸಂಸ್ಥೆ, ಕೇಂದ್ರ ಕಛೇರಿ, ಗುಲಬುರ್ಗಾ

# ಚಂದ್ರಗಿರಿಗೆ ಮತ್ತೊಂದು ಗರಿ

"ತಮ್ಮ ಹೆಂಗಸರಿಗೆ ಕಾಯಿಲೆಯಾದರೆ ಮಹಿಳಾ ವೈದ್ಯೆಯರನ್ನೇ ಹುಡುಕಿಕೊಂಡು ಹೋಗುವ ನಮ್ಮ ಗಂಡಸರು ತಮ್ಮ ಹೆಣ್ಣುಮಕ್ಕಳನ್ನು ಹೈಸ್ಕೂಲಿಗೂ ಕಳುಹಿಸಲು ಒಪ್ಪುವುದಿಲ್ಲ! ಮ್ಯಾಡಂ ಕ್ಯೂರಿ, ಕ್ರಿಸ್ ಎವರ್ಟ್ ಅಥವಾ ವ್ಯಾಲೆಂಟೀನಾ ಆಗದಿದ್ದರೆ ಹೋಗಲಿ 'ಮಿಲ್ಸ್ ಎಂಡ್ ಬೂನ್' ಲೇಖಕಿಯರಂತಾದರೂ ಆಗಲು ನಮ್ಮ ಈ ಹೆಣ್ಣುಮಕ್ಕಳು ಎಂದಾದರೂ ಪ್ರಯತ್ನಿಸುವರೇ. ಅಜ್ಞಾನದ ಕತ್ತಲ ಗುಹೆಯಿಂದ ಇವರು ಎಂದಾದರೂ ಹೊರಬರಲು ಸಾಧ್ಯವೇ ಎಂದು ನಾನು ಕೆಲವೊಮ್ಮೆ ದೀರ್ಘವಾಗಿ ಯೋಚಿಸುತ್ತೇನೆ" ಎಂದು ಬರೆದಿರುವ ಕನ್ನಡದ ಅಪರೂಪದ ಲೇಖಕಿ ಸಾರಾ ಅಬೂಬಕ್ಕರ್ ಕೂಡ ಇಂತಹುದೇ ಅವಕಾಶವಂಚಿತ ಪರಿಸರದಲ್ಲಿ ಹುಟ್ಟಿ ಬೆಳೆದವರು. ಆದರೆ 'ಮಿಲ್ಸ್ ಎಂಡ್ ಬೂನ್' ಲೇಖಕಿಯಾಗಲಿಲ್ಲ ಅಷ್ಟೆ. ಕನ್ನಡ ಸಾಹಿತ್ಯ ಲೋಕವು ಕೊಡಮಾಡುವ ಬಹುಪಾಲು ಎಲ್ಲ ಪ್ರತಿಷ್ಠಿತ ಪ್ರಶಸ್ತಿಗಳನ್ನು ತಮ್ಮ ಮುಡಿಗೇರಿಸಿಕೊಂಡವರು ಇವರು. ಆ ಸಾಲಿನಲ್ಲಿ ಇತ್ತೀಚೆಗೆ ಅವರನ್ನು ಅಲಂಕರಿಸಿದ್ದು ನಂಜನಗೂಡು ತಿರುಮಲಾಂಬ ಪ್ರಶಸ್ತಿ. ಸುವರ್ಣ ಕರ್ನಾಟಕ ವರ್ಷದಲ್ಲಿ ಈ ರಾಷ್ಟ್ರೀಯ ಪ್ರಶಸ್ತಿಯಿಂದ ಸನ್ಮಾನಿತರಾದ ಕನ್ನಡ ಲೇಖಕಿ ಸಾರಾ ಅಬೂಬಕ್ಕರ್‌ರವರನ್ನು ಇತ್ತೀಚೆಗೆ 'ಹೊಸತು' ಪತ್ರಿಕೆಗೆ ಸಂದರ್ಶಿಸಲಾಯಿತು. ಸಂದರ್ಶಿಸಿ ಲೇಖನ ಸಿದ್ಧಪಡಿಸಿದವರು ಡಾ॥ ಎನ್. ಗಾಯತ್ರಿ.

**ಹೊಸತು** : ನಿಮಗೆ ತಿರುಮಲಾಂಬ ಪ್ರಶಸ್ತಿಯ ಸನ್ಮಾನ ದೊರಕಿದ ಈ ಸಂದರ್ಭದಲ್ಲಿ 'ಹೊಸತು' ಪರವಾಗಿ ಅಭಿನಂದನೆಗಳು.

**ಸಾರಾ** : ಬಹಳ ಸಂತೋಷ, ವಂದನೆಗಳು.

**ಹೊಸತು** : ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸವು ಅಲಭ್ಯವಾಗಿದ್ದ ಪರಿಸರದಲ್ಲಿ ಜನಿಸಿರುವ ನೀವು ವಿದ್ಯಾವಂತೆಯಾಗಿ, ಲೇಖಕಿಯಾಗಿ ರೂಪುಗೊಂಡ ಬಗೆ ಹೇಗೆ ?

**ಸಾರಾ** : ನನ್ನ ಮನೆಯ ಪರಿಸರದಲ್ಲಿ ವಿದ್ಯಾಭ್ಯಾಸಕ್ಕೆ ಪ್ರಾಶಸ್ತ್ಯವಿತ್ತು. ನನ್ನ ತಾತ ೧೯೩೦-೪೦ರ ಕಾಲಕ್ಕಾಗಲೇ 'ಮಾತೃಭೂಮಿ' ಪತ್ರಿಕೆಯನ್ನು ತಪ್ಪದೆ ದಿನವೂ ಓದುತ್ತಿದ್ದರು. ಧಾರ್ಮಿಕ ಗ್ರಂಥಗಳನ್ನು ಚೆನ್ನಾಗಿ ತಿಳಿದುಕೊಂಡಿದ್ದರು. ಅವರು ಎಂದೂ ಮತಾಂಧ ರಾಗಿರಲಿಲ್ಲ. ಮನೆಯ ತೋಟದಲ್ಲಿ ಕೆಲಸ ಮಾಡಲು ಬರುತ್ತಿದ್ದ ಎಲ್ಲಾ ಜಾತಿ, ಧರ್ಮ ದವರನ್ನು ತಮ್ಮ ಮನೆಯವರಂತೆಯೇ ಕಾಣುತ್ತಿದ್ದರು. ನನ್ನ ತಾತನ ಆರು ಜನ ಗಂಡು ಮಕ್ಕಳಲ್ಲಿ ನನ್ನ ತಂದೆಯೇ ಹಿರಿಯರು. ಆಗಲೇ ಎರಡು ಪದವಿ ಪಡೆದು ಬಿ.ಎಲ್. ತರಗತಿಯಲ್ಲಿ 'ಮಹಮಡನ್ ಲಾ'ದಲ್ಲಿ ಮದ್ರಾಸು ವಿಶ್ವವಿದ್ಯಾಲಯದ ಚಿನ್ನದ ಪದಕವನ್ನು ಗಳಿಸಿದ್ದರು. ಇಂತಹ ವಿದ್ಯಾವಂತ ತಂದೆಯ ಮಗಳಾದ ನನಗೆ ವಿದ್ಯಾಭ್ಯಾಸ ಪಡೆಯುವುದೇನೂ ಕಷ್ಟವಾಗಲಿಲ್ಲ. 'ಮಗಳಿಗೆ ೧೬ ವರ್ಷವಾಗದೆ, ಎಸ್.ಎಸ್.ಎಲ್.ಸಿ. ಮಾಡಿಸದೆ ಮದುವೆಯನ್ನು ಮಾಡುವುದಿಲ್ಲ' ಎಂದು ನಿರ್ಧರಿಸಿದ್ದ ತಂದೆಯ ತೀರ್ಮಾನವೇ ನಾನು ವಿದ್ಯಾವಂತೆಯಾಗಲು ಕಾರಣವಾದದ್ದು. ನಾನು ಶಾಲೆಯಲ್ಲಿದ್ದಾಗ ತುಂಬಾ ಕತೆ ಪುಸ್ತಕಗಳನ್ನು ಓದುತ್ತಿದ್ದೆ. ಜೊತೆಗೆ ನನ್ನಮ್ಮ ಹಾಡಿನ ರೂಪದಲ್ಲಿರುವ ಪ್ರವಾದಿಗಳ ಕತೆಗಳನ್ನು ಹಾಡಿ ಹೇಳುತ್ತಿದ್ದರು. ಸಬೀನಾ ಎನ್ನುವ ಈ ಜಾನಪದ ಹಾಡುಗಳು ನನಗೆ ತುಂಬಾ ಇಷ್ಟವಾಗುತ್ತಿದ್ದವು. ಹೀಗೆ ಓದುತ್ತಾ, ಕೇಳುತ್ತಾ ನಾ ಬೆಳೆದೆ.

**ಹೊಸತು** : ಇಲ್ಲಿಯವರೆಗೆ ನೀವು ಬರೆದಿರುವ ಕತೆ, ಕಾದಂಬರಿಗಳ ಅನುಭವದ್ರವ್ಯ ಮುಖ್ಯವಾಗಿ ಯಾವುದು ?

**ಸಾರಾ** : ನಾನು ಕಾಲ್ಪನಿಕ ಸಂಗತಿಗಳನ್ನು ಕುರಿತು ಬರೆದದ್ದು ಬಹಳ ಕಡಿಮೆ. ಒಂದೆರಡು ಇರಬಹುದು. ಆದರೆ ಮುಖ್ಯವಾಗಿ ನಾನು ಬದುಕಿನಲ್ಲಿ ಕಂಡ ನೈಜ ಘಟನೆಗಳನ್ನೇ ನನ್ನ ಬರವಣಿಗೆಗೆ ವಸ್ತುವನ್ನಾಗಿ ಆರಿಸಿಕೊಂಡಿರುವುದು. ನನ್ನ ತಂದೆ ಲಾಯರ್. ಅವರ ಬಳಿ ಹಲವಾರು ಜನರು ತಮ್ಮ ಸಮಸ್ಯೆಗಳನ್ನು ಚರ್ಚಿಸುತ್ತಿದ್ದರು; ಪರಿಹಾರಕ್ಕಾಗಿ ಬರುತ್ತಿದ್ದರು. ತಲಾಖ್ ಮತ್ತಿತರ ಸಮಸ್ಯೆಗಳನ್ನು ಚರ್ಚಿಸುತ್ತಿದ್ದರು. ಒಂದೊಂದು ಘಟನೆಯೂ ಒಂದೊಂದು ಕತೆಗೆ ವಸ್ತುವಾಗುವಂತಿರುತ್ತಿತ್ತು. ನನ್ನ ತಾಯಿ ತುಂಬ ಸಮಾಜಮುಖಿ. ಅವರು ಬೇರೆಯವರ ಕಷ್ಟಕ್ಕೆ ಕರಗುತ್ತಿದ್ದರು. ನನ್ನ ಕಾದಂಬರಿ 'ವಜ್ರಗಳು'ನಲ್ಲಿ ಬರೆದಿರುವ ಕತೆ ನಿಜವಾದ ಘಟನೆ. ಗಂಡುಮಕ್ಕಳಿಂದ ಮೋಸಕ್ಕೊಳಗಾದ ಆ ತಾಯಿ ನನ್ನಮ್ಮನ ಬಳಿ ಬಂದು ಕಣ್ಣೀರುಗರೆದು ತನ್ನ ಗೋಳು ಹೇಳಿಕೊಂಡಾಗ ನನ್ನಮ್ಮ ತುಂಬಾ ನೊಂದುಕೊಂಡಿದ್ದರು. ಆ ಕತೆ ನನ್ನ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿದಿತ್ತು. ಇನ್ನು 'ಚಂದ್ರಗಿರಿಯ ತೀರದಲ್ಲಿ' ಕಾದಂಬರಿಯೂ ಅಷ್ಟೇ. ನಮ್ಮ ಮನೆಯ ಕೆಲಸಕ್ಕಿದ್ದ ಹುಡುಗಿಯೊಬ್ಬಳ ಕತೆ. ಧರ್ಮದ ಉರಿ ತಾಕಿ ಉರಿದುಹೋದ ಹುಡುಗಿಯ ಕತೆ. ನಾನು ಈ ಪುಸ್ತಕ ಬರೆದಾಗ ಸಾಕಷ್ಟು ವಿರೋಧ ಬಂತು. ನಮ್ಮ ಧಾರ್ಮಿಕ ಆಚರಣೆಯಲ್ಲಿ ಇಲ್ಲದ್ದನ್ನು ಕುರಿತು ಬರೆದೆ; ಅಗ್ಗದ ಪ್ರಚಾರಕ್ಕಾಗಿ ಬರೆದೆ ಎಂದೆಲ್ಲಾ ಟೀಕಿಸಿದವರು ಇದ್ದರು. ಆದರೆ ಇತ್ತೀಚೆಗೆ ಒರಿಸ್ಸಾದಲ್ಲಿ ಇಂತಹ ಘಟನೆ ನಡೆದಿದೆಯೆಂದು ವರದಿಯಾಗಿದೆ. ನೀವೂ ಪತ್ರಿಕೆಗಳಲ್ಲಿ ಓದಿರಬಹುದು. ರಾತ್ರಿ ಕುಡಿದು ಬಂದ ಗಂಡ ಹೆಂಡತಿಗೆ ತಲಾಖ್ ಕೊಟ್ಟ. ಮಾರನೇ ದಿನ ಊರಿನವರೆಲ್ಲಾ ಸೇರಿ 'ಅವಳು ಗಂಡನೊಂದಿಗೆ ಬಾಳಲು ಸಾಧ್ಯವಿಲ್ಲ. ಬಾಳಬೇಕಾದರೆ ಮತ್ತೊಬ್ಬನನ್ನು ಮದುವೆಯಾಗಿ ತಲಾಖ್ ಪಡೆದಿರಬೇಕು' ಎಂದರು.



ಸಾರಾ ಅಬೂಬಕ್ಕರ್, ಡಾ॥ ಎನ್. ಗಾಯತ್ರಿ

**ಹೊಸತು** : ನೀವು 'ಚಂದ್ರಗಿರಿಯ ತೀರದಲ್ಲಿ' ಕಾದಂಬರಿ ಬರೆದಾಗ ಮಂಗಳೂರಿನಲ್ಲಿ ಸಭೆಯೊಂದರಲ್ಲಿ ನಿಮ್ಮ ವಿರುದ್ಧ ಪ್ರತಿಭಟನೆಯ ಗಲಾಟೆಯಾಯಿತಲ್ವಾ, ಅದು ಏನು ?

**ಸಾರಾ** : ಹೌದು. ಪುತ್ತೂರಿನ ಪ್ರಗತಿಪರ ಸಂಘಟನೆಯವರು 'ಜನಾಂಗೀಯ ಅಧ್ಯಯನ' ಎನ್ನುವ ವಿಚಾರ ಸಂಕಿರಣ ಏರ್ಪಡಿಸಿದ್ದರು. ವಿವೇಕ ರೈ ಅದರ ಅಧ್ಯಕ್ಷತೆ ವಹಿಸಿದ್ದರು. ನನಗೆ 'ಕರಾವಳಿಯಲ್ಲಿ ಮುಸ್ಲಿಂ ಮಹಿಳೆಯರು' ಎನ್ನುವ ವಿಷಯ ಕುರಿತು ಮಾತನಾಡಲು ಕೇಳಿದ್ದರು. ಎಂದೂ ಸಭೆ, ಸೆಮಿನಾರ್‌ಗಳಲ್ಲಿ ನಾನು ಮಾತನಾಡಿದವಳಲ್ಲ. ವೇದಿಕೆ ಹತ್ತಿಯೇ ಗೊತ್ತಿಲ್ಲ. ಆದರೂ ನನಗೆ ಗೊತ್ತಿದ್ದನ್ನು ಹೇಳುವಾ, ಎಂದು ಅಲ್ಲಿಗೆ ಹೋಗಿದ್ದೆ. ಪುತ್ತೂರು ಧಾರ್ಮಿಕವಾಗಿ ಪ್ರಬಲ ಶಕ್ತಿಗಳು ಇರುವ ಊರು. ಸಭೆ ಆರಂಭವಾಯಿತು. ಮೊದಲಿನ ಒಂದೆರಡು ಪ್ರಬಂಧಗಳು ಆದ ಮೇಲೆ ನನ್ನ ಸರದಿ ಬಂದು ಮಾತನಾಡಲು

ಆರಂಭಿಸಿದಾಗ 'ನೀವು ಬುರ್ಖಾ ಹಾಕಿಲ್ಲ. ಆದ್ದರಿಂದ ನೀವು ಮುಸ್ಲಿಮರಲ್ಲ. ಮುಸ್ಲಿಂ ಮಹಿಳೆಯ ಬಗ್ಗೆ ನೀವೇನು ಮಾತಾಡೋದು' ಎಂದು ಗಲಾಟೆ ಆರಂಭಿಸಿದರು. ಕುರ್ಚಿ ಎತ್ತಿಹಾಕಿದರು. ಕೂಗೋದಕ್ಕೆ ಆರಂಭಿಸಿದರು. ಆ ಸಭೆಯಲ್ಲಿ ಬೋಳುವಾರ್, ಕಟ್ಟಾಡಿ ಕೂಡ ಇದ್ದರು. ಕಟ್ಟಾಡಿ ನನ್ನ ಮುಂದೆ ಬಂದು ಅಡ್ಡವಾಗಿ ನಿಂತು ಯಾರೂ ನನಗೆ ಏನೂ ಮಾಡದಂತೆ ತಡೆದರು. ಅಷ್ಟೇ ಗಲಾಟೆ. ಇದು ಒಂದು ರೀತಿಯಲ್ಲಿ ಪೂರ್ವ ಸಿದ್ಧತೆಯೊಂದಿಗೆ ಆದ ಘಟನೆ. ಸಂಘಟಕರಿಗೂ ಇದರ ಸುಳಿವು ಸಿಕ್ಕಿತ್ತು. ನನಗೆ ತಿಳಿಸಿರಲಿಲ್ಲ ಅಷ್ಟೆ. ನಾನು ಭಾಷಣ ಪೂರ್ತಿಮಾಡದೆ ಅಧ್ಯಕ್ಷ ಭಾಷಣವೂ ನಡೆಯದೆ ಸಭೆ ಮುಕ್ತಾಯವಾಯಿತು. ಯಾವಾಗಲೂ ವಿವೇಕ ರೈ ತಮಾಷೆಯಾಗಿ ಹೇಳುತ್ತಿರುತ್ತಾರೆ, ನಾನು ಅಧ್ಯಕ್ಷತೆ ವಹಿಸಿಯೂ ಅಧ್ಯಕ್ಷ ಭಾಷಣ ಮಾಡದೇ ಹೋದ ಸಭೆ ಅದು ಎಂದು.

**ಹೊಸತು :** ಈ ಘಟನೆಯ ಬಗ್ಗೆ ನಿಮ್ಮ ಕುಟುಂಬದವರ ಪ್ರತಿಕ್ರಿಯೆ ಏನು ?

**ಸಾರಾ :** ಪ್ರತಿಕ್ರಿಯೆಯೆಂದರೆ ಬೇಸರವಾಯಿತು. ಆ ಸಭೆಯಲ್ಲಿ ನನ್ನ ಪತಿಯೂ ಇದ್ದರು. ಗಾಬರಿಗಿಂತ ಹೆಚ್ಚಾಗಿ ಬೇಜಾರು ಮಾಡಿಕೊಂಡರು ಅಂತ ಹೇಳಬಹುದು. ಈ ಘಟನೆ ಪತ್ರಿಕೆಯಲ್ಲಿ ಓದಿದ ತಕ್ಷಣ ನನ್ನ ತಮ್ಮ ಓಡಿಬಂದ. ನನ್ನನ್ನು ಸಂತೈಸಿದ. ಇದು ಒಂದು ರೀತಿಯಲ್ಲಿ ನನಗೆ ದಿಢೀರ್ ಪ್ರಸಿದ್ಧಿ ತಂದುಕೊಟ್ಟಿತು. ನನ್ನನ್ನು 'ಲೇಖಕಿ' ಎಂದು ಪರಿಚಯಿಸಿತು.

**ಹೊಸತು :** ಇದಕ್ಕೆ ಮುಂಚೆ ನೀವು ಏನೂ ಬರೆದಿರಲಿಲ್ಲವಾ ?

**ಸಾರಾ :** ಒಂದೆರಡು ಕಥೆಗಳನ್ನು ಬರೆದಿದ್ದೆ. ಅಲ್ಲದೆ, 'ಮುಸ್ಲಿಂ ಹುಡುಗಿಯ ಸ್ಪಂದನ' ಮತ್ತು ನಜ್ಮಾ ಭಾಂಗಿಯ ಪ್ರಕರಣ ಕುರಿತ ಲೇಖನಗಳು ಲಂಕೇಶ್ ಪತ್ರಿಕೆಯಲ್ಲಿ ಪ್ರಕಟವಾಗಿದ್ದವು.

**ಹೊಸತು :** ನಿಮ್ಮೆಲ್ಲ ಕಾದಂಬರಿಗಳು ಲಂಕೇಶ್ ಪತ್ರಿಕೆಯಲ್ಲಿಯೇ ಪ್ರಕಟವಾದದ್ದಲ್ಲವಾ ?

**ಸಾರಾ :** ಹೌದು, ಲಂಕೇಶ್ ಪತ್ರಿಕೆ ಇಲ್ಲದಿದ್ದರೆ ನಾನು ಲೇಖಕಿಯೇ ಆಗುತ್ತಿರಲಿಲ್ಲವೇನೋ ! ಅವರು ನನಗೆ ಕೊಟ್ಟ ಪ್ರೋತ್ಸಾಹ ಎಂದೂ ಮರೆಯಲು ಸಾಧ್ಯವಿಲ್ಲ. ಪ್ರಾರಂಭದಲ್ಲಿ ನನಗೆ ನನ್ನ ಕತೆ, ಕಾದಂಬರಿಗಳು ಇತರ ಜನಪ್ರಿಯ ಪತ್ರಿಕೆಗಳಲ್ಲಿ ಪ್ರಕಟಗೊಳ್ಳಲಿ ಎನ್ನುವ ಆಸೆಯಿತ್ತು. ಬರೆದು ಕಳುಹಿಸಿದ್ದೆ ಕೂಡ. ಆದರೆ ಯಾರೂ ಪ್ರಕಟಿಸಲಿಲ್ಲ.

**ಹೊಸತು :** ನಿಮ್ಮ ಮನೆಮಾತು ಮಲೆಯಾಳಂ ಅಲ್ವಾ? ನೀವು ಆ ಭಾಷೆಯಲ್ಲಿ ಏಕೆ ಕೃತಿ ರಚಿಸಿಲ್ಲ?

**ಸಾರಾ :** ಮಲೆಯಾಳಂ ಮಾತಾಡುತ್ತೀನಿ, ಓದುತ್ತೀನಿ. ಆದರೆ ನನಗೆ ಬರೆಯಕ್ಕೆ ಬರಲ್ಲ. ಎರಡನೆಯ ತರಗತಿಯವರೆಗೂ ಅಜ್ಜಿಯ ಮನೆಯಲ್ಲಿದ್ದಾಗ ಮಲೆಯಾಳಂ ಓದಿದೆ. ಮೂರನೆಯ ತರಗತಿಯಿಂದ ತಾಯಿಯ ಮನೆಯಲ್ಲಿಯೇ ಕಾಸರಗೋಡಿನ ಕನ್ನಡ ಶಾಲೆಯಲ್ಲಿ ಓದಿದ್ದು. ಚಿಕ್ಕಂದಿನಿಂದಲೂ ಕತೆ ಪುಸ್ತಕ ಓದುವ ಹುಚ್ಚು. ಇದು ನನ್ನ ಹೆಣ್ಣು ಮೊಮ್ಮಕ್ಕಳಿಗೆ ಬಂದಿದೆ. ಮೊಮ್ಮಗಳೊಬ್ಬಳು ಒಂದೆರಡು ಕತೆ ಅನುವಾದ ಮಾಡಿದ್ದಾಳೆ. ಆದರೆ ಗಂಡು ಮೊಮ್ಮಕ್ಕಳು ಯಾರೂ ಅಷ್ಟು ಓದುವ ಹುಚ್ಚು ಬೆಳೆಸಿಕೊಂಡಿಲ್ಲ.

**ಹೊಸತು :** ನಿಮ್ಮ ಕತೆ, ಕಾದಂಬರಿಗಳಲ್ಲಿ ಮುಸ್ಲಿಂ ಧರ್ಮದ ಕುರುಡು ಆಚರಣೆಗಳಿಂದ ನೋಯುವ ಹೆಣ್ಣಿನ ಕತೆಗಳಿವೆ. ಆದರೆ ಸಮಾಜದ ಸಮಗ್ರ ಅನುಭವದ ಭಾಗವಾಗಿ ಈ ವಸ್ತುಗಳು ಚಿತ್ರಿತವಾಗಿಲ್ಲ. ಅದಕ್ಕೇನಾದರೂ ವಿಶಿಷ್ಟವಾದ ಕಾರಣಗಳಿವೆಯೇ ?

**ಸಾರಾ :** ಹಾಗಂತ ವಿಶೇಷ ಕಾರಣವೇನಿಲ್ಲ. ಆದರೆ ನನ್ನ ಮುಂದೆ ಕಂಡ ನೋವಿನ ಕತೆಯನ್ನು ಅಷ್ಟೇ ಕೇಂದ್ರೀಕರಿಸಿ ನಾನು ಕಥೆ ಬರೆದಿದ್ದೀನಿ.

**ಹೊಸತು :** ನೀವು ವಾಸಮಾಡುತ್ತಿರುವ ಜಾಗದಲ್ಲಿ ಕೋಮು ಸಂಘರ್ಷದ ಬಿಸಿಯಾದ, ಬಿಗುವಾದ ವಾತಾವರಣ ಸದಾ ನೆಲೆಸಿದೆ. ಹಾಗೂ ಸಾಕಷ್ಟು ಕೋಮು ಗಲಭೆಗಳು, ಕಲಹಗಳು ನಡೆಯುತ್ತಲೇ ಇರುತ್ತವೆ. ಆದರೂ ಇವು ವಿಶೇಷವಾಗಿ ನಿಮ್ಮ ಬರವಣಿಗೆಯ ವಸ್ತುವಾಗಿಲ್ಲ ಏಕೆ ?

**ಸಾರಾ :** ಹಾಗೇನಿಲ್ಲ, 'ಪ್ರವಾಹ ಸುಳಿ' ಕಾದಂಬರಿಯಲ್ಲಿ ಒಂದು ಪ್ರಸಂಗ ಬರುತ್ತದೆ. ಒಂದೆರಡು ಕಥೆಗಳು, 'ಹಳೇಬೇರು-ಹೊಸಚಿಗುರು' ಹಾಗೂ ಇನ್ನೊಂದು ಕತೆಯಲ್ಲಿ ಈ ವಸ್ತು ಆಯ್ದುಕೊಂಡಿದ್ದೇನೆ.



**ಹೊಸತು :** ಮುಸ್ಲಿಂ ಮಹಿಳೆಯರ ಹಕ್ಕುಗಳ ಸಮರ್ಥನೆಗಾಗಿಯೇ ಒಂದು ಸಂಘಟನೆ ಬೇಕು, ಎಂದು ನಿಮಗನಿಸುತ್ತದೆಯೆ ?

**ಸಾರಾ :** ಸಂಘಟನೆಯಾದರೆ ಒಳ್ಳೆಯದು. ಆದರೆ ಅಂತಹ ಸಂಘಟನೆ ಮಾಡಲು ಯಾರು ಬಿಡುತ್ತಾರೆ? ಪುರುಷರು ತಮ್ಮ ಹಕ್ಕುಗಳು ಮೊಟಕಾಗುತ್ತೆ ಅಂತ ಗೊತ್ತಾದರೆ ಕೂಡಲೆ ಇಂತಹ ಸಂಘಟನೆ ಬರೋಕೆ ಬಿಡಲ್ಲ. 'ಮುಸ್ಲಿಂ ಪ್ರಗತಿ ಪರಿಷತ್ತು' ತರಹದ ಸಂಘಟನೆಯನ್ನು ಕರ್ನಾಟಕದಲ್ಲಿಯೂ ಆರಂಭಿಸಬೇಕು ಅಂತ ಪ್ರಯತ್ನ ನಡೆದಿತ್ತು. ಆದರೆ ಮೂಲಭೂತವಾದಿ ಸಂಘಟನೆಗಳು, ಮತಾಂಧ ಸಂಘಟನೆಗಳು ಇಂತಹ ಪ್ರಯತ್ನವನ್ನು ಆರಂಭದಲ್ಲಿಯೇ ಚಿವುಟಿಹಾಕಿದವು.

**ಹೊಸತು :** ಹಾಗಾದರೆ ನಿಜವಾದ ಸಮಸ್ಯೆ ಎಲ್ಲಿದೆ ? ಅದಕ್ಕೆ ಪರಿಹಾರವೇನು ?

**ಸಾರಾ :** ಸಮಸ್ಯೆಯಿರುವುದು ಹೆಂಗಸರನ್ನು ಕತ್ತಲಲ್ಲೇ ಇಡುವುದರಲ್ಲಿ. ಅವರಿಗೆ ವಿದ್ಯಾಭ್ಯಾಸ ಬೇಡ. ಮನೆಯಿಂದ ಹೊರಗೆ ಬರುವುದು ಬೇಡ. ಕುಟುಂಬ ಯೋಜನೇನೂ ಬೇಡ. ಮಕ್ಕಳನ್ನು ಹೆತ್ತುಕೊಂಡು, ಅವರನ್ನು ನೋಡಿಕೊಂಡು, ಮನೇನೂ ನೋಡಿಕೊಂಡು ಮನೆಯೊಳಗಿದ್ದರೆ ಸಾಕು, ಎನ್ನುವ ಭಾವನೆ ಪುರುಷರದು. ಹೆಂಗಸರಿಗೆ ಎಲ್ಲಾ ಸುಖ ಆ ಪರಲೋಕದಲ್ಲಿ ಸಿಗುತ್ತೆ; ಆ ಸುಖದ ನೆನಪು ಮಾಡಿಕೊಂಡು ಇಲ್ಲಿ ಕತ್ತಲೆಯಲ್ಲಿ ಇರಬೇಕು. ಅದಕ್ಕೆ ಶರೀಯತ್ ಅಂತ ಹೇಳಿ ಏನೂ ಅರ್ಥವಿಲ್ಲದ ಆಚರಣೆಗಳನ್ನು ಅವರ ಮೇಲೆ ಹೇರೋದು. ನಿಜವಾಗಿಯೂ ಪ್ರವಾದಿಗಳು ಹೇಳಿದ್ದು ಚೆನ್ನಾಗಿಯೇ ಇದೆ. ಅದನ್ನು ಯಾರೂ ಓದಲ್ಲ. ತಮಗಿಷ್ಟ ಬಂದಂತೆ ಅದನ್ನು ತಿರುಚುತ್ತಾರೆ.

**ಹೊಸತು :** ಸಮಾನ ಸಿವಿಲ್ ಸಂಹಿತೆ ಬೇಕೆ? ಬೇಡವೆ? – ಎನ್ನುವ ವಾಗ್ವಾದ ನಡೆಯುತ್ತಿರುವ ಇಂದಿನ ಸಂದರ್ಭದಲ್ಲಿ ನಿಮ್ಮ ಅಭಿಪ್ರಾಯವೇನು ?

**ಸಾರಾ :** ವಾದ ಮಾಡೋದು ಏಕೆ ? ಸಮಾನ ಸಿವಿಲ್ ಸಂಹಿತೆ ಬಂದರೆ ನಾವೆಲ್ಲಾ ದಿನಾ ದೇವಸ್ಥಾನಕ್ಕೆ ಹೋಗಬೇಕಾಗತ್ತೆ ಅಂತ ಸುಳ್ಳು ಹೆದರಿಕೆ ವ್ಯಕ್ತಪಡಿಸುತ್ತಾರೆ. ಆದರೆ ಅದು ಸತ್ಯ ಅಲ್ಲ. ಈ ವಿಷಯವಾಗಿ ನಮ್ಮ ಪ್ರವಾದಿಗಳು ಹೇಳಿದ್ದನ್ನು ಅಧ್ಯಯನ ಮಾಡಬೇಕಾಗಿದೆ. ನೋಡಿ ನಮಾಜ್, ಪ್ರಾರ್ಥನೆ, ಧಾರ್ಮಿಕ ಆಚರಣೆಗಳು ಇವೆಲ್ಲಾ ಮುಸ್ಲಿಂ ಧರ್ಮದಂತೆಯೇ ಮಾಡಿಕೊಳ್ಳಿ. ಆದರೆ ಸಿವಿಲ್ ವಿಷಯಗಳು ನೀವು ಯಾವ ನಾಡಿನಲ್ಲಿ ಇರುತ್ತೀರೋ ಆ ನಾಡಿನ ನೆಲದ ಕಾನೂನನ್ನು ಗೌರವಿಸಬೇಕು ಅಂತ. ಆದ್ದರಿಂದ ನಮ್ಮ ಮುಸ್ಲಿಂ ಕಾನೂನಿನಲ್ಲೂ ಕೆಲವು ಒಳ್ಳೆಯ ಅಂಶಗಳಿರುತ್ತವೆ. ಆ ಒಳ್ಳೆಯದನ್ನು ತೆಗೆದುಕೊಂಡು ಉಳಿದ ಧರ್ಮಗಳ ಒಳ್ಳೆಯ ಅಂಶಗಳನ್ನು ತೆಗೆದುಕೊಂಡು ಎಲ್ಲರಿಗೂ ಅನುಕೂಲವಾಗುವಂತಹ ಸಮಾನ ಸಂಹಿತೆ ರೂಪಿಸಬೇಕು. ಅದು ಬಿಟ್ಟು ಇವರೂ ವಾದ ಮಾಡುತಾರೆ, ಅವರೂ ವಾದ ಮಾಡ್ತಾರೇಂತ ವಾದಕ್ಕಾಗಿ ವಾದ ಮಾಡಕೂಡದು. ನಿಜವಾಗಿ ಜನರ ಹಿತ ನೋಡುವುದು ಮುಖ್ಯ.

**ಹೊಸತು :** ನಮ್ಮ ನಡುವಿರುವ ಕೋಮು ಸಂಘರ್ಷ ಕೋಮುಗಲಭೆಗಳಿಗೆ ಪರಿಹಾರದ ಪ್ರಯತ್ನ ಯಾರ ಕಡೆಯಿಂದ ಆರಂಭವಾಗಬೇಕು ?

**ಸಾರಾ :** ನೋಡಿ, ಸರಕಾರದ ಕಣ್ಣಿರುವುದು ವೋಟುಗಳ ಮೇಲೆ. ಅವರಿಂದ ಏನೂ ಮಾಡಲು ಸಾಧ್ಯವಿಲ್ಲ. ಜನಗಳಲ್ಲಿ ತಿಳುವಳಿಕೆ ಮೂಡಬೇಕು. ವಿದ್ಯಾಭ್ಯಾಸ ಪಡೆಯಬೇಕು. ಕೇವಲ ಮದರಸಾಗಳಿಗೆ ಹೋಗುವುದರಿಂದ ವಿದ್ಯಾಭ್ಯಾಸ ಬರುವುದಿಲ್ಲ. ಶಾಲೆಗಳಿಗೆ ಹೋಗಬೇಕು. ನಿಜವಾಗಿ ಜನಗಳು ಕೆಟ್ಟವರೇ ಅಲ್ಲ. ಗಲಾಟೆ ಮಾಡಿಸುವವರು ಬೇರೆಯವರೇ ಇರುತ್ತಾರೆ.

ಎರಡೂ ಧರ್ಮಗಳಲ್ಲಿನ ಮತಾಂಧರು ಗಲಾಟೆ ಎಬ್ಬಿಸುತ್ತಾರೆ. ಮುಸ್ಲಿಮರೂ ಬದಲಾಗಬೇಕು. ಎಲ್ಲರೂ ಸಂವಿಧಾನವನ್ನು ಗೌರವಿಸಬೇಕು. ಹಾಗಂತ ಲೇಖನಗಳನ್ನು ಬರೆದಿದ್ದೀನಿ.

**ಹೊಸತು :** ನೀವು ಕಳೆದ ಇಪ್ಪತ್ತೈದು ವರ್ಷಗಳಿಂದ ಬರವಣಿಗೆಯಲ್ಲಿ ತೊಡಗಿಕೊಂಡಿದ್ದೀರಿ. ಈ ಅವಧಿಯಲ್ಲಿ ಮಹಿಳಾ ವಿದ್ಯಾಭ್ಯಾಸದ ವಿಷಯದಲ್ಲಿ ಎಷ್ಟು ಬದಲಾವಣೆ ಆಗಿದೆ ?

**ಸಾರಾ :** ಬದಲಾವಣೆ ಖಂಡಿತ ಆಗಿದೆ. ಆದರೆ ಇನ್ನೂ ಆಗಬೇಕಿದೆ. ನಮ್ಮ ಕಾಲದಲ್ಲಿ ಅನುಕೂಲವಂತರ ಮನೆಯ ಹೆಣ್ಣುಮಕ್ಕಳು ಮಾತ್ರ ಶಾಲೆಗೆ ಹೋಗುತ್ತಿದ್ದರು. ಈಗ ಮಧ್ಯಮವರ್ಗದ ಮಹಿಳೆಯರೂ ಶಾಲೆಗೆ ಹೋಗುತ್ತಿದ್ದಾರೆ. ಅಲ್ಲೊಬ್ಬರು ಇಲ್ಲೊಬ್ಬರು ವಕೀಲೆಯರನ್ನು, ಕೆಲಸಕ್ಕೆ ಹೋಗುವವರನ್ನು ನೋಡಬಹುದು. ಆದರೂ ಈ ಸಂಖ್ಯೆ ಏನೂ ಸಾಲದು. ಇನ್ನೂ ಹೆಚ್ಚು ಜನ ಮನೆಯಿಂದ ಹೊರಗೆ ಬಂದು ಶಾಲೆಗಳಿಗೆ ಹೋಗಿ ವಿದ್ಯಾಭ್ಯಾಸ ಪಡೆಯಬೇಕು.

**ಹೊಸತು :** ಕೊನೆಯ ಪ್ರಶ್ನೆ. ನಿಮ್ಮನ್ನು ಇಪ್ಪತ್ತೊಂದು ವರ್ಷಗಳ ಹಿಂದೆ 'ಅಚಲ' ಪತ್ರಿಕೆಗಾಗಿ ಸಂದರ್ಶನ ಮಾಡಿದ್ದೆ. ಆ ಸಂದರ್ಭದಲ್ಲಿ ಇನ್ನೂ ಆತಂಕದ ವಾತಾವರಣವಿದ್ದ ಕಾಲ. ಸಂದರ್ಶನದ ವೇಳೆಯಲ್ಲಿ ನಿಮ್ಮ ಪತಿಯು ನಮ್ಮ ನಡುವೆ ಉಪಸ್ಥಿತರಿದ್ದರು. ನಾನು ಪ್ರಶ್ನೆ ಕೇಳುವಾಗೆಲ್ಲ ನನಗೆ ಅವರು 'ಸ್ವಲ್ಪ ನವಿರಾಗಿ ಬರಿ, ಏನೂ ತೊಂದರೆಯಾಗದಂತೆ ಬರಿಯಮ್ಮ' ಎಂದು ನನ್ನನ್ನು ನಿಯಂತ್ರಿಸುತ್ತಿದ್ದರು. ನಿಮಗೇನೂ ಹೇಳದಿದ್ದರೂ ನೀವೂ ಕೂಡ ಸ್ವಲ್ಪ ಬಿಗುವಿನ ವಾತಾವರಣದಲ್ಲಿಯೇ ಉತ್ತರಿಸುತ್ತಿದ್ದಿರಿ. ಆದರೆ ಈಗ ನೀವು ಆರಾಮಾಗಿ



ನಿರ್ಭಿಡೆಯಿಂದ ಮಾತನಾಡುತ್ತಿರುವಿರಿ. ಈ ಬದಲಾವಣೆಯ ಬಗ್ಗೆ ನಿಮಗೆ ಏನನ್ನಿಸುತ್ತೆ ?

**ಸಾರಾ :** ಆರಂಭದಲ್ಲಿದ್ದದ್ದು ಹೆದರಿಕೆಯೋ ಏನೋ ನನಗೆ ಗೊತ್ತಿಲ್ಲ. ಆದರೆ ನನಗೆ ಮಾತನಾಡಿಯೇ ಹೆಚ್ಚು ಗೊತ್ತಿರಲಿಲ್ಲ. ಸ್ವಲ್ಪ ಆತಂಕ ಇದ್ದಿರಬಹುದೇನೋ. ನನ್ನ ಮನೆಯವರು ಎಂದಿಗೂ ನನ್ನ ಅಭಿವ್ಯಕ್ತಿಗೆ ಅಡ್ಡಿ ಬಂದಿಲ್ಲ. ನನ್ನ ಮಕ್ಕಳೂ ಅಷ್ಟೆ. ಈಗಲೂ ಯಾರೂ ನನಗೆ ಸ್ವಾತಂತ್ರ್ಯಹರಣ ಮಾಡಲು ಸಾಧ್ಯವಿಲ್ಲ. ನನ್ನ ಮಕ್ಕಳೂ ನಾ ನಂಬುವ ಮೌಲ್ಯಗಳನ್ನು ಗೌರವಿಸುತ್ತಾರೆ. ನಮ್ಮ ಮನೆಯಲ್ಲಿ ನಾನಾಗಲಿ, ಯಾವ ಹೆಣ್ಣು ಮಕ್ಕಳಾಗಲಿ ಬುರ್ಖಾ ಹಾಕುವುದಿಲ್ಲ.

* * *

ನವ್ಯೋತ್ತರ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ವಿಶಿಷ್ಟ ಅನುಭವದ ಲೋಕವನ್ನು ಕನ್ನಡ ಸಾಹಿತ್ಯಕ್ಕೆ ಪರಿಚಯಿಸಿದ ಸಾರಾ ಅಬೂಬಕ್ಕರ್ ತಮ್ಮ ಸ್ಪಷ್ಟ ನಿಲುವು, ಖಚಿತ ಅಭಿಪ್ರಾಯಗಳು ಹಾಗೂ ಸರಳ ಶೈಲಿಗೆ ಹೆಸರಾದವರು. ಬರವಣಿಗೆಯಾಚೆಗೂ ಸಾಮಾಜಿಕವಾಗಿ ಸಾರಾ ತೋರುವ ಮಾನವೀಯ ಕಳಕಳಿ ಲೇಖನಿಯ ಲೋಕಕ್ಕೆ ಗೌರವ ತೋರುವಂತಹದು.

ಕನ್ನಡದ ಮೊದಲ ಲೇಖಕಿ, ಪ್ರಕಾಶಕಿ, ಸಂಪಾದಕಿಯೆಂದು ಖ್ಯಾತರಾದ ನಂಜನಗೂಡು ತಿರುಮಲಾಂಬರವರ ಹೆಸರಿನಲ್ಲಿ ಶಾಶ್ವತಿ ಮಹಿಳಾ ಅಧ್ಯಯನ ಕೇಂದ್ರವು ಕೊಡಮಾಡುವ ತಿರುಮಲಾಂಬ ಪ್ರಶಸ್ತಿಯನ್ನು ಇತ್ತೀಚೆಗೆ ಸಾರಾ ಅಬೂಬಕ್ಕರ್‌ರವರಿಗೆ ಪ್ರದಾನ ಮಾಡಲಾಯಿತು. ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಅತ್ತಿಮಬ್ಬೆ ಪ್ರಶಸ್ತಿ, ಅನುಪಮಾ ಪ್ರಶಸ್ತಿ, ನಾಡೋಜ ಪ್ರಶಸ್ತಿ – ಹೀಗೆ ಕನ್ನಡ ಸಾಹಿತ್ಯಲೋಕದ ಎಲ್ಲ ಪ್ರಶಸ್ತಿಗಳಿಂದಲೂ ಸನ್ಮಾನಿತರಾಗಿರುವ ಸರಳತೆ, ಸಜ್ಜನಿಕೆಗೆ ಹೆಸರಾಗಿರುವ ಹಿರಿಯ ಲೇಖಕಿ ಸಾರಾ ಅಬೂಬಕ್ಕರ್‌ರ ಕಿರೀಟಕ್ಕೆ ತಿರುಮಲಾಂಬ ಪ್ರಶಸ್ತಿಯ ಮತ್ತೊಂದು ಗರಿ ಸೇರಿದೆ.

**ಡಾ॥ ಎನ್. ಗಾಯತ್ರಿ**
೧೦೮, 'ಸ್ಕೈಲೈನ್ಸ್ ಸುರಭಿ ಅಪಾರ್ಟ್‌ಮೆಂಟ್ಸ್'
ಬನಶಂಕರಿ ೩ನೇ ಹಂತ
ವಿದ್ಯಾಪೀಠ ರಸ್ತೆ, ಬೆಂಗಳೂರು - ೫೬೦ ೦೮೫

# ಪ್ಯಾಲಿಸ್ಸಿ

ಮೂಲ : ಶ್ರೀಮತಿ ಲಾರೆನ್ಸ್ ಬುನಿಯನ್

**ಪ್ಯಾಲಿಸ್ಸಿ ಫ್ರಾನ್ಸ್‌ನ ದೊರೆಗೆ ಕುಂಬಾರನಾದ. ಪ್ಯಾರಿಸ್ ನಗರದಲ್ಲಿ ವೈಭವದ ಜೀವನ ಬಾಳಿದ. ಹಣ್ಣು ಹಣ್ಣು ಮುದುಕನಾಗಿ, ಕೈಕಾಲುಗಳು ಸೋಲುವವರೆಗೂ ಕಲಾಕೃತಿಗಳನ್ನು ರಚಿಸಿದ.**

**ಪ್ರಪಂಚದ ಮಹಾಯುದ್ಧಗಳು, ಕಾಳಗಗಳು, ಜಯ, ಅಪಜಯಗಳು ಮಾನವ ಕುಲದ ಮುನ್ನಡೆಯನ್ನು ಸಾರುವುದಿಲ್ಲ. ಆಲೋಚನೆಗಳನ್ನು, ಚಟುವಟಿಕೆಗಳನ್ನು, ಪ್ರಯತ್ನವನ್ನು ಯುದ್ಧಗಳಿಂದ ಬದುಕಿನೆಡೆಗೆ, ಶಾಂತಿಯೆಡೆಗೆ ಎಳೆಯುವ ಇಂಥ ಮಹಾತ್ಮರ ಹೋರಾಟದ ಬದುಕು ಮಾನವಕುಲದ ಮುನ್ನಡೆಯನ್ನು ಹೇಳುತ್ತದೆ.**

ಮಡಕೆ, ಕುಡಿಕೆ, ಹೂಜಿಗಳು, ಹೂದಾನಿಗಳು, ಹೂಕುಂಡಗಳು! ಮಣ್ಣಿನಿಂದ ತಯಾರಿಸಲ್ಪಟ್ಟು, ಒಲೆಯಲ್ಲಿ ಬೆಂದು ರೂಪುತಳೆದ ತರಹೇವಾರಿ ಪಿಂಗಾಣಿ ಸಾಮಾನುಗಳ ಅಂದವೇ ಬೇರೆ. ಉತ್ತಮ ಜೇಡಿಮಣ್ಣನ್ನು ಗುರುತಿಸಿ, ಆಯ್ದು, ನೀರಿನಲ್ಲಿ ನೆನೆಸಿ, ಮೃದುವಾಗುವಂತೆ, ಗಂಟುಗಳಿಲ್ಲದಂತೆ ಕಲಸಿ ಹದಮಾಡಿ, ಅದಕ್ಕೊಂದು ಆಕಾರ ಕೊಟ್ಟು, ಒಲೆಯಲ್ಲಿ ಸುಟ್ಟು ಅವುಗಳು ಬಹುಕಾಲ ಬಾಳಿಕೆ ಬರುವಂತೆ ಗಟ್ಟಿಯಾಗಿಸುವ ಈ ಕೆಲಸ ನಿಜಕ್ಕೂ ಆಶ್ಚರ್ಯಕರ. ಮಣ್ಣಿನ ಈ ಸಾಮಾನುಗಳ ಆಯುಷ್ಯ ಕಡಿಮೆಯೇ. ಬಿದ್ದರೆ ಒಡೆಯುವುದಂತೂ ಖಚಿತ. ಎಷ್ಟೇ ಅಂದವಾದ, ಬಣ್ಣಬಣ್ಣದ ವಸ್ತುಗಳಾದರೂ ಬಿರುಕು ಬಿಟ್ಟೇ ಕೊನೆಗಾಣುವವು. ಒಂದಲ್ಲ ಒಂದು ದಿನ ಒಡೆದುಹೋಗುವವು ಎಂದು ತಿಳಿದಿದ್ದರೂ ಅವುಗಳ ಬಳಕೆ, ಉಪಯೋಗ, ಕಲಾತ್ಮಕತೆ ದಿನದಿನಕ್ಕೆ ಹೊಸರೂಪ ತಳೆಯುತ್ತಲೇ ಇವೆ.

ನಾವೆಲ್ಲರೂ ನಮ್ಮ ಬಾಳುವೆಯಲ್ಲಿ ಒಂದಿಲ್ಲೊಂದು ವಸ್ತುವಿಗಾಗಿ ಬಯಸಿ, ಸಾಧನೆಗಾಗಿ ಛಲತೊಟ್ಟು ಇಚ್ಛಾಶಕ್ತಿ ಮತ್ತು ಶ್ರಮದಿಂದ ಗುರಿಮುಟ್ಟುವಂತೆಯೇ ಮಡಕೆ ಮಾಡುವ ಕಾಯಕವನ್ನು ಪ್ರೀತಿಸಿ, ಇದಿರಾದ ಎಲ್ಲ ಕಷ್ಟಕೋಟಲೆಗಳನ್ನೂ ಜಯಿಸಿ ಪುಟಕ್ಕಿಟ್ಟ ಚಿನ್ನದಂತೆ ಪ್ರಕಾಶಿಸಿದ ಬಡ ಕುಂಬಾರನೊಬ್ಬನ ಕಥೆಯಿದು.

ಬರ್ನಾರ್ಡ್ ಪ್ಯಾಲಿಸ್ಸಿ ಆಗಿನ ಫ್ರೆಂಚ್ ದೇಶದ ಪ್ರಜೆ. ೧೫೧೦ರಲ್ಲಿ ದಕ್ಷಿಣ ಫ್ರಾನ್ಸ್‌ನಲ್ಲಿ ಜನಿಸಿದ. ತಂದೆ ಕಡುಬಡವ. ಗಾಜು ಊದುತ್ತಿದ್ದವ. ಗಾಜನ್ನು ಕಾಯಿಸಿ, ಕೊಳವೆಯ ಮೂಲಕ ಊದಿ ಅದಕ್ಕೆ ಬೇಕಾದ ರೂಪಕೊಟ್ಟು ಗಾಜಿನ ಸಾಮಾನುಗಳನ್ನು ಮಾಡುತ್ತಿದ್ದ ಕಾಲವದು. ತನ್ನ ಮಗನ ವಿದ್ಯಾಭ್ಯಾಸಕ್ಕೆ ತಂದೆಯಲ್ಲಿ ಹಣವಿರಲಿಲ್ಲ. ಬರ್ನಾರ್ಡ್ ಚುರುಕಾದ ಹುಡುಗ. ಏನನ್ನಾದರೂ ಬಲುಬೇಗ ಕಲಿತುಬಿಡುತ್ತಿದ್ದ. ಹೇಗೋ ಮಾಡಿ ಓದಲು, ಬರೆಯಲು ಅಂತೂ ಕಲಿತ. ತನ್ನ ತಂದೆಯ ವೃತ್ತಿಯಲ್ಲಿ ತರಬೇತಿ ಪಡೆದ. ಚಿತ್ರ ಬರೆಯುವುದು, ಗಾಜಿನ ಮೇಲೆ ಚಿತ್ತಾರ ಬಿಡಿಸುವುದು, ಬೇರೆ ಬೇರೆ ಬಣ್ಣಗಳನ್ನು ಅರೆದು ಬೆರೆಸಿ ಹೊಸ ಬಣ್ಣ ತಯಾರಿಸುವುದು, ಜೊತೆಗೆ ವರ್ಣದಲ್ಲಿ ವ್ಯಕ್ತಿ ಚಿತ್ರ ರಚಿಸುವುದನ್ನು ಕಲಿತ. ಅವನು ಬಿಡಿಸಿದ ನೆರೆಹೊರೆಯವರ ಚಿತ್ರಗಳಿಗೆ ಬೇಡಿಕೆ ಲಭಿಸಿತು. ತಮ್ಮ ಭಾವಚಿತ್ರ ರಚಿಸಿಕೊಡೆಂದು ಜನ ಅವನಲ್ಲಿಗೆ ಬರಲು ಆರಂಭಿಸಿದರು. ಗಾಜಿನ ಸಾಮಾನುಗಳನ್ನು ಮಾಡುವುದಕ್ಕಿಂತಲೂ ಚಿತ್ರ ಬರೆಯುವ ಉದ್ಯೋಗದಲ್ಲಿ ವರಮಾನ ಹೆಚ್ಚೆಂದು ಪ್ಯಾಲಿಸ್ಸಿ ಕಂಡುಕೊಂಡ. ಗಾಜು ಮಾಡುವ ಕಲೆಗೆ ಆಗಿನ್ನೂ ಹೆಚ್ಚು ಬೇಡಿಕೆ ಇರಲಿಲ್ಲ.



ಕೆಲಸದಲ್ಲಿ ಪೂರ್ಣ ತರಬೇತಿ ಪಡೆದು ತನ್ನಿಷ್ಟದ ಉದ್ಯೋಗದಲ್ಲಿ ನೆಲೆಯೂರುವ ಮುನ್ನ ತನ್ನ ನಾಡನ್ನೆಲ್ಲ ಸುತ್ತಿ ಬರೋಣವೆಂದು ಪ್ರಯಾಣ ಹೊರಟ. ಆಗ ಫ್ರಾನ್ಸ್‌ನಲ್ಲಿ ತಮ್ಮದೇ ಸುಂದರ ಭಾವಚಿತ್ರ ಬರೆಸಿಕೊಳ್ಳಲು ಜನ ಇಷ್ಟಪಡುತ್ತಿದ್ದರು. ಅಲ್ಲಲ್ಲಿ ನಿಲ್ಲುತ್ತಾ ಜನರ ಚಿತ್ರ ಬಿಡಿಸಿ ತನ್ನ ಖರ್ಚಿಗಾಗುವಷ್ಟು ಹಣ ಗಳಿಸುತ್ತಾ ಮುಂದುವರೆದ. ಕೆಲವು ವರ್ಷಗಳು ಹೀಗೆ ಊರೂರು ಅಲೆಯುತ್ತಾ ಇದ್ದುಬಿಟ್ಟ. ಅಲೆಮಾರಿಯಾಗಿ ಆತ ಕಲಿತದ್ದು ಬಹಳ. ಪೂರ್ವದಲ್ಲಿ ಆಂಟ್‌ವರ್ಪ್, ದೂರ ಪಶ್ಚಿಮದಲ್ಲಿ ಬ್ರೆಸ್ತ್‌ವರೆಗೂ ಹೋಗಿಬಂದ. ಆರ್ಡೆನ್ನಿಸ್, ಪೈರನೀಸ್ ಎಲ್ಲ ನೋಡಿದ, ಸುತ್ತಾಡಿದ.

ಪ್ರತಿ ಊರಿನಲ್ಲೂ ಕೆಲದಿನ ನಿಂತು ಹೊಸ ಹೊಸ ವಿಷಯ ತಿಳಿದುಕೊಂಡ. ಈ ಜ್ಞಾನವು ಮುಂದೆ ಅವನಿಗೆ ಉಪಯುಕ್ತವಾಗಲಿತ್ತು. ಮಣ್ಣಿನ ಬಣ್ಣ, ಗುಣ ಅಭ್ಯಸಿಸಿ ಗುರುತು ಹಾಕಿಕೊಂಡ. ಚರ್ಚ್‌ಗಳ ಕಿಟಕಿಗಳಲ್ಲಿ ಬಳಸಿದ್ದ ಗಾಜು, ಊರಿಂದೂರಿಗೆ ಗಾಜಿನ ವಿಧದಲ್ಲಿನ ವ್ಯತ್ಯಾಸ, ಸವೆದ ಮೆಲ್ಲವದರು, ಪ್ರತಿಯೊಂದನ್ನೂ ಸೂಕ್ಷ್ಮವಾಗಿ ಪರೀಕ್ಷಿಸಿ ಟಿಪ್ಪಣಿ ಮಾಡಿಕೊಂಡ.

ಮುಂದೊಂದು ದಿನ ಮದುವೆಯಾಗಿ, ಊರೂರು ತಿರುಗಾಟ ತೊರೆದು 'ಸೈಂಟ್ಸ್' ಎಂಬ ಪ್ರಶಾಂತ, ಪುಟ್ಟ ಹಳ್ಳಿಯಲ್ಲಿ ನೆಲೆನಿಂತ. ಮಡದಿ, ಮಕ್ಕಳೊಂದಿಗೆ ಸುಖವಾಗಿದ್ದ. ಹಾಗೇ ಜೀವನಪೂರ್ತಿ ಇದ್ದುಬಿಡುತ್ತಿದ್ದನೇನೋ. ಆದರೆ ಆದದ್ದೇ ಬೇರೆ. ಕೀರ್ತಿಗೆ ಪಾತ್ರನಾಗದೆ, ಚರಿತ್ರೆಯ ಪುಟಗಳಲ್ಲಿ ಅಚ್ಚಳಿಯದ ಹೆಸರನ್ನುಳಿಸದೆ ಹೋಗಿಬಿಡುತ್ತಿದ್ದನೇನೋ. ಆದರೆ ಆ ಮಧ್ಯೆ ಘಟನೆಯೊಂದು ನಡೆಯಿತು. ಒಂದು ದಿನ ಆ ಊರಿನ ಶ್ರೀಮಂತ ಪ್ರಭು ಪ್ಯಾಲಿಸ್ಸಿಗೆ ಕರೆ ಕಳುಹಿಸಿದ. ಪ್ರಭುವಿನ ಅರಮನೆಯಲ್ಲಿ ದೂರದೂರದ ದೇಶಗಳ ಹಳೆಯ ಹೊಸ ಬಣ್ಣಬಣ್ಣದ ವಿಧವಿಧವಾದ ಮಣ್ಣಿನ ಸಾಮಾನುಗಳ ಸಂಗ್ರಹಾಲಯವೇ ಇತ್ತು. ಮಹಾಪ್ರಭು ತನ್ನ ಕಲಾಕೃತಿಗಳ ಸಂಗ್ರಹವನ್ನು ಪ್ಯಾಲಿಸ್ಸಿಗೆ ತೋರಿಸಿದ. ಪ್ಯಾಲಿಸ್ಸಿ ಬೆರಗಾಗಿ, ಪ್ರತಿಯೊಂದು ವಸ್ತುವನ್ನೂ ಮುಟ್ಟಿ, ಪ್ರಶಂಸಿಸಿದ. ಪ್ರಭು ಪೆಟ್ಟಿಗೆಯೊಂದನ್ನು ತೆರೆದು ಅದರಲ್ಲಿ ಜೋಪಾನವಾಗಿರಿಸಿದ್ದ ಪಿಂಗಾಣಿ ಬಟ್ಟಲೊಂದನ್ನು ಹೊರತೆಗೆದು ಪ್ಯಾಲಿಸ್ಸಿಯ ಮುಂದಿಟ್ಟ. ಬಟ್ಟಲ ಹೊರಮೈಗೆ ಎನಾಮಲ್‌ನ ಲೇಪನವಿತ್ತು. ಅದರ ಮೇಲೆ ಚಿತ್ರ ಬಿಡಿಸಲಾಗಿತ್ತು. ಆ ಬಟ್ಟಲು, ಮಾತುಗಳು ಅದರ ಚೆಲುವನ್ನು ವರ್ಣಿಸಲಾರದಷ್ಟು ಸುಂದರವಾಗಿತ್ತು. ಪ್ಯಾಲಿಸ್ಸಿ ಆಶ್ಚರ್ಯದಿಂದ ಮೂಕನಾದ. ಅಂತಹ ಚೆಲುವಿನ ಕಲಾಕೃತಿಯನ್ನು ಅವನು ಹಿಂದೆಂದೂ ಕಂಡಿರಲಿಲ್ಲ. ಮಡಕೆ, ಕುಡಿಕೆ, ಪಿಂಗಾಣಿ ತಯಾರಿಸುವುದು ಅವನ ವೃತ್ತಿಯಾಗಿರಲಿಲ್ಲ. ಮಣ್ಣನ್ನು ಹದ ಮಾಡುವ ಕಲೆ ಅವನಿಗೆ ತಿಳಿದಿರಲಿಲ್ಲ. ಅವನಿಗೆ ತಿಳಿದದ್ದು ಇಷ್ಟೆ – ಎನಾಮಲ್ ತಯಾರಿಸುವ ಗುಟ್ಟು ಕಳೆದುಹೋಗಿದೆ, ಅದನ್ನೀಗ ಕಲಿಸಲು ಯಾರೂ, ಯಾರ್‍ಯಾರೂ ಉಳಿದಿಲ್ಲವೆಂದು. ಆ ಎನಾಮಲ್‌ನ ಸೌಂದರ್ಯದಿಂದ ಪ್ಯಾಲಿಸ್ಸಿ ಎಷ್ಟು ಪ್ರಭಾವಿತನಾದನೆಂದರೆ ಆ ಕ್ಷಣವೇ, ಅಲ್ಲಿಯೇ ನಿರ್ಧರಿಸಿದ, ಮತ್ತೆ ಅಂಥದ್ದೇ ಸುಂದರ ಎನಾಮಲ್ ಮಾಡುವುದನ್ನು ತಾನು ಕಂಡುಹಿಡಿಯುತ್ತೇನೆ ಅಂತ !

ಅಷ್ಟೇ ಚೆಲುವಿನ ಇನ್ನೊಂದು ಪಿಂಗಾಣಿಯ, ಎನಾಮಲ್‌ನಿಂದ ಅಲಂಕರಿಸಲ್ಪಟ್ಟ ಅಂತಹುದೇ ಬಟ್ಟಲನ್ನು ತಯಾರಿಸುವವರೆಗೂ ಇನ್ನೆಂದೂ ಒಂದು ಕ್ಷಣವೂ ವಿಶ್ರಮಿಸುವುದಿಲ್ಲವೆಂದು ಮನದಲ್ಲೇ ಪ್ರತಿಜ್ಞೆ ಮಾಡಿದ. ಹಿಂದೊಬ್ಬರು ಯಾರೋ ಈ ಬಟ್ಟಲನ್ನು ತಯಾರಿಸಿದ್ದಾರೆ ಎಂದಾದಲ್ಲಿ ಪುನಃ ಕಂಡುಹಿಡಿಯಲು ಖಂಡಿತ ಸಾಧ್ಯವಿದೆ. ತಾನದನ್ನು ಸಾಧಿಸಿಯೇ ತೀರುತ್ತೇನೆಂದು ಸಂಕಲ್ಪ ಮಾಡಿದ.

ಮನೆಗೆ ಮರಳಿ ಮಡದಿಗೆ ತನ್ನ ಸಂಕಲ್ಪದ ವಿಚಾರ ತಿಳಿಸಿದ. ಏನೆಲ್ಲ ಕಷ್ಟ ಇದಿರಾಗಬಹುದೆಂದು ವಿವರಿಸಿದ. ಆಕೆಗೇನೂ ಸಂತಸವಾಗಲಿಲ್ಲ. ಇಷ್ಟು ದಿನದಂತೆ ಆದಾಯವಿರದೇ ಹೋಗಬಹುದು, ಬೆಚ್ಚಗಿನ ಮನೆ ಇಲ್ಲವಾಗಬಹುದು, ಮಕ್ಕಳಿಗಾಗಿ ಬಯಸಿದ್ದನ್ನು ಕೊಳ್ಳಲೂ ಆಗದಿರಬಹುದು, ಬಹುಕಾಲ ಬಡವರಾಗೇ ಇರಬೇಕಾದೀತು ಎಂದೆಲ್ಲ ಬಿಡಿಸಿ ಹೇಳಿದ. ತನ್ನ ಪತಿ ರಚಿಸುತ್ತಿದ್ದ ಬಣ್ಣಬಣ್ಣದ ಚಿತ್ರಗಳ ಬಗ್ಗೆ ಆಕೆಗೆ ಅಭಿಮಾನವಿತ್ತು. ಆದರೆ ಈಗವನು ಚಿತ್ರ ಬರೆಯುವುದನ್ನು ಸಂಪೂರ್ಣ ಕೈಬಿಟ್ಟು ಎನಾಮಲ್ ಕಂಡುಹಿಡಿಯಲು ಉತ್ಸುಕನಾಗಿದ್ದ. ತನ್ನ ಕಂದಮ್ಮಗಳನ್ನು ಉಪವಾಸ ಕೆಡವಬೇಕಾದೀತೆಂಬ ಕಟುಸತ್ಯವನ್ನು ಒಪ್ಪಿಕೊಳ್ಳುವುದು ಯಾವುದೇ ತಾಯಿಗಾದರೂ ಕಷ್ಟವೇ. ಪ್ಯಾಲಿಸ್ಸಿ ಕೈಗೊಂಡ ಕಾರ್ಯದಲ್ಲಿ ಸಫಲನಾಗುತ್ತಾನೆಂಬ ಖಾತರಿಯೂ ಇರಲಿಲ್ಲ. ಇಂಥ ಭಂಡ ಪ್ರಯತ್ನ ಮಾಡದಿರುವುದೇ ಒಳಿತೆಂದು ಅವಳಿಗನ್ನಿಸಿತು. ಆದರೂ ಪತಿಯ ಒತ್ತಾಯದ ಮೇರೆಗೆ ತನ್ನ ಒಪ್ಪಿಗೆಯಿತ್ತಳು.

ಬರ್ನಾರ್ಡ್ ಪ್ಯಾಲಿಸ್ಸಿ ಬೇಗನೇ ಕಾರ್ಯೋನ್ಮುಖನಾದ. ಎನಾಮಲ್ ಮಾಡಲು ಮೂಲತಃ ಏನೇನು ಪದಾರ್ಥ ಬಳಸಬೇಕೆಂದೂ ಅವನಿಗೆ ತಿಳಿದಿರಲಿಲ್ಲ. ಬರಿಯ ಊಹಾಪೋಹದ ಮೇಲೆ ಕೆಲಸ ಆರಂಭಿಸಿದ. ಯಾವ್ಯಾವ ಪದಾರ್ಥಗಳಿರಬಹುದು ಎಂದೆನ್ನಿಸಿತೋ ಅವನ್ನೆಲ್ಲ ತಂದು, ಅರೆದು ಪುಡಿಮಾಡಿದ. ಸಾಕಷ್ಟು ಮಡಕೆಗಳನ್ನು ತಂದು, ಅವುಗಳನ್ನು ಒಡೆದು ಚಿಕ್ಕ ಚಿಕ್ಕ ಚೂರುಗಳಾಗಿ ಮಾಡಿದ. ಪುಟ್ಟ ಒಲೆಯೊಂದನ್ನು ಕಟ್ಟಿ, ಚೂರುಗಳನ್ನು ಪೇರಿಸಿ ಬೆಂಕಿ ಹೊತ್ತಿಸಿದ. ಏನಾಯಿತು ?! ಮೊಟ್ಟಮೊದಲ ಪ್ರಯತ್ನದಲ್ಲಿ ಬಹುಪಾಲು ನಮ್ಮ ನಿಮ್ಮೆಲ್ಲರಿಗೂ ಏನಾಗುತ್ತೋ ಅದೇ ಆಯಿತು. ಬೆಂಕಿಯ ಉಷ್ಣತೆ, ಮಡಕೆ ಚೂರುಗಳಲ್ಲಿರಿಸಿದ್ದ ಮಿಶ್ರಣವನ್ನು ಕರಗಿಸುವಷ್ಟಿರಲೇ ಇಲ್ಲ. ಮಿಶ್ರಣದಲ್ಲಿನ ರಾಸಾಯನಿಕಗಳು ಕರಗಿ, ಕೂಡಿ, ಎನಾಮಲ್ ಆಗಿ ಪರಿವರ್ತನೆಯಾಗುವ ಉಷ್ಣಾಂಶ ಯಾವುದೆಂದು, ಆ ನಿರ್ದಿಷ್ಟ ಉಷ್ಣಾಂಶ ಉತ್ಪತ್ತಿ ಮಾಡುವ ಬಗೆ ಎಂತೆಂದು ಪ್ಯಾಲಿಸ್ಸಿಗೆ ತಿಳಿದಿರಲಿಲ್ಲ. ಒಲೆ ಅತಿಯಾಗಿ ಕಾದು ಕೆಂಪಾಗುತ್ತಿತ್ತು, ಇಲ್ಲವೇ ಅಗತ್ಯ ತಾಪಮಾನ ತಲುಪುತ್ತಲೇ ಇರಲಿಲ್ಲ. ಕೆಲವೊಮ್ಮೆ ಒಲೆಯಲ್ಲಿ ಪ್ಯಾಲಿಸ್ಸಿ ಪೇರಿಸಿಟ್ಟ ಮಡಕೆ ಚೂರುಗಳಿಗೆಲ್ಲ ಸಮನಾದ ಬಿಸಿ ತಟ್ಟದೆ ಪ್ರಯತ್ನ ವಿಫಲವಾಗುತ್ತಿತ್ತು. ಈಗವನು ಪ್ರತಿಯೊಂದು ಸೂಕ್ಷ್ಮ ಕ್ರಮವನ್ನೂ ತಪ್ಪುಗಳಿಂದಲೇ ಕಲಿಯಬೇಕಿತ್ತು.




ಪ್ರಯೋಗಕ್ಕೆ ಹೆಚ್ಚು ಮಡಕೆ ಚೂರುಗಳ ಅಗತ್ಯವಿತ್ತು. ಮಡಕೆಗಳು, ನಾನಾ ವಿಧದ ರಾಸಾಯನಿಕ ಪುಡಿಗಳು ಮತ್ತು ಸೌದೆ ಕೊಳ್ಳಲು ಹೆಚ್ಚು ಹಣದ ಅಗತ್ಯವಿತ್ತು. ಆ ಕಾಲಕ್ಕೆ ಫ್ರಾನ್ಸ್ ಇನ್ನೂ ಕಲ್ಲಿದ್ದಲ ಬಳಕೆ ಕಲಿತಿರಲಿಲ್ಲ. ದಿನದಿನಕ್ಕೆ ಆತನ ಪತ್ನಿಯ ಅಸಹನೆ, ದುಃಖ ಹೆಚ್ಚಾಯಿತು, ಮಕ್ಕಳು ಬಡಕಲಾದವು. ಹೀಗೆ ವರ್ಷಗಳೇ ಉರುಳಿದವು. ಪ್ಯಾಲಿಸ್ಸಿ ಎದೆಗುಂದಲಿಲ್ಲ. ವಿಫಲವಾದ ಪ್ರಯೋಗಗಳನ್ನೇ ಆಧರಿಸಿ ಕಲಿತ, ಟಿಪ್ಪಣಿ ಬರೆದುಕೊಂಡ.

ದಾರಿದ್ರ್ಯ ಕೊನೆಗೂ ಅವನ ಸತತ ಪ್ರಯತ್ನವನ್ನು ನಿಲ್ಲಿಸಿತು. ಬಂಡವಾಳಕ್ಕಾಗಿ ಕೆಲವು ತಿಂಗಳು ಚಿತ್ರ ಬರೆಯುವ ತನ್ನ ಮೊದಲಿನ ವೃತ್ತಿಗೆ ಮರಳಬೇಕಾಯಿತು. ಎನಾಮಲ್ ತಯಾರಿಸಲು ಅಗತ್ಯ ಪದಾರ್ಥ, ಪರಿಕರಗಳನ್ನು ಕೊಳ್ಳುವಷ್ಟು ಹಣ ಕೂಡಿಟ್ಟ ಕೂಡಲೆ ಮತ್ತೆ ತನ್ನ ಮಡಕೆ ಚೂರುಗಳಿಗೆ ಹಿಂದಿರುಗಿದ. ಪತಿಯ ನಿತ್ಯದ ಕೆಲಸ ವ್ಯರ್ಥವೆಂದೇ ಪತ್ನಿಗೆ ತೋರುತ್ತಿತ್ತು. ಈ ಬಾರಿಯ ಪ್ರಯೋಗಕ್ಕೆ ಪ್ಯಾಲಿಸ್ಸಿ ತನ್ನ ಮಿಶ್ರಣಗಳನ್ನು, ಮಡಕೆಯ ಚೂರುಗಳನ್ನು ತನ್ನ ಸ್ನೇಹಿತನ ಗಾಜು ತಯಾರಿಸುವ ಕುಲುಮೆಗೆ ಕೊಂಡೊಯ್ದ. ಅಲ್ಲಿ ಉರಿಯ ಉಷ್ಣತೆ ಅಧಿಕವಾಗಿತ್ತು. ಫಲಿತಾಂಶ ಪ್ರೋತ್ಸಾಹದಾಯಕವಾಗಿತ್ತು. ಅದೇ ತೆರನಾದ ಇನ್ನೂ ಹೆಚ್ಚು ಪ್ರಯೋಗ ಮಾಡಲಾರಂಭಿಸಿದ. ಗುರಿ ತಲುಪುವ ಭರವಸೆಯ ಕಿಡಿಯೊಂದು ಅವನಂತರಾಳದಲ್ಲಿ ಮೊಳಕೆಯೊಡೆಯುವುದರಲ್ಲಿತ್ತು... ಆದರೆ ಮೊದಲ ಹೊಸ ಪ್ರಯತ್ನದಲ್ಲಿಯೇ ವಿಫಲನಾದ.

ವರುಷ ವರುಷವೂ ಹೊಸ ಮಡಕೆ, ಕುಡಿಕೆಗಳನ್ನು ಕೊಂಡ, ಒಡೆದ, ರಾಸಾಯನಿಕಗಳನ್ನು ಅರೆದು ಬೆರೆಸಿದ. ಒಲೆ ಹೊತ್ತಿಸಿದ. ಉರಿಗೆ ಒಡ್ಡಿದ. ಫಲಿತಾಂಶಕ್ಕಾಗಿ ಕಾದ... ಪ್ರತಿಬಾರಿಯೂ ನಿರಾಶೆಯೇ ಕಾದಿತ್ತು. ಹೀಗೇ ಹತ್ತು ವರ್ಷಗಳು ಕಳೆದುಹೋದವು, ಗುರಿಯ ಹತ್ತಿರವೂ ಪ್ಯಾಲಿಸ್ಸಿ ತಲುಪಿರಲಿಲ್ಲ. ಎಲ್ಲ ಪ್ರಯತ್ನಕ್ಕೂ ಕೊನೆಯೆಂಬುದಿದೆ. ಸಹನೆಯ ಕಟ್ಟೆಯೊಡೆಯುವ ದಿನವೂ ಬಂತು. ಇನ್ನು ಪ್ರಯತ್ನಿಸಿ ಫಲವಿಲ್ಲ, ಮುಕ್ತಾಯ ಹಾಡಬೇಕೆಂದು ಕೊನೆಗೂ ನಿರ್ಧರಿಸಿದ. ಆದರೂ ಅವನಂತರಂಗ ಬಿಡಲೊಲ್ಲದು. ಕಟ್ಟಕಡೆಯ ಪ್ರಯತ್ನವೊಂದನ್ನು ಮಾಡೆಂದು ಅದು ಒತ್ತಾಯಿಸಿತು. ಕಡೆಯ ಪ್ರಯತ್ನದಲ್ಲಿ ವಿಫಲನಾದಲ್ಲಿ ಇನ್ನೆಂದೆಂದಿಗೂ ಈ ಹುಚ್ಚು ಕೆಲಸಕ್ಕೆ ಕೈಹಾಕದೆ ಚಿತ್ರ ಬರೆಯುತ್ತಲೇ ಜೀವನ ಸಾಗಿಸುವುದೆಂದು, ಈ ಪ್ರಯತ್ನ ವಿಫಲವಾದಲ್ಲಿ ಎನಾಮಲ್ ಕಂಡುಹಿಡಿಯುವ ಕೀರ್ತಿ ತನಗಲ್ಲ, ಬೇರಿನ್ಯಾರಿಗೋ ಸೇರಿದ್ದೆಂದು ತೀರ್ಮಾನಿಸಿದ.

ಕಟ್ಟಕಡೆಯ ಪ್ರಯತ್ನದಲ್ಲಿ ಪ್ಯಾಲಿಸ್ಸಿ ಮುನ್ನೂರು ಹೊಸ ಮಿಶ್ರಣಗಳನ್ನು ಬೇರೆ ಬೇರೆ ಕಲಸಿ, ಮಡಕೆ ಚೂರುಗಳಲ್ಲಿಟ್ಟು ತನ್ನ ಗೆಳೆಯನ ಗಾಜುಮಾಡುವ ಕುಲುಮೆಯಲ್ಲಿಟ್ಟು ಉರಿ ಹೊತ್ತಿಸಿದ. ಕಾದ... ಹೆಚ್ಚು ಸಹನೆಯಿಂದ ಕಾದ. ಗೊತ್ತು ಮಾಡಿಟ್ಟ ಹೊತ್ತು ಕಳೆಯಿತು. ಕುಲುಮೆಯ ಮುಚ್ಚಳ ತೆರೆಯಲಾಯಿತು. ಪ್ರಕಾಶಮಾನವಾದ ಬೆಳಕು ಹರಡಿತು ! ಮುನ್ನೂರರಲ್ಲಿ ಒಂದು ಮಡಕೆಯ ಚಿಪ್ಪಿನಲ್ಲಿಟ್ಟ ರಾಸಾಯನಿಕ ದ್ರಾವಣವು ಉಳಿದೆಲ್ಲವುಗಳಿಗಿಂತ ಬೇರೆಯಾಗಿ, ಹಿಂದೆಂದೂ

ಕಂಡಿರದೆ ಇದ್ದ ರೀತಿಯಲ್ಲಿ ಮಾರ್ಪಾಟು ಹೊಂದಿತ್ತು. ಆದರೂ ಮಿಶ್ರಣ ತಣ್ಣಗಾಗುವವರೆಗೂ ಏನೂ ಹೇಳಲು ಬರುವುದಿಲ್ಲವಷ್ಟೆ. ತಣ್ಣಗಾಗುತ್ತಾ ಅದು ಗಟ್ಟಿಯಾಯಿತು, ಗಟ್ಟಿಯಾದಂತೆ ಶುಭ್ರ, ಇನ್ನೂ ಶುಭ್ರ ಬಿಳಿಯ ಬಣ್ಣಕ್ಕೆ ತಿರುಗಿ ನವಿರಾದ, ಹೊಳೆಯುವ ವಸ್ತುವಾಯಿತು. ಬಿಳಿಯರಳೆಯಂಥ ಅದ್ವಿತೀಯ ಸೌಂದರ್ಯದ ಎನಾಮಲ್ ಆಯಿತು!

ಇನ್ನು ಪ್ರಯೋಗವನ್ನು ಕೈಬಿಡುವ ಮಾತೇಕೆ? ಪ್ಯಾಲಿಸ್ಸಿ ಸಫಲನಾಗಿದ್ದ, ಆದರೆ ಎನಾಮಲ್‌ಅನ್ನು ಮಡಕೆ ಕುಡಿಕೆಯ ಹೊರಮೈಗೆ ಹಚ್ಚುವಷ್ಟು ದೊಡ್ಡ ಪ್ರಮಾಣದಲ್ಲಿ ತಯಾರಿಸಲು ಇನ್ನೂ ಹೆಚ್ಚು ಕೆಲಸ ಮಾಡಬೇಕಿತ್ತು. ಖಾಸಗಿಯಾಗಿ ಕೆಲಸ ಆರಂಭಿಸುವ ಅಗತ್ಯವಿತ್ತು. ತನ್ನದೇ ಕುಲುಮೆಯನ್ನು ಕಟ್ಟಿ ಕೊಳ್ಳಬೇಕಿತ್ತು. ಪ್ಯಾಲಿಸ್ಸಿಯ ಬಳಿ ಬಿಡಿಗಾಸೂ ಉಳಿದಿರಲಿಲ್ಲ.

ಇಟ್ಟಿಗೆಗಳನ್ನು ಹಾದಿ ಬೀದಿಯಲ್ಲಿ ಆಯ್ದು, ಕಾಡಿ ಬೇಡಿ ಅವರಿವರ ಕೈಕಾಲು ಹಿಡಿದು ಸಂಗ್ರಹಿಸಿದ. ಇಟ್ಟಿಗೆಗಳನ್ನು ಮನೆಗೆ ಸಾಗಿಸಲು ಗಾಡಿಯ ಬಾಡಿಗೆಗೂ ಕಾಸಿರಲಿಲ್ಲ. ತಾನೊಬ್ಬನೇ ಬುಟ್ಟಿಯಲ್ಲಿ ತುಂಬಿಕೊಂಡು ಬೆನ್ನಮೇಲೆ ಹೊತ್ತು ಸಾಗಿಸಿದ. ಇಟ್ಟಿಗೆ ಜೋಡಿಸಿ, ಕೆಸರು ಕಲೆಸಿ ತನ್ನ ಕೈಯಾರೆ ಕುಲುಮೆ ಕಟ್ಟಿದ. ದಣಿವು, ದಾರಿದ್ರ್ಯ ಪ್ಯಾಲಿಸ್ಸಿಯನ್ನು ಬಗ್ಗಿಸಲಿಲ್ಲ. ಅಚಲ ನಂಬಿಕೆಯೊಂದೇ ಅವನ ಶಕ್ತಿಯಾಗಿತ್ತು. ಪ್ರಪಂಚದಲ್ಲಿಯೇ ಅದ್ವಿತೀಯ ಸೌಂದರ್ಯದ ಎನಾಮಲ್ ಚಿತ್ರ ಆತನ ಮನಃಪಟಲದಲ್ಲಿ ಅಚ್ಚೊತ್ತಿಬಿಟ್ಟಿತ್ತು. ತನ್ನ ಕನಸನ್ನು ನನಸಾಗಿಸುವುದೇ ಪರಮಗುರಿಯಾಗಿತ್ತು. ಮನಸ್ಸು ಇನ್ಯಾವ ವಿಷಯದೆಡೆಗೆ ಅಲುಗಾಡಲೂ ಇಲ್ಲ.

ಈ ಸಾರಿ ತಾನೇ ಮಣ್ಣು ಕಲಸಿ ಮಡಕೆ, ಹೂಜಿ, ಹೂದಾನಿ ಮಾಡಿದ. ಸರಿಯಾದ ಮಿಶ್ರಣವನ್ನು ಅವುಗಳಿಗೆ ಲೇಪಿಸಿದ. ಮಡಕೆಗಳನ್ನು ಕುಲುಮೆಯಲ್ಲಿ ಎಚ್ಚರದಿಂದ ಜೋಡಿಸಿ, ಕುಲುಮೆಗೆ ಸೌದೆ ಒಟ್ಟಿ, ಬೆಂಕಿ ಹೊತ್ತಿಸಿದ. ಬೆಂಕಿಯ ಜ್ವಾಲೆ ಧಗಧಗಿಸಿತು. ಒಲೆ ಕಾದು ಕೆಂಪಗಾಯಿತು. ಮಿಶ್ರಣ ಕರಗಿ ದ್ರಾವಣವಾಗುವುದನ್ನೇ ಕಾಯುತ್ತಾ ಪ್ಯಾಲಿಸ್ಸಿ ಕುಳಿತ. ದ್ರಾವಣವಾಗಿ ಅದು ಎಲ್ಲ ಮಡಕೆಗಳ ಹೊರಮೈಗೂ ಸಮಾನವಾಗಿ ಹರಡಿಕೊಳ್ಳಬೇಕಿತ್ತು, ಶುಭ್ರ ಬಿಳಿಯ ಎನಾಮಲ್‌ನ ರೂಪ ತಾಳಬೇಕಿತ್ತು. ಹಗಲೂ, ರಾತ್ರಿ ಕುಲುಮೆಗೆ ನಿರಂತರ ಸೌದೆ ಪೂರೈಸಿದ. ಅಗ್ನಿದೇವನ ಹಸಿವಿಗೆ ಬಡ ಪ್ಯಾಲಿಸ್ಸಿಯ ಸೌದೆ ಯಾವ ಲೆಕ್ಕ. ಬೆಳಿಗ್ಗೆ ಮಗ ನಿಕೋಲಾಸ್ ಅಪ್ಪನಿಗಾಗಿ ಗಂಜಿ ತಂದ. ಮಕ್ಕಳನ್ನು ಬಳಿ ಕರೆದು ಮಾತಾಡಿಸಿ, ಮುದ್ದಿಸಿ ತಿಂಗಳುಗಳೇ ಉರುಳಿಹೋಗಿವೆಯೆಂದು ನೆನಪಾಯಿತು. ನಾಳೆ ಎಲ್ಲರೂ ಒಟ್ಟಿಗೆ ಕಳೆಯೋಣ, ಸುತ್ತಾಡಿ ಬರೋಣ ಅಂತ ಕಂದನಿಗೆ ಆಶ್ವಾಸನೆ ನೀಡಿದ. ಮಗನಿಗೆ ತಂದೆಯ ಆಶ್ವಾಸನೆಗಳ ವಿಚಾರ ಗೊತ್ತೇ ಇತ್ತು. ''ಆದರೆ ಅಪ್ಪ, ನಾವು ಸುತ್ತಾಡಿ ಬರಹೋದರೆ ಕುಲುಮೆಗೆ ಸೌದೆ ಇಡುವವರ್‍ಯಾರು?''

''ಇಲ್ಲ ಕಂದ, ನಾಳೆ ಈ ಕೆಲಸ ಮುಗಿದುಬಿಡುತ್ತೆ'' ಮಾತು ಕೊಟ್ಟ ತಂದೆ.

ನಾಳೆಗಳು ಬಂದವು, ಹೋದವು. ಕುಲುಮೆಗೆ ಇನ್ನೂ ಸಮಯ ಬೇಕು. ಮತ್ತೂ ಸೌದೆ ಬೇಕು. ಪ್ಯಾಲಿಸ್ಸಿಯ ಸೌದೆಯ ದಾಸ್ತಾನು ಕರಗುತ್ತಾ ಬಂತು. ಮಿಶ್ರಣವಿನ್ನೂ ಕರಗಿಯೇ ಇಲ್ಲ! ಏನು ಮಾಡುವುದೀಗ?? ಪ್ಯಾಲಿಸ್ಸಿಯನ್ನು ಕುಟ್ಟಿ, ಕೊಡವಿದರೂ ಒಂದಾಣೆ ಉದುರದು. ಇಂಥ ಹುಚ್ಚನಿಗೆ ಯಾರೂ ಇನ್ನೆಷ್ಟೂ ಸಾಲ ಕೊಡರು. ಉರಿಯನ್ನೇನಾದರೂ ತಗ್ಗಲು ಬಿಟ್ಟರೆ ಇಷ್ಟು ದಿನದ ಒಟ್ಟೂ ಶ್ರಮ ವ್ಯರ್ಥವಾಗುವುದಂತೂ ಖಚಿತ. ಪ್ಯಾಲಿಸ್ಸಿ ಕೈಕಾಲುಗಳಲ್ಲಿ ತ್ರಾಣವಿಲ್ಲ, ವಿಶ್ರಮಿಸಲು ಸಮಯವಿಲ್ಲ. ಆವರಣದಲ್ಲಿ ಬಿದ್ದಿದ್ದ ಅಳಿದುಳಿದ ಸೌದೆಯನ್ನೂ ಸೀಳಿ ಒಲೆಗೆ ಅರ್ಪಿಸಿದ. ಕಡೆಯ ಚಕ್ಕೆಯೂ ಬೂದಿಯಾಯಿತು.

ಎನಾಮಲ್ ಇನ್ನೂ ಕರಗಲಿಲ್ಲ.

ಇಪ್ಪತ್ತು ನಿಮಿಷ – ಹತ್ತು ನಿಮಿಷ – ಇನ್ನು ಐದೇ ನಿಮಿಷದ ಅಗತ್ಯವಿದೆ. ಪ್ಯಾಲಿಸ್ಸಿ ಮನೆಯೊಳಕ್ಕೆ ಧಾವಿಸಿದ. ನಡುಮನೆಗೆ ನುಗ್ಗಿ ಮೇಜನ್ನು ಎಳೆದೊಯ್ದ... ಪತ್ನಿ ಮಕ್ಕಳೊಂದಿಗೆ ಕುಳಿತಿದ್ದಳು. ಗಂಡನಲ್ಲಿ ಭರವಸೆ ಸಂಪೂರ್ಣ ಕಳೆದುಕೊಂಡಿದ್ದಳು. ಪ್ಯಾಲಿಸ್ಸಿಯ ದಿಢೀರ್ ವರ್ತನೆಯಿಂದ ಗಾಬರಿಗೊಂಡು ಚೀರಿದಳು... ಪ್ಯಾಲಿಸ್ಸಿಗೆ ಹುಚ್ಚು ಹಿಡಿಯಿತೆಂದೇ ತಿಳಿದು ಹೆದರಿದಳು. ಪ್ಯಾಲಿಸ್ಸಿಗೆ ಮಾತಾಡಲೂ ಪುರುಸೊತ್ತಿಲ್ಲ, ತ್ರಾಣವೂ ಇಲ್ಲ. ಮತ್ತೆ ಒಳಬಂದವ ಕುರ್ಚಿಯನ್ನು ಹೊತ್ತೊಯ್ದ. ಹೆಂಡತಿ ಮಕ್ಕಳು ಹೆದರಿ ರೋದಿಸಲಾರಂಭಿಸಿದರು. ಮೇಜು, ಕುರ್ಚಿ, ಮಣೆ... ಎಲ್ಲವೂ ಅಗ್ನಿಗೆ ಆಹುತಿಯಾದವು. ಕೋಣೆ ಖಾಲಿಯಾಯಿತು. ಕೋಣೆಯಲ್ಲಿ ಉರಿಯಬಲ್ಲ ಇನ್ಯಾವ ವಸ್ತುವೂ ಉಳಿದಿಲ್ಲ.

ಎನಾಮಲ್ ಇನ್ನೂ ಕರಗಿಲ್ಲ.

ಇದೇ ಕಡೆಯ ಅವಕಾಶ. ಈ ಕ್ಷಣ ಸೌದೆ ಬೇಕು, ಇನ್ನೂ ಬೇಕು. ಪ್ಯಾಲಿಸ್ಸಿ ಹುಚ್ಚನಾಗಿದ್ದಾನೆ. ಕೈಗೆ ಇನ್ನೇನು ಸಿಕ್ಕೀತೆಂದು ಹುಡುಕಿದ. ಸಾಮಾನುಗಳನ್ನು ಎಳೆದೆಳೆದು ಹಾಕಿದ. ಪ್ಯಾಲಿಸ್ಸಿಯ ಕಣ್ಣುಗಳೀಗ ನೆಲದತ್ತ ಹೊರಳಿದವು. ಹಲಗೆಗಳನ್ನು ಹಾಸಿ ಕಟ್ಟಿದ್ದ ಬಡವನ ಮನೆ. ಆವೇಶದಿಂದ ಹಲಗೆಗಳನ್ನು ಕಿತ್ತು ಮುರಿಯಲಾರಂಭಿಸಿದ. ನೆಲದ ಹಾಸು ಹಲಗೆಗಳು ಮುಗಿದಾಗ, ಬಾಗಿಲು... ಕುಲುಮೆಗೆ ದಾಹವಿನ್ನೂ ಆರದು. ಬೇಕು ಸೌದೆ! ಇನ್ನೂ ಬೇಕು!

ಎನಾಮಲ್ ನಿಧಾನ ಕರಗಿತು... ಕೊನೆಗೂ ಕರಗಿತು!

ಪ್ಯಾಲಿಸ್ಸಿಯ ಕನಸು ನನಸಾಯಿತು! ವರುಷ ವರುಷಗಳು ಕಾದ ಕ್ಷಣ ಕೊನೆಗೂ ಬಂತು! ಕಠೋರ ಪ್ರಯತ್ನದ ದಿನಗಳು, ಯಾರಿಂದಲೂ ಕನಿಕರವಿಲ್ಲ, ತನ್ನ ಪ್ರಯೋಗದ ಬಗೆಗೆ ಗೌರವ ನಂಬಿಕೆಗಳಿರಲಿ, ಸಹನೆಯೂ ಇಲ್ಲದ ಬಂಧುಬಳಗ. ಪ್ಯಾಲಿಸ್ಸಿ ಎದೆಗುಂದಲಿಲ್ಲ. ಕೊನೆಗೂ ಬಂತು ಸುದಿನ! ಬೆಪ್ಪನೆಂದು ಜರಿದವರು, ಹುಚ್ಚನೆಂದು ಹಳಿದವರು, ಕುಹಕವಾಡಿದವರು, ನಕ್ಕು ಅವಮಾನಿಸಿದವರು, ಅತ್ತೂ ಕರೆದೂ ರಂಪ ಮಾಡಿದವರು ಎಲ್ಲರೂ ನಾಚಿ ತಲೆಬಾಗಿದರು, ಮೂಕರಾದರು!

ಎನಾಮಲ್ ಕಂಡುಹಿಡಿಯಲು, ಅದರ ತಯಾರಿಕೆ, ಬಳಸುವಿಕೆಯ ಕೌಶಲದಲ್ಲಿ ನಿಷ್ಣಾತತೆ ಸಾಧಿಸಲು ಪ್ಯಾಲಿಸ್ಸಿಗೆ ಒಟ್ಟು ಹದಿನಾರು ವರುಷಗಳು ಹಿಡಿದವು. ಹದಿನಾರು ವರ್ಷದ ಕಠಿಣ ಸಾಧನೆ, ತಪಸ್ಸು ಫಲ ತಂದಿತ್ತು. ಯಶಸ್ಸು, ಸಂಪತ್ತು, ಪ್ರಖ್ಯಾತಿ ಪ್ಯಾಲಿಸ್ಸಿಯನ್ನರಸಿ ಬಂದವು. ಶುಭ್ರ ಬಿಳಿಯ ಎನಾಮಲ್ ಮೇಲೆ ಬಂಗಾರದರಶಿನದ ಬಣ್ಣ, ಕಡುನೇರಳೆ, ಗಾಢ ಹಸಿರು ಮತ್ತು ಹೊಸಮಣ್ಣಿನ ಕಡುಕಂದು – ಇವಿಷ್ಟೇ ಬಣ್ಣಗಳನ್ನು ಉಪಯೋಗಿಸಿ ಹೂ, ಗಿಡ, ಮರ, ಬಳ್ಳಿ – ಹೀಗೆ ಫ್ರಾನ್ಸ್‌ನ ಪ್ರಕೃತಿ ಸೌಂದರ್ಯವನ್ನೆಲ್ಲ ಸೆರೆಹಿಡಿದ. ಮಣ್ಣಿನಿಂದ ಸೊಬಗಿನ ಕಲಾಕೃತಿಗಳನ್ನು ರಚಿಸಿದ. ಪ್ಯಾಲಿಸ್ಸಿ ಎಷ್ಟು ವಿಖ್ಯಾತಿಗಳಿಸಿದನೆಂದರೆ ಫ್ರಾನ್ಸ್‌ದೇಶದ ಕ್ಯಾಥೋಲಿಕ್ಕರು ಅಲ್ಪಸಂಖ್ಯಾತ ಪ್ರಾಟೆಸ್ಟಂಟರನ್ನು ಸರ್ವನಾಶ ಮಾಡಹೊರಟು ದಂಗೆಯೆದ್ದಾಗ, ಪ್ರಾಟೆಸ್ಟಂಟರನ್ನು ಕೊಲೆಗೈದಾಗ, ಪ್ಯಾಲಿಸ್ಸಿಯನ್ನೂ ಹುಡುಕಿ ಬಂದರು. ಆದರೆ ಅವನ ಜೀವವನ್ನು ಅವನ ಚೆಲುವಿನ ಮಡಕೆ ಕುಡಿಕೆಗಳು ಉಳಿಸಿದವು! ದಂಗೆಯೆದ್ದವರೇನೂ ಸುಲಭವಾಗಿ ಬಿಡಲಿಲ್ಲ. ಪ್ಯಾಲಿಸ್ಸಿಯ ಕಾರ್ಯಾಗಾರವನ್ನು ಧ್ವಂಸ ಮಾಡಿದರು, ಅವನನ್ನು ಸೆರೆಮನೆಗೆ ದೂಡಿದರು. ಫ್ರಾನ್ಸ್‌ನ ರಾಣಿ ಪ್ಯಾಲಿಸ್ಸಿಯ ರಕ್ಷಣೆಗೆ ನಿಂತಳು. ಇಂಥ ಚತುರ, ನಿಷ್ಣಾತ ಕಲಾವಿದ, ಕುಶಲಕರ್ಮಿಯನ್ನು ಕೊಲ್ಲುವುದು ಸರಿಯಲ್ಲ, ಇವನು ದೇಶದ ಸೌಂದರ್ಯವನ್ನು ಇಮ್ಮಡಿಗೊಳಿಸಲು ಇನ್ನೂ ಬದುಕಬೇಕು ಎಂದವಳು ತೀರ್ಪಿತ್ತಳು.

ಹೀಗೆ ಪ್ಯಾಲಿಸ್ಸಿ ಫ್ರಾನ್ಸ್‌ನ ದೊರೆಗೆ ಕುಂಬಾರನಾದ. ಪ್ಯಾರಿಸ್ ನಗರದಲ್ಲಿ ವೈಭವದ ಜೀವನ ಬಾಳಿದ. ಹಣ್ಣು ಹಣ್ಣು ಮುದುಕನಾಗಿ, ಕೈಕಾಲುಗಳು ಸೋಲುವವರೆಗೂ ಕಲಾಕೃತಿಗಳನ್ನು ರಚಿಸಿದ.

ಪ್ರಪಂಚದ ಮಹಾಯುದ್ಧಗಳು, ಕಾಳಗಗಳು, ಜಯ, ಅಪಜಯಗಳು ಮಾನವ ಕುಲದ ಮುನ್ನಡೆಯನ್ನು ಸಾರುವುದಿಲ್ಲ. ಆಲೋಚನೆಗಳನ್ನು, ಚಟುವಟಿಕೆಗಳನ್ನು, ಪ್ರಯತ್ನವನ್ನು ಯುದ್ಧಗಳಿಂದ ಬದುಕಿನೆಡೆಗೆ, ಶಾಂತಿಯೆಡೆಗೆ ಎಳೆಯುವ ಇಂಥ ಮಹಾತ್ಮರ ಹೋರಾಟದ ಬದುಕು ಮಾನವಕುಲದ ಮುನ್ನಡೆಯನ್ನು ಹೇಳುತ್ತದೆ.

*(ಶ್ರೀಮತಿ ಲಾರೆನ್ಸ್ ಬುನಿಯನ್ ಬರೆದ 'Paths of Peace' ಪುಸ್ತಕದಿಂದ ಆಯ್ದು ಅನುವಾದಿಸಿದ್ದು.)*


ಕನ್ನಡಕ್ಕೆ : ಸಹನ
ನಂ. ೩, 'ಕೆರೆಮನೆ' ಅಪಾರ್ಟ್‌ಮೆಂಟ್ಸ್
ದೇವರಕೆರೆ ಎಕ್ಸ್‌ಟೆನ್‌ಷನ್, ಇಸ್ರೋ ಲೇಔಟ್, ಬೆಂಗಳೂರು - ೫೬೦ ೦೭೮


## ವಿನಂತಿ

ಅಂತರಂಗದಲ್ಲೊಂದಿಷ್ಟು
ಜಾಗ ಕೊಡಿ ಕವಿತೆಗೆ
ಕವಿದ ಮನದ ಮೋಡಕೆ
ಮಳೆ ತಂಪನೆರಚಲಿ


ವಾಸುದೇವ ನಾಡಿಗ್
ಜವಾಹರ್ ನವೋದಯ ವಿದ್ಯಾಲಯ
ಏನಿಗದಲೆ, ಚಿಂತಾಮಣಿ, ಕೋಲಾರ

# ಐದಕ್ಕೆ ನಾಲ್ಕು!

ಇದು ಪರೀಕ್ಷೆಯ ಫಲಿತಾಂಶವಲ್ಲ. ಫಲಿತಾಂಶದ ಸಾಧ್ಯತೆ. ಬರಿಗಣ್ಣಿಗೆ ಕಾಣುವ ಐದು ಗ್ರಹಗಳಲ್ಲಿ ನಾಲ್ಕನ್ನು ಸಂಜೆಯೇ ನೋಡಬಹುದಾದ ಸಾಧ್ಯತೆ ಇದೆ. ಇದುವರೆಗೆ ಸಂಜೆ ಕಾಣುತ್ತಿದ್ದ ಶುಕ್ರ ಮತ್ತು ಶನಿಗಳ ಜೊತೆಗೆ ಈಗ ಗುರು ಮತ್ತು ಬುಧ ಕೂಡ ಸೇರಿರುವುದೇ ವಿಶೇಷ.

ಸಂಜೆಯಾಗುತ್ತಿದ್ದಂತೆ ಥಳಗುಟ್ಟುವ ಶುಕ್ರ ಕಣ್ಸೆಳೆಯುತ್ತದೆ. ಪಶ್ಚಿಮ ದಿಗಂತದ ಅಂಚಿನಲ್ಲಿ ಕಾಣುವ ಲುಬ್ಧಕ - ಸಿರಿಯಸ್ ನಕ್ಷತ್ರ ಇದಕ್ಕೆ ಪ್ರಕಾಶದಲ್ಲಿ ಏನೇನೂ ಸಾಟಿ ಇಲ್ಲ. ೧೮ರ ಸಂಜೆ ಚಂದ್ರ ಶುಕ್ರನನ್ನು ಮರೆಮಾಡುವ ಅಪೂರ್ವ ಘಟನೆ ನಡೆಯಲಿದೆ. ಈ ಆಚ್ಛಾದನೆಯ ಆರಂಭವಾಗುವಾಗ ಎರಡೂ ಕಾಯಗಳು ದಿಗಂತದ ಅಂಚಿಗೆ ಮುಟ್ಟಿರುತ್ತವೆ. ಆದರೂ ಸಂಜೆಯಿಂದ ೮.೪೩ರವರೆಗೂ ಚಂದ್ರ ನಿಧಾನವಾಗಿ ಶುಕ್ರನನ್ನು ಸಮೀಪಿಸುವುದನ್ನು ಬರಿಗಣ್ಣಿನಿಂದಲೇ ನೋಡಿ ತಿಳಿಯಬಹುದು. ೮.೪೩ಕ್ಕೆ 'ಸ್ವಿಚ್ ಆಫ್' ಮಾಡಿದ ಹಾಗೆ ಶುಕ್ರ ಮರೆಯಾಗುತ್ತದೆ. ಅದು ಪುನಃ ಹೊರ ಬರುವಾಗ ನಮ್ಮ ದಿಗಂತದಿಂದ ಕೆಳಗೆ ಇಳಿದಿರುತ್ತದೆ.

ಮರುದಿನ ಸಂಜೆ ಶುಕ್ರ ಯಥಾ ಸ್ಥಾನದಲ್ಲಿ ಕಾಣುತ್ತದೆ. ಅದನ್ನು ದಾಟಿ ಓಡಿಬಂದ ಚಂದ್ರ ಇದೀಗ ಶನಿಗ್ರಹದ ಜೊತೆಗೂಡಿರುತ್ತದೆ. ಈ ನೋಟವೂ ಬಲು ಚೆನ್ನ. ಹೀಗೆ ಶನಿಯನ್ನು ಗುರುತಿಸಿ ದಿನೇ ದಿನೇ ಅದರ ಸ್ಥಾನ ಗಮನಿಸಿ. ತಿಂಗಳ ಕೊನೆಗೆ ಶುಕ್ರ-ಶನಿ ಸಮಾಗಮ.

ತಿಂಗಳ ಆರಂಭದಲ್ಲಿ ಸೂರ್ಯಾಸ್ತವಾದ ಸುಮಾರು ಅರ್ಧಗಂಟೆಯ ನಂತರ ಕಾಣುವ ಗುರುಗ್ರಹ ಸಂಜೆಯ ಇನ್ನೊಂದು ಆಕರ್ಷಣೆ. ೫ರಂದು ವಿಯುತಿ. ಆ ಮುಂದೆ ಸೂರ್ಯಾಸ್ತವಾಗುವ ಮೊದಲೇ ಮೇಲೇರುವ ಅದು ರಾತ್ರಿ ಇಡೀ ಪ್ರಕಾಶಮಾನವಾಗಿ ಕಾಣುತ್ತದೆ.

ಬುಧ ಮತ್ತು ಶುಕ್ರ ಎರಡೂ ಗ್ರಹಗಳು ಸಂಜೆಯ ಆಕಾಶದಲ್ಲಿ ಗರಿಷ್ಠ ಎತ್ತರವನ್ನು ತಲುಪಲಿವೆ. ೨ರಂದು ಬುಧಗ್ರಹದ ಗರಿಷ್ಠ ಕೋನೋನ್ನತಿ. ಪಶ್ಚಿಮದಲ್ಲಿ ಶುಕ್ರಗ್ರಹದ ಎತ್ತರದ ಸುಮಾರು ಅರ್ಧಕ್ಕೆ ಕಾಣುವುದು. ೯ರಂದು ಶುಕ್ರದ ಕೋನೋನ್ನತಿ. ಒಟ್ಟಿನಲ್ಲಿ ಗ್ರಹಗಳ ಚಲನೆಯ ಕಾರಣ ಈ ತಿಂಗಳಲ್ಲಿ ಕ್ಯಾಮೆರಾಗಳಿಗೆ ಕೈತುಂಬ (ಕಣ್ತುಂಬ) ಕೆಲಸ.

ಜೂನ್ ೧೮ರಂದು ಸುಮಾರು ರಾತ್ರಿ ೯ ಗಂಟೆಗೆ ಪಶ್ಚಿಮಕ್ಕೆ ನೋಡಿದಾಗ ಕಾಣಿಸುವ ಚಂದ್ರ ಮತ್ತು ಶುಕ್ರ.



ಭೂಮಿ ತನ್ನ ಕಕ್ಷೆಯ ಮುಖ್ಯ ಹಂತವನ್ನು ದಾಟುವ ದಿನಾಂಕ ೨೧ರಂದು. ಆ ರಾತ್ರಿ ೨೩:೩೬ಕ್ಕೆ ದಕ್ಷಿಣಾಯನ. ಬೇಸಿಗೆಯ ಮುಕ್ತಾಯ. ಸೂರ್ಯ ಉತ್ತರದ ತುದಿಯನ್ನು ಮುಟ್ಟುವ ದಿನ.

ಕ್ರಾಂತಿವೃತ್ತ ಅಂದರೆ ಸೂರ್ಯನ ಪಥ. ಹುಣ್ಣಿಮೆಯಂದು ಚಂದ್ರ-ಸೂರ್ಯ ಈ ವೃತ್ತದ ವ್ಯಾಸೀಯ ಬಿಂದುಗಳಲ್ಲಿರುತ್ತವೆ. ಆದ್ದರಿಂದ ಸೂರ್ಯ ಉತ್ತರದ ಗರಿಷ್ಠ ಮುಟ್ಟುವ ಈ ತಿಂಗಳು, ಹುಣ್ಣಿಮೆಯ ಚಂದ್ರ ದಕ್ಷಿಣದ ಗರಿಷ್ಠ ದಿಕ್ಕಿನಲ್ಲಿರುತ್ತದೆ. ಜ್ಯೇಷ್ಠಾ ನಕ್ಷತ್ರದ ಸಮೀಪವೇ ಇರುತ್ತದೆ. ಆರು ತಿಂಗಳ ನಂತರ ಉತ್ತರಾಯಣವಾಗುವಾಗ ಸೂರ್ಯ ದಕ್ಷಿಣದ ತುದಿಗೆ ಬಂದಾಗ ಆ ಹುಣ್ಣಿಮೆಯ ಚಂದ್ರ ಉತ್ತರದ ತುದಿಗೆ ಮೃಗಶಿರಾ ನಕ್ಷತ್ರದ ಬಳಿ ಕಾಣುತ್ತದೆ.

ಸಂಜೆಯ ಆಕಾಶದಲ್ಲಿ ಸುಲಭವಾಗಿ ಗುರುತಿಸಬಹುದಾದ ನಕ್ಷತ್ರಪುಂಜವೆಂದರೆ ಉತ್ತರದ ಸಪ್ತರ್ಷಿಮಂಡಲ. ಹಾಗೇ ನೆತ್ತಿಯತ್ತ ಕಣ್ಣು ಹಾಯಿಸಿದಾಗ ಸಿಂಹರಾಶಿ ಕಾಣುತ್ತದೆ. ನೋಟವನ್ನು ದಕ್ಷಿಣದ ಕಡೆಗೆ ಹರಿಸಿದಾಗ ದಕ್ಷಿಣ ಶಿಲುಬೆ ಅಥವಾ ತ್ರಿಶಂಕು ಕಾಣುತ್ತದೆ. ಅದರ ಪಕ್ಕದ ಎರಡು ಪ್ರಖರ ನಕ್ಷತ್ರಗಳೇ ಆಲ್ಫಾ ಮತ್ತು ಬೀಟಾ ಸೆಂಟಾರಿಗಳು. ಸೆಂಟಾರ್ ಎಂದರೆ ಕುದುರೆಯ ದೇಹದ ಮನುಷ್ಯ ಮುಖದ ಜೀವಿ. ಕಿನ್ನರ ಎಂದದರ ಹೆಸರಿರಿಸಿದ್ದಾರೆ ಪ್ರೊ|| ಆರ್. ಎಲ್. ನರಸಿಂಹಯ್ಯನವರು. ಸೂರ್ಯಾಸ್ತದ ಒಂದೆರಡು ಗಂಟೆಗಳಾದ ಮೇಲೆ ವೃಶ್ಚಿಕ ಧನುರಾಶಿಗಳು ಸ್ಫುಟವಾಗಿ ಕಾಣುವುವು. ಆಕಾಶಗಂಗೆಯ ಹರಿವು ತ್ರಿಶಂಕು, ಕಿನ್ನರ, ವೃಶ್ಚಿಕ, ಧನು – ಈ ಮೂಲಕ ಹಾಯುವುದನ್ನು ಕಾಣಬಹುದು.

### ಖಗೋಳ ದಿನಚರಿ

೧ ಹುಣ್ಣಿಮೆ ೦೬.೩೪ಕ್ಕೆ ಚಂದ್ರ-ಜ್ಯೇಷ್ಠಾ ಜೋಡಿ, ಚಂದ್ರ ಗುರು ಜೋಡಿ.
೨ ಬುಧಗ್ರಹದ ಗರಿಷ್ಠ ಕೋನೋನ್ನತಿ* ೨೩ ಡಿಗ್ರಿ
೫ ಗುರುಗ್ರಹದ ವಿಯುತಿ* (ಸೂರ್ಯಾಸ್ತವಾಗುವಾಗ ಗುರುಗ್ರಹದ ಉದಯ)
೮ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೯ ಶುಕ್ರಗ್ರಹದ ಗರಿಷ್ಠ ಕೋನೋನ್ನತಿ ೪೫ ಡಿಗ್ರಿ.
೧೦ ಮಂಗಳಗ್ರಹದ ಸಮೀಪದಲ್ಲಿ ಚಂದ್ರ
೧೨ ಚಂದ್ರ-ಭೂಮಿ ನಡುವಿನ ದೂರ ಕನಿಷ್ಠ
೧೫ ಅಮಾವಾಸ್ಯೆ ೮:೪೩ಕ್ಕೆ ಬುಧಗ್ರಹದ ಹಿನ್ನಡೆ
೧೬ ಬುಧ-ಚಂದ್ರ ಜೋಡಿ
೧೮ ಶುಕ್ರ-ಚಂದ್ರ ಜೋಡಿ;* ಆಚ್ಛಾದನೆ ದಿಗಂತದ ಅಂಚಿನಲ್ಲಿ ರಾತ್ರಿ ೮:೪೩ಕ್ಕೆ ಶುಕ್ರ ಚಂದ್ರನ ಹಿಂದೆ ಮರೆಯಾಗುವುದನ್ನು ಕಾಣಬಹುದು.
೧೯ ಮಘ-ಶನಿ-ಚಂದ್ರ ಜೋಡಿ*
೨೧ ದಕ್ಷಿಣಾಯನ ೨೩:೩೬ಕ್ಕೆ
೨೨ ಚಾಂದ್ರಮಾಸದ ಪ್ರಥಮ ಪಾದ, ಚಂದ್ರಾಸ್ತ ನಡುರಾತ್ರಿಗೆ
೨೪ ಚಂದ್ರ-ಭೂಮಿ ನಡುವಿನ ದೂರ ಗರಿಷ್ಠ
೨೮ ಜ್ಯೇಷ್ಠಾ-ಗುರು-ಚಂದ್ರ ತ್ರಿಕೋಣ* ಬುಧಗ್ರಹದ ಯುತಿ
ಜುಲೈ ೧ ಶುಕ್ರ-ಶನಿ ನಡುವೆ ೦.೬. ಡಿಗ್ರಿ ಕೋನ*

*ಛಾಯಾಗ್ರಹಣಕ್ಕೆ ಉತ್ತಮ ಅವಕಾಶ

ಡಾ|| ಬಿ. ಎಸ್. ಶೈಲಜಾ, ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೧





## ಅರಿವಿನ ನಡೆ

*ಡಾ॥ ಕವಿತಾ ರೈ*

**ಪುಟ : viii + ೧೩೨** **ಬೆಲೆ : ರೂ. ೫೦**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ ಗಾಂಧಿನಗರ, ಬಳ್ಳಾರಿ - ೫೮೩ ೧೦೩

ಸ್ವಾತಂತ್ರ್ಯೋತ್ತರ ಭಾರತದ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಬಿಕ್ಕಟ್ಟುಗಳನ್ನು ಶೋಧನೆಗೆ ಒಳಪಡಿಸುವ ವಿಮರ್ಶಾ ಲೇಖನಗಳ ಸಂಗ್ರಹವಿದು. ಜಾಗತೀಕರಣ, ಗುಲಾಮಗಿರಿ, ಉದಾರವಾದಿ ಸಾಂಸ್ಕೃತಿಕ ನೆಲೆ, ಮಹಿಳೆಯ ಬದಲಾದ ದಿಕ್ಕು, ಕೊಡಗಿನ ಹಬ್ಬಗಳು ಇತ್ಯಾದಿ ವಿಚಾರಗಳ ಕುರಿತ ಪ್ರಬಂಧಗಳು, ಬಿ.ಎಂ.ಶ್ರೀ. ಯವರ ಇಂಗ್ಲಿಷ್ ಗೀತೆಗಳ ಅನುವಾದ, ಸವಿತಾ ನಾಗಭೂಷಣ ಅವರ ಸಮಗ್ರ ಕವಿತೆಗಳು ಇತ್ಯಾದಿ ಕೃತಿಗಳ ವಿಮರ್ಶೆ ಇದೆ.

## ಆನು ದೇವಾ ಹೊರಗಣವನು...




ಬಸವಣ್ಣನ ಜಾತಿ ಮೂಲದ ವಿಶ್ಲೇಷಣೆ

*ಡಾ॥ ಬಂಜಗೆರೆ ಜಯಪ್ರಕಾಶ*

**ಪುಟ : viii + ೮೭** **ಬೆಲೆ : ರೂ. ೬೦**

**ಲಕ್ಷ್ಮೀ ಪ್ರಕಾಶನ,** ನಂ. ೧೨೦, ೫ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ, ಎನ್‌ಜಿಇಎಫ್ ಲೇಔಟ್, ಸಂಜಯನಗರ, ಬೆಂಗಳೂರು - ೫೬೦ ೦೯೪

ಬಸವಣ್ಣನವರ ಹುಟ್ಟಿನ ಬಗ್ಗೆ ಎದ್ದಿರುವ ವಿವಾದಕ್ಕೆ ಬಂಜಗೆರೆ ಸಾಕಷ್ಟು ಸಾಂಸ್ಕೃತಿಕ ಸಾಕ್ಷ್ಯಾಧಾರಗಳನ್ನು ಇಲ್ಲಿ ಒದಗಿಸಿದ್ದಾರೆ. ಬಸವಣ್ಣ ಬ್ರಾಹ್ಮಣನಲ್ಲದಿರಬಹುದೆನ್ನುವ ಸತ್ಯವನ್ನು ಸಾಕ್ಷೀಕರಿಸುವಲ್ಲಿ ಈ ಕೃತಿ ಪ್ರಾಮಾಣಿಕವಾಗಿ ಪ್ರಯತ್ನಿಸಿದೆ. ದಲಿತ ಜಾತಿಯಲ್ಲಿ ಹುಟ್ಟಿದ ಬಸವಣ್ಣ ಶಿವಸಂತಾನವಾದುದರಿಂದ ಬಾಲಯೋಗಿಯಾಗಿ ಕೂಡಲ ಸಂಗಮನಾಥನ ಸೇವೆಯಲ್ಲೇ ಬೆಳೆದು ಆದರಿಂದಾಗಿಯೇ ಸಂಗನ ಬಸವಣ್ಣ ಎಂದು ಕರೆಯಲ್ಪಡುತ್ತಿದ್ದ ಎಂಬ ಅಂಶವನ್ನು ಬಂಜಗೆರೆಯವರು ಇಲ್ಲಿ ನಿರೂಪಿಸಿದ್ದಾರೆ. ವಿಸ್ತಾರವೂ, ಆಳವೂ ಆದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನದ ಫಲವಾಗಿ ಹೊರಬಂದಿರುವ ಈ ಬರವಣಿಗೆಯ ಹಿಂದೆ ಸಾಕಷ್ಟು ಪರಿಶ್ರಮ ಕಾಣುತ್ತದೆ.



## ಲುಷನ್‌ರ ಎರಡು ನೀಳ್ಗತೆಗಳು

ಮೂಲ : ಲುಷನ್‌ರ ಚೀನಿ ಕತೆಗಳು

*ಅನುವಾದ : ಡಾ॥ ವಿಜಯಾ ಸುಬ್ಬರಾಜ್*

**ಪುಟ : ೮೫** **ಬೆಲೆ : ರೂ. ೫೦**

**ಅಕ್ಷಯ ಪಬ್ಲಿಷರ್ಸ್**, ನಂ. ೮೭, ೧೧ನೇ ಮುಖ್ಯರಸ್ತೆ, ೩ನೇ ಹಂತ, ಗಿರಿನಗರ, ಬೆಂಗಳೂರು - ೮೫

೧೮೮೧-೧೯೩೬ ರ ನಡುವಿನಲ್ಲಿ ಬದುಕಿದ್ದ ಲುಷನ್ ಚೀನಾದ ಅತ್ಯಂತ ಪ್ರಭಾವಿ, ಕ್ರಾಂತಿಕಾರಿ, ಚಿಂತಕರಲ್ಲಿ ಒಬ್ಬ. ಬದುಕಿನಲ್ಲಿ ಇದಿರಾಗುವ ದುಗುಡ, ಒಂಟಿತನ, ಹತಾಶೆಯ ಕುರಿತು ಬರೆದ ಕಥೆಗಳಿವು. ಲುಷನ್‌ನ ಕಥೆಗಳು ಸರಳವೂ, ವಾಸ್ತವವೂ, ಪ್ರಾಮಾಣಿಕವೂ ಆಗಿವೆ. ಆ ಕಾಲದ ಜನಜೀವನ, ತಾನು ಭೇಟಿಯಾದ ವ್ಯಕ್ತಿಗಳು, ಅವರ ಬದುಕಿನ ಹೋರಾಟಗಳನ್ನು ಕಥೆಯಾಗಿ ಹೆಣೆಯಲಾಗಿದೆ. ಚೀನೀ ಸಾಹಿತ್ಯವನ್ನು ಕನ್ನಡಕ್ಕೆ ಪರಿಚಯಿಸ ಹೊರಟಿರುವುದು ಅಭಿನಂದನಾರ್ಹ.

## ಕನ್ನಡ ಸಾಹಿತ್ಯ ಸಂಶೋಧನೆ : ಮಾರ್ಗ ಮತ್ತು ಇತಿಹಾಸ



*ಡಾ॥ ಸಂಗಮೇಶ ಸವದತ್ತಿ ಮಠ*

**ಪುಟ : xii + ೨೩೯** **ಬೆಲೆ : ರೂ. ೧೩೦**

**ರೂಪರಶ್ಮಿ ಪ್ರಕಾಶನ,** ಧಾರವಾಡ - ೫೮೦ ೦೦೮

ಪುಸ್ತಕದ ಮೊದಲ ಭಾಗದಲ್ಲಿ ಕನ್ನಡ ಸಾಹಿತ್ಯ ಸಂಶೋಧನೆಯ ಅರ್ಥ ಸ್ವರೂಪ, ರೀತಿ, ಶೈಲಿಯನ್ನು ವಿವರಿಸಲಾಗಿದೆ. ಎರಡನೆಯ ಭಾಗದಲ್ಲಿ ಕನ್ನಡದಲ್ಲಿ ಸಂಶೋಧನೆ ನಡೆದುಬಂದ ಇತಿಹಾಸವನ್ನು ವಿವರಿಸಲಾಗಿದೆ. ಎರಡೂ ವಿಷಯಗಳನ್ನು ಒಂದೇ ಪುಸ್ತಕದಲ್ಲಿ ನೀಡಿರುವುದು ಅಧ್ಯಯನಾಕಾಂಕ್ಷಿಗಳಿಗೆ ಅನುಕೂಲವಾಗಿದೆ. ವಿಷಯಗಳ ಪರಿಚಯದೊಂದಿಗೆ ಕನ್ನಡ ಸಾಹಿತ್ಯ ಸಂಶೋಧನೆಯ ಕಾಲಘಟ್ಟಗಳು ಹಾಗೂ ವೈಶಿಷ್ಟ್ಯಗಳನ್ನು ದಾಖಲಿಸಿದ್ದಾರೆ. ಅನುಬಂಧಗಳಲ್ಲಿ ೧೦೦ ಆಯ್ದ ಕನ್ನಡ ಸಂಶೋಧಕರ ಸಂಶೋಧನೆಗಳು ಮತ್ತು ೪೮ ಶ್ರೇಷ್ಠ ಸಂಶೋಧನ ಪ್ರಬಂಧಗಳ ಪಟ್ಟಿ ಹಾಗೂ ಪದಸೂಚಿಯೂ ಇದೆ.

## ಪ್ರೊಫೆಸರ್ ಎಂ. ಡಿ. ಎನ್.



*ಸಂಪಾದಕ : ವೀರಭದ್ರಪ್ಪ ಬಿಸ್ಲಳ್ಳಿ*

**ಪುಟ : xxvi + ೩೮೨** **ಬೆಲೆ : ರೂ. ೨೦೦**

**ಅಭಿರುಚಿ ಪ್ರಕಾಶನ,** ನಂ. ೩೮೬, ೧೪ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಸರಸ್ವತೀಪುರ, ಮೈಸೂರು - ೯

ಸುಮಾರು ಎರಡೂವರೆ ದಶಕಗಳು ರೈತ ಸಮುದಾಯದ ಬೌದ್ಧಿಕ ನಾಯಕತ್ವ ವಹಿಸಿದ್ದವರು ಪ್ರೊಫೆಸರ್ ಎಂ.ಡಿ. ನಂಜುಂಡಸ್ವಾಮಿ. ರೈತ ಚಳವಳಿಯನ್ನು ಜಾತಿ, ವರ್ಗರಹಿತ ಚಳವಳಿಯನ್ನಾಗಿ ರೂಪಿಸಿ ರೈತರಲ್ಲಿ ಹೋರಾಡುವ ಪ್ರಜ್ಞೆಯನ್ನು ಜಾಗೃತಗೊಳಿಸಿದವರು. ಇವರ ಗೌರವಾರ್ಥ ಹೊರತಂದ ಸಂಪಾದಿತ ಲೇಖನಗಳ ಕೃತಿಯಿದು. ನಂಜುಂಡಸ್ವಾಮಿಯವರ ವ್ಯಕ್ತಿತ್ವದ ಎಲ್ಲ ಮಗ್ಗುಲಗಳ ಪರಿಚಯವಾಗುತ್ತದೆ. ಅವರು ತೆಗೆದುಕೊಳ್ಳುತ್ತಿದ್ದ ನಿರ್ಧಾರಗಳು ಹೇಗಿರುತ್ತಿದ್ದವು ಎಂದು ಬಿಂಬಿಸುವ ಬಿ. ಚಂದ್ರೇಗೌಡರು ಬರೆದ 'ಕಡಿದಾಳು ಶಾಮಣ್ಣ' ನಾಟಕದ ಕೊನೆಯ ಎರಡು ದೃಶ್ಯಗಳಿವೆ. ಪ್ರೊ॥ ಸಿ. ಜಿ. ಕೆ. ಯವರ ಲೇಖನ, ತೇಜಸ್ವಿ- ಪ್ರೊಫೆಸರ್ ಅವರ ನಡುವಿನ ವಾಗ್ವಾದಗಳ ಚಿತ್ರಣ, ತೇಜಸ್ವಿ, ಲಂಕೇಶರಿಗೆ ಪ್ರೊಫೆಸರ್ ಬರೆದ ಪತ್ರ, ಜಾಗತೀಕರಣದ ವಿಷಯವಾಗಿ ಪತ್ರಿಕೆಗೆ ಬರೆದ ಲೇಖನ – ಇವೆಲ್ಲವೂ ಈ ಪುಸ್ತಕದಲ್ಲಿವೆ. ನಂಜುಂಡಸ್ವಾಮಿಯವರ ಜೊತೆ ಹಲವು ಹೋರಾಟಗಳಲ್ಲಿ ಪಾಲ್ಗೊಂಡಿದ್ದ ನ್ಯಾಯವಾದಿ ಪ್ರೊ॥ ರವಿವರ್ಮಕುಮಾರ್ ಅವರ ಮುನ್ನುಡಿಯಿದೆ.




## ರವೀಂದ್ರನಾಥ ಠಾಕೂರ್ ಗೀತಾಂಜಲಿ

*ಅನುವಾದ : ಜಿ. ರಾಮನಾಥ ಭಟ್*

**ಪುಟ : viii + ೨೨೬** **ಬೆಲೆ : ರೂ. ೧೬೦**

**ಕಾವ್ಯಾಲಯ ಪ್ರಕಾಶಕರು,** ಜಯನಗರ, ಮೈಸೂರು - ೧೪

ಮೂಲ ಬಂಗಾಲಿ ಗೀತಾಂಜಲಿಯ ಒಟ್ಟು ಕವಿತೆಗಳಲ್ಲಿ ಇಂಗ್ಲಿಷ್ ಗೀತಾಂಜಲಿಗೆ ಸೇರಿರದ ಕವಿತೆಗಳು ೧೦೪; ಇಂಗ್ಲಿಷ್ ಗೀತಾಂಜಲಿಯಲ್ಲಿರುವ ಬಂಗಾಲಿ ಗೀತಾಂಜಲಿಯ ಕವಿತೆಗಳು ೫೩. ರವೀಂದ್ರನಾಥ ಠಾಕೂರರು ತಮ್ಮ ಇನ್ನಿತರ ಕವನಸಂಗ್ರಹಗಳಿಂದ ಅನುವಾದಿಸಿ ಇಂಗ್ಲಿಷ್ ಗೀತಾಂಜಲಿಗೆ ಸೇರಿಸಿದ ಕವಿತೆಗಳು ೫೦ – ಹೀಗೆ ಒಟ್ಟು ೨೦೭ ಕವಿತೆಗಳನ್ನು ಕನ್ನಡಕ್ಕೆ ಅನುವಾದಿಸಿ ಅವು ಪ್ರಕಟವಾದ ಅನುಕ್ರಮದಲ್ಲೇ ಜೋಡಿಸಲಾಗಿದೆ. ಪುಸ್ತಕದ ಆರಂಭದಲ್ಲಿ: (೧) ಸ್ವೀಡಿಷ್ ಅಕಾಡೆಮಿಯ ನೊಬೆಲ್ ಪ್ರಶಸ್ತಿ ಆಯ್ಕೆ ಸಮಿತಿಯ ಅಧ್ಯಕ್ಷರಾದ ಹೆರಾಲ್ಡ್ ಜಾರ್ನ್ ಅವರು ಮಾಡಿದ ಪ್ರಶಸ್ತಿ ಪ್ರದಾನ ಭಾಷಣದ ಅನುವಾದವಿದೆ. ಯಾವ ಕಾರಣಕ್ಕಾಗಿ 'ಗೀತಾಂಜಲಿ'ಯನ್ನು ಲೋಕೋತ್ತರ ಕೃತಿಯೆಂದು ನಿರ್ಣಯಿಸಲಾಯಿತೆಂದು ಹೆರಾಲ್ಡ್ ವಿವರಿಸಿದ್ದಾರೆ. (೨) ರವೀಂದ್ರನಾಥ ಠಾಕೂರರು ಮಾಡಿದ ಪ್ರಶಸ್ತಿ ಸ್ವೀಕಾರ ಭಾಷಣದ ಅನುವಾದ ಹಾಗೂ (೩) ಗೀತಾಂಜಲಿ ಕೃತಿಗೆ ಐರಿಷ್ ಕವಿ ಡಬ್ಲ್ಯು. ಬಿ. ಯೇಟ್ಸ್ ಬರೆದ ಮುನ್ನುಡಿಯ ಕನ್ನಡಾನುವಾದವೂ ಇಲ್ಲಿದೆ.

## ಮಹಿಳೆ - ಸಮಾಜ - ಕಾನೂನು



*ಡಾ॥ ಗೀತಾ ಕೃಷ್ಣಮೂರ್ತಿ*

**ಪುಟ : ೨೦೦** **ಬೆಲೆ : ರೂ. ೮೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೯, ಬೆಂಗಳೂರು - ೧

ಪ್ರತಿಯೊಬ್ಬ ಮಹಿಳೆಯ ಬಳಿಯೂ ಇರಬೇಕಾದ ಕಾನೂನು ಕೈಪಿಡಿ. ಕೌಟುಂಬಿಕ ಕ್ರೌರ್ಯ, ಉದ್ಯೋಗ ಸ್ಥಳದಲ್ಲಿ ಕಿರುಕುಳ – ಇವನ್ನೆಲ್ಲ ಮಹಿಳೆಯರು ಅಸಹಾಯಕತೆಯಿಂದ ಸಹಿಸಿಕೊಳ್ಳಬೇಕಾದ ದಿನಗಳು ಮುಗಿಯುತ್ತಿವೆ. ತನ್ನ ಹಕ್ಕುಗಳಿಗಾಗಿ ದನಿಯೇರಿಸಿ ಹೋರಾಡುವ ಕಾಲ ಬಂದಿದೆ. ಈ ಬಗ್ಗೆ ಮಹಿಳೆಯರಿಗೆ ಮಾತ್ರವಲ್ಲ ಇಡೀ ಸಮಾಜಕ್ಕೆ ತಿಳಿವಳಿಕೆ ಮೂಡಬೇಕು ಎಂಬುದು ಕೃತಿಯ ಆಶಯ. ಮಾನಸಿಕ ಹಿಂಸೆ, ಆಸ್ತಿ ಹಕ್ಕು, ಅತ್ಯಾಚಾರ, ಸಮಾನ ವೇತನ, ಚುಡಾಯಿಸುವಿಕೆ – ಹೀಗೆ ಕೆಳ ಮಧ್ಯಮ ವರ್ಗದವರು ತಿಳಿಯಲೇ ಬೇಕಾದ ವಿಚಾರಗಳು ಇಲ್ಲಿವೆ. ಕಾನೂನು ಪರಿಹಾರಗಳನ್ನು ಲೇಖಕಿ ಸರಳ ಭಾಷೆಯಲ್ಲಿ ವಿವರಿಸಿದ್ದಾರೆ. ಇವಲ್ಲದೆ ರೂಪಾ ಕನ್ವರ್, ರೂಪನ್-ಗಿಲ್, ಶಕೀರಾ ಹತ್ಯೆ, ಜೆಸ್ಸಿಕಾ ಕೊಲೆ ಇತ್ಯಾದಿ ಪ್ರಕರಣಗಳ ವಿಶ್ಲೇಷಣೆಯನ್ನೂ ನೀಡಿದ್ದಾರೆ.

– **ಸಹನ,** ನಂ. ೩, 'ಕೆರೆಮನೆ' ಅಪಾರ್ಟ್‌ಮೆಂಟ್ಸ್, 'ದೇವರಕೆರೆ' ಎಕ್ಸ್‌ಟೆನ್ಶನ್, ಇಸ್ರೋ ಲೇಔಟ್, ಬೆಂಗಳೂರು - ೫೬೦ ೦೭೮

# ಅಮೆರಿಕಾದ ಶಾಸಕರ ದುರಹಂಕಾರದ ವರ್ತನೆ

ದ್ವಿಪಕ್ಷೀಯ ಸಂಬಂಧಗಳ ವೃದ್ಧಿ ಮೂರನೇ ದೇಶದೊಂದಿಗೆ ಸಂಬಂಧಗಳಿಗೆ ಅಡ್ಡಿಯಾಗಬಾರದು. ಇದು ಸಾಮಾನ್ಯವಾಗಿ ಎಲ್ಲ ದೇಶಗಳೂ ಅನುಸರಿಸುತ್ತ ಬಂದಿರುವ ಅಂತಾರಾಷ್ಟ್ರೀಯ ಸಂಪ್ರದಾಯಗಳಲ್ಲೊಂದು. ಹಾಗೆಯೇ ಇತರ ದೇಶಗಳ ಆಂತರಿಕ ವ್ಯವಹಾರಗಳಲ್ಲಿ ಹೊರಗಿನವರು ತಲೆಹಾಕಕೂಡದು ಎನ್ನುವುದೂ ಕೂಡ. ಕಳೆದ ಶತಮಾನದ ಐವತ್ತರ ದಶಕದಲ್ಲಿ ಸುವಿಖ್ಯಾತವಾದ ಪಂಚಶೀಲತತ್ವಗಳ ಸಾರವೂ ಅದೇ ಆಗಿತ್ತು. ಇಂಥ ಸತ್ಸಂಪ್ರದಾಯಗಳನ್ನು ಮೊದಲಿನಿಂದಲೂ ಉಲ್ಲಂಘಿಸುತ್ತ ಬಂದಿರುವ ದೇಶ ಅಮೆರಿಕಾ. ಬಲಿಷ್ಠ ಶ್ರೀಮಂತ ರಾಷ್ಟ್ರವಾಗಿರುವುದರಿಂದ ಏನು ಮಾಡಿದರೂ ಸರಿ ಎನ್ನುವ ಉದ್ಧಟ ಮನೋಭಾವ ಆ ದೇಶದ ಆಡಳಿತಗಾರರಲ್ಲಿ ಬೇರೂರಿಬಿಟ್ಟಿದೆ. ಹಿಂದೆಲ್ಲ ಅಂದಿನ ಸೋವಿಯತ್ ರಷ್ಯಾದೊಂದಿಗೆ ಒಳ್ಳೆಯ ಸಂಬಂಧ ಬೆಳೆಸಿದರೆ ಅಮೆರಿಕಾದ ಆಡಳಿತಗಾರರ ಕಣ್ಣು ಕೆಂಪಗಾಗುತ್ತಿತ್ತು. ಬೇಕಾದಷ್ಟು ಒತ್ತಡಗಳನ್ನು ಸಂಬಂಧಪಟ್ಟ ದೇಶದ ಮೇಲೆ ತರುತ್ತಿದ್ದರು. ಈಗ ಏಕಕೇಂದ್ರೀಯ ವ್ಯವಸ್ಥೆಯಲ್ಲಿ ಅಮೆರಿಕಾ ಎಲ್ಲ ಶಿಷ್ಟಾಚಾರಗಳನ್ನು ಬದಿಗೊತ್ತಿ ಅನಾಗರಿಕ ರೀತಿಯಲ್ಲಿ ಇತರ ದೇಶಗಳ ಮೇಲೆ ಒತ್ತಡ ತರುತ್ತಿದೆ. ದುರದೃಷ್ಟಕರ ಸಂಗತಿ ಎಂದರೆ ಚಕಾರವೆತ್ತದೆ ದೇಶಗಳು ಇಂಥ ಒತ್ತಡಗಳನ್ನು ಸಹಿಸಿಕೊಳ್ಳುತ್ತಿರುವುದು. ಅದಕ್ಕೆ ಒಳ್ಳೆಯ ಉದಾಹರಣೆ ಎಂದರೆ ಮನಮೋಹನ್ ಸಿಂಗ್ ನೇತೃತ್ವದಲ್ಲಿರುವ ಕೇಂದ್ರ ಸರಕಾರ. ಸುಮಾರು ಎರಡು ದಶಕಗಳ ಹಿಂದೆ ಸ್ವತಂತ್ರವಾದ ವಿದೇಶಾಂಗ ನೀತಿಯನ್ನು ಪ್ರತಿಪಾದಿಸುತ್ತಿದ್ದ ಭಾರತ ನಿಧಾನವಾಗಿ ಅಮೆರಿಕಾದ ಮರ್ಜಿಗನುಸಾರವಾಗಿ ನಡೆದುಕೊಳ್ಳತೊಡಗಿ, ಈಗ ಪೂರ್ಣವಾಗಿ ಶರಣಾಗುವ ಸೂಚನೆಗಳೇ ಹೆಚ್ಚಾಗಿ ಕಂಡುಬರುತ್ತಿವೆ.




ಪ್ರಧಾನಿ ಮನಮೋಹನ್ ಸಿಂಗ್ ಮತ್ತು ಅಮೆರಿಕಾದ ಅಧ್ಯಕ್ಷ ಬುಷ್ ಪರಸ್ಪರ ಭೇಟಿಯಾಗಿ ಪರಮಾಣು ಕ್ಷೇತ್ರದಲ್ಲಿ 'ಸಹಕರಿಸಲು' ಸಮ್ಮತಿಸಿದ ಮೇಲೆ ಅಮೆರಿಕಾದ ವಿದೇಶಾಂಗ ಸಚಿವಾಲಯದ ಅಧಿಕಾರಿಗಳ ವರ್ತನೆ ವಿಪರೀತ ಮಟ್ಟಕ್ಕೆ ಹೋಗಿದೆ. ವಿದೇಶಾಂಗ ಕಾರ್ಯದರ್ಶಿ ಕಾಂಡಲೀಸಾ ರೈಸ್, ಉಪಕಾರ್ಯದರ್ಶಿ ನಿಕೊಲಾಸ್ ಬರ್ನ್ಸ್ ಮೊದಲಾದವರೆಲ್ಲ ಏಕಪಕ್ಷೀಯವಾದ, ಅಮೆರಿಕಾದ ಕಾಂಗ್ರೆಸ್ ಸದನ ಅಂಗೀಕರಿಸಿರುವ ೧೨೩ ಎಂದು ಕರೆಯುತ್ತಿರುವ ಒಪ್ಪಂದವನ್ನು ಹೇರಲು ನೋಡುತ್ತಿದ್ದಾರೆ. ನಮ್ಮ ದೇಶದ ವಿಜ್ಞಾನಿಗಳು, ಎಡಪಕ್ಷಗಳು, ಜನರು ವಿರೋಧಿಸದೆ ಹೋಗಿದ್ದರೆ, ಮನಮೋಹನ್ ಸಿಂಗ್ ಎಂದೋ ಅಮೆರಿಕಾ ಹೇಳಿದ ಕಡೆ ಸಂತೋಷದಿಂದ ಸಹಿ ಹಾಕುತ್ತಿದ್ದರು. ಈಗ ಕೆಲವು ದಿನಗಳ ಹಿಂದೆ ಅಮೆರಿಕಾದ ಕಾಂಗ್ರೆಸ್ ಸಭೆಯ ವಿದೇಶಾಂಗ ವ್ಯವಹಾರಗಳ ಸಮಿತಿಯ ಅಧ್ಯಕ್ಷ ಟಾಮ್ ಲ್ಯಾಂಟೋಸ್ ಹಾಗೂ ಇತರ ಆರು ಮಂದಿ ಕಾಂಗ್ರೆಸ್ ಸದಸ್ಯರು ಪ್ರಧಾನಿ ಮನಮೋಹನ್ ಸಿಂಗ್‌ಗೆ ಬರೆದಿರುವ ಸುದೀರ್ಘ ಉದ್ಧಟತನದ ಪತ್ರಕ್ಕೆ ಸೂಕ್ತ ಪ್ರತಿಕ್ರಿಯೆ ಅವರು ನೀಡದಿರುವುದೇ ಅದಕ್ಕೆ ಸಾಕ್ಷಿ. ಈ ಹಸ್ತಕ್ಷೇಪಕ್ಕೆ ಆಕ್ಷೇಪವೆತ್ತಿ ಅದನ್ನು ಖಂಡಿಸುವುದು ಅಗತ್ಯವಾಗಿತ್ತು.

ಭಾರತದ ವಿದೇಶಾಂಗ ವ್ಯವಹಾರಗಳಲ್ಲಿ ನೇರವಾಗಿ ಹಸ್ತಕ್ಷೇಪ ಮಾಡುವ ಅಮೆರಿಕಾದ ಕಾಂಗ್ರೆಸ್ಸಿಗರ ಈ ಪತ್ರ ಇರಾನಿನೊಂದಿಗೆ ಭಾರತದ ಸಂಬಂಧಗಳ ಬಗ್ಗೆ ಆಕ್ಷೇಪವೆತ್ತಿದೆ. ಇರಾನಿನೊಂದಿಗೆ ಭಾರತ ಮಾಡಿಕೊಂಡಿರುವ ಇಂಧನಾನಿಲ ಒಪ್ಪಂದವನ್ನು ಪ್ರಶ್ನಿಸಿದೆ. ಅಮೆರಿಕಾ ಈ ಹಿಂದೆಯೇ ಇರಾನಿನೊಂದಿಗೆ ಕೊಳವೆ ಮಾರ್ಗದಲ್ಲಿ ಇಂಧನಾನಿಲವನ್ನು ಪಡೆಯುವ ಭಾರತದ ಯೋಜನೆಯನ್ನು ಅಲ್ಲಗಳೆದಿತ್ತು. ಭಾರತ ಮತ್ತು ಇರಾನಿನ ನಾಯಕರುಗಳ ಪರಸ್ಪರ ಭೇಟಿ, ಬೆಳೆಯುತ್ತಿರುವ ಸಹಕಾರ ಸಂಬಂಧವನ್ನು ಕುರಿತು ಆತಂಕ ವ್ಯಕ್ತಗೊಳಿಸಿರುವ ಕಾಂಗ್ರೆಸ್ ಸದಸ್ಯರು, ಇದು ಹೀಗೆ ಮುಂದುವರಿದರೆ ಭಾರತ-ಅಮೆರಿಕಾ ಸಂಬಂಧಗಳು ಹಳಸಿಕೊಳ್ಳುತ್ತವೆ ಎಂದು ಎಚ್ಚರಿಸಿದ್ದಾರೆ. ಅಮೆರಿಕಾ-ಭಾರತ ನ್ಯೂಕ್ಲಿಯರ್ ಸಹಕಾರ ಒಪ್ಪಂದಕ್ಕೆ ಇರಾನಿನ ಸಂಬಂಧಗಳು ಅಡ್ಡಿಯಾಗುತ್ತದೆ ಎಂದು ಬೆದರಿಕೆ ಒಡ್ಡಿದ್ದಾರೆ. ಇಂಥ ಪತ್ರವನ್ನು ವಿದೇಶಾಂಗ ಖಾತೆಯಾಗಲಿ, ವಿದೇಶಾಂಗ ಸಚಿವರಾಗಲಿ, ಪ್ರಧಾನಿ ಮನಮೋಹನ್ ಸಿಂಗ್ ಅವರಾಗಲಿ ಇದುವರೆಗೆ ಖಂಡಿಸದೇ ಇರುವುದು ಆಶ್ಚರ್ಯಕರ. ಅಲ್ಲದೆ ಬೇಡದ ಸುದ್ದಿಗಳನ್ನೆಲ್ಲ ಉತ್ಪ್ರೇಕ್ಷೆ ಮಾಡಿ ಗದ್ದಲ ಎಬ್ಬಿಸುವ ಮಾಧ್ಯಮಗಳಿಗೆ ಅಮೆರಿಕಾದ ಕಾಂಗ್ರೆಸ್ಸಿಗರ ಈ ಪತ್ರ ಸುದ್ದಿಯಾಗಲೇ ಇಲ್ಲ. ಹೀಗಿದೆ ನಮ್ಮ ಪ್ರಾಮಾಣಿಕತೆ ಮತ್ತು ವ್ಯವಸ್ಥೆ.

# ಬಂದೂಕು ಸಂಸ್ಕೃತಿ ತಂದ ದುರಂತ

ಅಮೆರಿಕಾದ ವರ್ಜೀನಿಯ ತಾಂತ್ರಿಕ ಮಹಾವಿದ್ಯಾಲಯದಲ್ಲಿ ಏಪ್ರಿಲ್ ತಿಂಗಳಲ್ಲಿ ಸಂಭವಿಸಿದ ದುರಂತ ನಾಗರಿಕ ಜಗತ್ತನ್ನು ತಲ್ಲಣಗೊಳಿಸಿತು. ಮೂವರು ಭಾರತೀಯರನ್ನು ಒಳಗೊಂಡಂತೆ ೩೩ ಮಂದಿಯನ್ನು ಆಹುತಿ ತೆಗೆದುಕೊಂಡ ಬಂದೂಕುದಾಳಿ ಅಮೆರಿಕಾದ ಇತಿಹಾಸದಲ್ಲೇ ದೊಡ್ಡ ಘಟನೆ. ಆದರೆ ಅಪರೂಪವಾದ್ದೇನಲ್ಲ. ಹಿಂದೆ ಹೈಸ್ಕೂಲುಗಳಲ್ಲಿ ಇಂಥ ಮಾರಣಹೋಮದ ಪ್ರಕರಣಗಳು ನಡೆದಿವೆ. ಇದು ಅಮೆರಿಕಾದ ಬಂದೂಕು ಸಂಸ್ಕೃತಿಯ ವಿಕೃತರೂಪ ಎಂದು ಹೇಳಿ ತಳ್ಳಿಹಾಕುವಂತಿಲ್ಲ. ಪದೇ ಪದೇ ಸಂಭವಿಸುತ್ತಿರುವ ಇಂಥ ಘಟನೆಗಳಿಗೆ ಕಾರಣ ಅಮೆರಿಕಾದ ಸಾಮಾಜಿಕ ವ್ಯವಸ್ಥೆಯಲ್ಲಿ ಬೇರೂರಿರುವ ಹಿಂಸಾಪ್ರವೃತ್ತಿ, ಅಸಮತೆ, ಅತೃಪ್ತಿ, ಭ್ರಮನಿರಸನಗಳಲ್ಲಿ ಹುಡುಕಬೇಕಾಗಿದೆ. ಒಂದೊಂದು ಬಾರಿ ಇಂಥ ಘಟನೆಗಳು ಸಂಭವಿಸಿದಾಗಲೂ ಅಮೆರಿಕಾದ ಸಮಾಜಶಾಸ್ತ್ರಜ್ಞರು, ಮನೋವಿಜ್ಞಾನಿಗಳು ಏನೇ ಅಧ್ಯಯನ ನಡೆಸಿದರೂ, ಇಂಥ ಕೃತ್ಯಗಳು ವಿಕೃತ ಮನಸ್ಸಿನ ವಿಕಾರಗಳು ಎಂಬ ತೀರ್ಮಾನಕ್ಕೆ ಬರುವುದು ಸಾಮಾನ್ಯ. ಇನ್ನೊಂದು ಘಟನೆ ನಡೆಯುವವರೆಗೆ ಈ ವಿಶ್ಲೇಷಣೆ ಊರ್ಜಿತ. ಈ ಬಾರಿಯೂ ಹಾಗೇ ಆದರೆ ಆಶ್ಚರ್ಯಪಡಬೇಕಾಗಿಲ್ಲ. ಇಷ್ಟಾದರೂ ಅನಿರ್ಬಂಧವಾದ ಬಂದೂಕು ಮಾರಾಟ ಮಾತ್ರ ನಿಲ್ಲುವುದಿಲ್ಲ. ಮುಕ್ತ ಮಾರುಕಟ್ಟೆ, ಕನಿಷ್ಠ ನಿಯಂತ್ರಣದ ಹೆಸರಿನಲ್ಲಿ ಅಮೆರಿಕಾದಲ್ಲಿ ಬಂದೂಕು ಪರ ದೊಡ್ಡ ಲಾಬಿಯೇ ಇದೆ. ವಯಸ್ಸಿಗೆ ಬಂದ ಯುವ ನಾಗರಿಕನಾದರೂ ಜೇಬಿನಲ್ಲಿ ಡಾಲರುಗಳಿದ್ದರೆ ಸುಲಭವಾಗಿ ಬಂದೂಕು ಕೊಳ್ಳಬಹುದು. ಇದರ ಬಗ್ಗೆ ಅಮೆರಿಕಾದಲ್ಲಿ ನಿರಂತರವಾಗಿ ವಾದ ವಿವಾದಗಳು ಮುಗಿಯುವಂತಿಲ್ಲ.

ವರ್ಜೀನಿಯ ತಾಂತ್ರಿಕ ಮಹಾವಿದ್ಯಾನಿಲಯದಲ್ಲಿ ಸಂಭವಿಸಿದ ಘಟನೆಯೂ ಸಮಾಜದಲ್ಲಿನ ಹಿಂಸಾಚಾರದ ಇನ್ನೊಂದು ಮುಖವನ್ನು ತೋರಿಸುತ್ತದೆ. ಘಟನೆಯಲ್ಲಿ ಯದ್ವಾತದ್ವಾ ಬಂದೂಕಿನಿಂದ ಗುಂಡುಹಾರಿಸಿ ಕೊನೆಗೆ ತಾನೂ ಅದಕ್ಕೆ ಬಲಿಯಾದ ವ್ಯಕ್ತಿ ದಕ್ಷಿಣ ಕೊರಿಯ ಮೂಲದ ಯುವಕ ಚೋಸ್ಯುಂಗ್ ಹುಯಿ. ಈಗಾಗಲೆ ಚೋ ವಿಕೃತ ಮನಃಸ್ಥಿತಿಯವನಾಗಿದ್ದ, ಏಕಾಂಗಿಯಾಗಿರುತ್ತಿದ್ದ, ತರಗತಿಗಳಿಗೆ ಸರಿಯಾಗಿ ಹಾಜರಾಗುತ್ತಿರಲಿಲ್ಲ ಎನ್ನುವ ಮಾಹಿತಿ ಎಲ್ಲ ಕಲೆಹಾಕಲಾಗಿದೆ. ಅದೇನೇ ಇರಲಿ ಆತ ಅತೀವವಾದ ಕೀಳರಿಮೆಯನ್ನು ಅನುಭವಿಸುತ್ತಿದ್ದ ಎನ್ನುವುದಂತೂ ನಿಜ. ಈ ದುರ್ಘಟನೆಗೆ ಮುನ್ನ ಆತ ತನ್ನ ಮನಸ್ಸಿನಲ್ಲಿದ್ದುದನ್ನೆಲ್ಲ ತೋಡಿಕೊಂಡಿದ್ದಾನೆ ಒಂದು ವೀಡಿಯೊ ಟೇಪ್‌ನಲ್ಲಿ. ಅದರ ಪೂರ್ಣ ಪಾಠ ಲಭ್ಯವಾದರೆ ಪ್ರಕಟಣೆಗೆ ಯೋಗ್ಯವಾದೀತು. ಅದು ಅಮೆರಿಕಾದ ಸಮಾಜ ವ್ಯವಸ್ಥೆಯಲ್ಲಿ ಹೊರಗಿನವರನ್ನು ಕುರಿತು ಬೇರೂರಿರುವ ಭೇದಭಾವ, ಉಪೇಕ್ಷೆ, ಅನಾದರಣೆ ಇವುಗಳನ್ನು ಹೊರಗೆಡಹಿದೆ, ತತ್ಪರಿಣಾಮವಾಗಿ ವ್ಯಕ್ತಿಯಲ್ಲಿ ಉಂಟಾಗುವ ಹತಾಶೆಯು ವ್ಯಕ್ತಗೊಂಡಿದೆ. ಹಾಗಾಗಿ ಮುಂದೆ ಇಂಥ ಪ್ರಕರಣಗಳು ಸಂಭವಿಸುವುದಿಲ್ಲ ಎನ್ನುವುದಕ್ಕೆ ಯಾವ ಭರವಸೆಯೂ ಇಲ್ಲ. ವ್ಯವಸ್ಥೆಯಲ್ಲಿನ ಈ ಹಿಂಸಾಪ್ರವೃತ್ತಿಯು ಆಡಳಿತಗಾರರು ಅನುಸರಿಸುತ್ತಿರುವ ನೀತಿಗಳಲ್ಲೂ ವ್ಯಕ್ತಗೊಳ್ಳುತ್ತಿದೆ ಎಂದರೆ ಉತ್ಪ್ರೇಕ್ಷೆ ಏನಿಲ್ಲ. ದುರಾಕ್ರಮಣಕಾರಿ ಯುದ್ಧಗಳನ್ನು ಕೈಗೊಳ್ಳುವ ವ್ಯಕ್ತಿಗಳೇ ಅಧ್ಯಕ್ಷಪಟ್ಟಕ್ಕೆ ಪುನರಾಯ್ಕೆ ಆಗುತ್ತಿರುವುದು, ಅವರ ಆಡಳಿತೆಯನ್ನು ಸಹಿಸಿಕೊಂಡಿರುವುದೂ ನಿದರ್ಶನ.

# ಯೂರೋಪು : ಬಲಪಂಥದತ್ತ ಒಲವು

ಯೂರೋಪಿನ ದೇಶಗಳು ಎಡಪಕ್ಷಗಳತ್ತ ಒಲವು ತೋರಿರುವುದು ಕಡಿಮೆ. ಲಿಬರಲ್ ನೀತಿಗಳಿಗೆ ಬೆಂಬಲ ನೀಡುತ್ತಿರುವುದು ಸಾಮಾನ್ಯ. ಯಾವತ್ತೂ ಅಮೆರಿಕಾ ನೀತಿಗಳಿಗೆ ಹೊಂದಿಕೊಳ್ಳುವುದು ಈ ದೇಶಗಳಿಗೆ ಒಗ್ಗಿಹೋಗಿದೆ. ಏನಾದರೂ ಪ್ರತಿರೋಧವಿದ್ದರೆ ಅದು ಸ್ವತಂತ್ರನೀತಿಯನ್ನು ಎತ್ತಿಹಿಡಿಯುವುದಕ್ಕಿಂತ ರಿಯಾಯಿತಿಗಳನ್ನು ಪಡೆದುಕೊಳ್ಳುವುದಕ್ಕೆ ಸೀಮಿತ ಅಷ್ಟೆ. ಎರಡನೇ ಮಹಾಯುದ್ಧದ ನಂತರ ಈ ಭೂಭಾಗದ ದೇಶಗಳಲ್ಲಿ, ಮುಖ್ಯವಾಗಿ ಫ್ರಾನ್ಸ್, ಇಟಲಿ ಮೊದಲಾದ ದೇಶಗಳಲ್ಲಿ ಪ್ರಬಲವಾದ ಸಮಾಜವಾದಿ ಪಕ್ಷಗಳಿದ್ದವು. ಸೋಷಲ್ ಡೆಮಾಕ್ರೆಟಿಕ್ ಪಕ್ಷಗಳ ನೀತಿಗಳ ಮೇಲೆ ಸಾಕಷ್ಟು ಪ್ರಭಾವ ಬೀರಲು ಸಮರ್ಥವಾಗಿದ್ದುವು. ಈಗೆಲ್ಲ ಅದು ಹಳೆಯ ಕತೆ. ಸೋಷ್ಯಲ್ ಡೆಮಾಕ್ರೆಟಿಕ್ ಮತ್ತು ಸೋಷಲಿಸ್ಟ್ ಪಕ್ಷಗಳಲ್ಲಿ ಈಗ ವ್ಯತ್ಯಾಸವೇನೂ ಇಲ್ಲವಾಗಿದೆ. ಅಮೆರಿಕಾದ ನೆರಳಿನಲ್ಲಿ ಸಾಗುವುದು ಈ ದೇಶಗಳಿಗೆ ಅಭ್ಯಾಸವಾಗಿಬಿಟ್ಟಿದೆ.

ಈ ದೃಷ್ಟಿಯಿಂದ ನೋಡಿದಾಗ ಯಾರೇ ಅಧಿಕಾರಕ್ಕೆ ಬಂದರೂ ಪರಿಣಾಮ ಒಂದೇ

## ನವಕರ್ನಾಟಕ ಪ್ರಕಾಶನದ ನವೀಕೃತ ಪುಸ್ತಕ ಮಳಿಗೆಯ ಪುನರಾರಂಭ ಮತ್ತು ಪುಸ್ತಕಗಳ ಬಿಡುಗಡೆ



ಮೈಸೂರಿನಲ್ಲಿ ನವಕರ್ನಾಟಕ ಪ್ರಕಾಶನದ ನವೀಕೃತ ಪುಸ್ತಕ ಮಳಿಗೆಯನ್ನು ತಾರೀಖು ೧೯-೫-೨೦೦೭ರ ಶನಿವಾರ ಹಿರಿಯ ವಿಜ್ಞಾನ ಲೇಖಕರಾದ ಪ್ರೊ|| ಜೆ. ಆರ್. ಲಕ್ಷ್ಮಣರಾವ್ ಉದ್ಘಾಟಿಸಿದರು. ಅದೇ ಸಂದರ್ಭದಲ್ಲಿ ಡಾ|| ಪಿ. ಆರ್. ವಿಶ್ವನಾಥ್‌ರವರ 'ಭೂಮಿಯಿಂದ ಬಾನಿನತ್ತ', ಶ್ರೀ ಜನಾರ್ಧನ ಗುಂಗುರುಮಳೆ ಅವರ 'ಕ್ರಿಯಾತ್ಮಕ ಪರಿಸರ ಅಧ್ಯಯನ' ಹಾಗೂ ಡಾ|| ಬಿ. ಪಿ. ಮಂಜುನಾಥ ಅವರ 'ಪಶುಪಾಲನೆ' - ಈ ಮೂರು ಕೃತಿಗಳನ್ನು ಪ್ರೊ|| ಲಿಂಗದೇವರು ಹಳೆಮನೆ ಅವರು ಅನಾವರಣಗೊಳಿಸಿದರು.

ಮೈಸೂರಿನ ಪುಸ್ತಕಾಸಕ್ತರು ಹಾಗೂ ನವಕರ್ನಾಟಕದ ಹಿತೈಷಿಗಳು ಭಾರೀ ಸಂಖ್ಯೆಯಲ್ಲಿ ಭಾಗವಹಿಸಿದ್ದ ಸಮಾರಂಭದಲ್ಲಿ ಶ್ರೀ ಆರ್. ಎಸ್. ರಾಜಾರಾಮ್ ಪ್ರಾಸ್ತಾವಿಕ ಭಾಷಣ ಮಾಡಿದರು. ಮುಖ್ಯ ಅತಿಥಿಗಳಿಗೆ ಮತ್ತು ಲೇಖಕರಿಗೆ ನೆನಪಿನ ಕಾಣಿಕೆ ನೀಡಿ ಸನ್ಮಾನಿಸಲಾಯಿತು.





ರೀತಿಯದು ಎನ್ನಬಹುದು. ಫ್ರಾನ್ಸ್‌ನಲ್ಲಿ ಈಚೆಗೆ ನಡೆದ ಅಧ್ಯಕ್ಷೀಯ ಚುನಾವಣೆಗಳಲ್ಲಿ ಬಲಪಂಥೀಯ 'ಯೂನಿಯನ್ ಫಾರ್ ಎ ಪಾಪ್ಯುಲರ್ ಮೂವ್‌ಮೆಂಟ್' ಪಾರ್ಟಿಯ ನಾಯಕ ಸಾರ್ಕೋಜಿ ಆಯ್ಕೆಯಾಗಿದ್ದಾರೆ. ಪ್ರತಿಸ್ಪರ್ಧಿ ಸೋಷಲಿಸ್ಟ್ ಪಾರ್ಟಿಯ ಅಭ್ಯರ್ಥಿ ಸೆಗೊಲೀನ್ ರೊಯಾಲ್ ಆಯ್ಕೆಯಾಗಿದ್ದರೆ ಫ್ರಾನ್ಸ್‌ನಲ್ಲಿ ಮೊದಲ ಮಹಿಳಾ ಅಧ್ಯಕ್ಷ ರಾಗುತ್ತಿದ್ದರು. ತೀವ್ರವಾದ ನಿರುದ್ಯೋಗ, ಜನಾಂಗೀಯ ಸಮಸ್ಯೆ, ಅಕ್ರಮ ವಲಸೆಗಾರರು, ಯುವಜನರ ಆಕ್ರೋಶ ಮೊದಲಾದ ಗಂಭೀರ ಪ್ರಶ್ನೆಗಳನ್ನು ಫ್ರಾನ್ಸ್‌ನ ನೂತನ ಅಧ್ಯಕ್ಷರು ಹೇಗೆ ನಿಭಾಯಿಸುತ್ತಾರೆ ನೋಡಬೇಕಾಗಿದೆ. ವಿದೇಶಾಂಗ ವ್ಯವಹಾರಗಳ ಕ್ಷೇತ್ರದಲ್ಲಂತೂ ಹೆಚ್ಚಿನ ಬದಲಾವಣೆಗಳನ್ನೇನೂ ನಿರೀಕ್ಷಿಸುವಂತಿಲ್ಲ. ಅಮೆರಿಕಾಗೆ ಇನ್ನಷ್ಟು ಹತ್ತಿರವಾಗುವುದರಲ್ಲಿ ಸಂದೇಹವಿಲ್ಲ. ಫ್ರಾನ್ಸ್‌ನಲ್ಲಿರುವ ಬಲಪಂಥೀಯ ಆಡಳಿತ ಯೂರೋಪಿಯನ್ ಯೂನಿಯನ್ನಿನ ಮೇಲೆ ಪರಿಣಾಮ ಬೀರುವುದು ಖಚಿತ.

ಮುಂದಿನ ತಿಂಗಳ (ಜುಲೈ) ಕೊನೆಯಲ್ಲಿ ಗ್ರೇಟ್ ಬ್ರಿಟನ್ನಿನಲ್ಲಿ ಪ್ರಧಾನಿ ಟೋನಿ ಬ್ಲೇರ್ ಆಳ್ವಿಕೆ ಕೊನೆಗೊಳ್ಳಲಿದೆ. ದೀರ್ಘಕಾಲ ಲೇಬರ್ ಪಕ್ಷದ ಪ್ರಧಾನಿಯಾಗಿ ಆಡಳಿತ ನಡೆಸಿದ್ದನ್ನು ಬಿಟ್ಟರೆ ಬ್ಲೇರ್ ಸಾಧನೆ ಹೇಳಿಕೊಳ್ಳುವಂಥದ್ದೇನಿಲ್ಲ. ಬ್ರಿಟನ್ನನ್ನು ಅಮೆರಿಕಾದ ಬಾಲಂಗೋಚಿ ಮಾಡಿದ ಕೀರ್ತಿ ಅವರದು. ಕನ್ಸರ್ವೇಟಿವ್ ಪಕ್ಷವನ್ನು ಅವರು ಈ ವಿಷಯದಲ್ಲಿ ಮೀರಿಸಿದ್ದಾರೆ. ಲೇಬರ್ ಪಕ್ಷದಲ್ಲಿ ಉಳಿದಿದ್ದ ಅಲ್ಪ ಸ್ವಲ್ಪ ಸಮಾಜವಾದಿ ವಿಚಾರಗಳನ್ನು ಅವರು ಯಶಸ್ವಿಯಾಗಿ ತೊಡೆದು ಹಾಕಿದ್ದಾರೆ. ಹೆಸರಿಗೆ ಮಾತ್ರ ಲೇಬರ್ ಪಕ್ಷ ಅಷ್ಟೆ. ಕನ್ಸರ್‌ವೇಟಿವ್‌ಗಳಿಗೂ ಇವರಿಗೂ ಈಗ ವ್ಯತ್ಯಾಸವೇನೂ ಇಲ್ಲ ಎನ್ನುವುದನ್ನು ಹತ್ತು ವರ್ಷಗಳಲ್ಲಿ ಟೋನಿ ಬ್ಲೇರ್ ತೋರಿಸಿದ್ದಾರೆ. ಇರಾಕಿನ ಮೇಲೆ ದುರಾಕ್ರಮಣದಲ್ಲಿ ಸುಳ್ಳು ಸ್ಪಷ್ಟನೆಗಳನ್ನು ಮಾಡಿದ ಬ್ಲೇರ್, ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್ ಹಿಂದೆ ಹೋದದ್ದೇ ಅವನತಿಗೆ ಮೂಲವಾಯಿತು. ಈಗ ಪಕ್ಷದಲ್ಲಿ ಅವರು ವರ್ಚಸ್ಸು ಕಳೆದುಕೊಂಡಿದ್ದಾರಷ್ಟೇ ಅಲ್ಲ ಲೇಬರ್ ಪಕ್ಷವೇ ಅಧೋಗತಿಗಿಳಿದಿದೆ. ಇದರಿಂದ ಮೇಲೇಳುವುದು ಸದ್ಯಕ್ಕಂತೂ ಸಾಧ್ಯವಾಗದು.

## ಪಾಕಿಸ್ತಾನದಲ್ಲಿ ಭುಗಿಲೆದ್ದಿರುವ ಹಿಂಸಾಚಾರ

**ನೆ**ರೆಯ ರಾಷ್ಟ್ರ ಪಾಕಿಸ್ತಾನದಲ್ಲಿ, ಮುಖ್ಯವಾಗಿ ಕರಾಚಿಯಲ್ಲಿ, ಕೆಲದಿನಗಳಿಂದ ನಡೆಯುತ್ತಿರುವ ಘರ್ಷಣೆಗಳು, ಸಂಭವಿಸಿರುವ ಸಾವು ನೋವುಗಳು ಆತಂಕಕಾರಿ. ಇದು ಯಾವ ಪರಿಣಾಮವನ್ನುಂಟುಮಾಡುವುದು ಎಂಬುದೀಗ ಪ್ರಶ್ನೆ. ಸರ್ವಾಧಿಕಾರಿ ಆಡಳಿತದ ಕೊನೆಯ ದಿನಗಳನ್ನು ಇದು ಸೂಚಿಸುತ್ತದೆಯೆ ? ಹಿಂದೆಲ್ಲ ಪಾಕಿಸ್ತಾನದಲ್ಲಿ ಇಂಥ ಘಟನೆಗಳು ಸಂಭವಿಸಿ ಆಡಳಿತದಲ್ಲಿ ಬದಲಾವಣೆಗಳನ್ನು ತಂದಿದೆ. ಜನರಿಗೆ ಮುಷರಫ್ ಆಡಳಿತದಲ್ಲಿ ಎಲ್ಲವೂ ಸರಿಯಿಲ್ಲ ಎನ್ನುವುದು ಕೆಲ ತಿಂಗಳಿಂದ ಕಂಡುಬರುತ್ತಿದೆ. ಚುನಾವಣೆಗಳು ನಡೆಯಬೇಕಾಗಿರುವ ವರ್ಷದಲ್ಲಿ ಈ ಬಗೆಯ ಹಿಂಸಾತ್ಮಕ ಘರ್ಷಣೆಗಳು ಸಂಭವಿಸುತ್ತಿವೆ. ಒಂದು ದೃಷ್ಟಿಯಲ್ಲಿ ಇದು ಪ್ರಜಾಪ್ರಭುತ್ವಕ್ಕಾಗಿ, ಅಧಿಕಾರದಲ್ಲಿ ಸೇನೆಯ ಹಿಡಿತದ ವಿರುದ್ಧವಾಗಿ ಜನತೆಯಲ್ಲಿ ಭುಗಿಲೆದ್ದ ಆಕ್ರೋಶ. ಕೆಲದಿನಗಳ ಹಿಂದೆ ಅಧ್ಯಕ್ಷ ಮುಷರಫ್ ದೇಶದ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಚೌಧರಿಯವರನ್ನು ಪದಚ್ಯುತಗೊಳಿಸಿದ್ದು ಈ ಆಕ್ರೋಶಕ್ಕೆ ಒಂದು ನೆಪ ಮಾತ್ರ. ಇದು ಇಷ್ಟಕ್ಕೇ ನಿಲ್ಲುತ್ತದೆ ಎಂದು ಹೇಳುವಂತಿಲ್ಲ.

ಎಲ್ಲ ವಿರೋಧಪಕ್ಷಗಳೂ, ಪ್ರಜಾಪ್ರಭುತ್ವದಲ್ಲಿ ಆಸಕ್ತಿ ಇರುವವರೂ, ವಕೀಲರುಗಳು ದೇಶಾದ್ಯಂತ ಪ್ರತಿಭಟನೆಯಲ್ಲಿ ತೊಡಗಿದ್ದಾರೆ. ಕರಾಚಿಯಲ್ಲಿ ನಡೆದ ಘರ್ಷಣೆಗಳಲ್ಲಿ ಹಿಂಸಾಚಾರದಲ್ಲಿ ತೊಡಗಿದ್ದು ಮುಷಾರಫ್‌ಗೆ ಬೆಂಬಲ ನೀಡುತ್ತಿರುವ ಮುಜಾಹಿದ್ ಕ್ವಾಮಿ ಮೂವ್‌ಮೆಂಟ್ ತಂಡದವರು. ಈ ಚಳವಳಿಯಲ್ಲಿರುವವರು ಹೆಚ್ಚಾಗಿ ದೇಶದ ವಿಭಜನೆಯ ಸಮಯದಲ್ಲಿ ಭಾರತದಿಂದ ಹೋಗಿ ನೆಲೆಸಿದ ಮುಸಲ್ಮಾನರು. ಹೆಚ್ಚು ಕಡಿಮೆ ಎರಡನೇ ದರ್ಜೆ ನಾಗರಿಕರಾಗಿರುವ ಇವರು ಯಾವತ್ತೂ ಆಡಳಿತ ಪಕ್ಷದ ಪರವಾಗಿದ್ದರೂ, ಸೌಲಭ್ಯ ಗಳಿಂದ ವಂಚಿತರು. ಹಿಂದುಳಿದಿರುವಿಕೆಯಿಂದಾಗಿ ಮೂಲಭೂತವಾದಿಗಳೇ ಇದರಲ್ಲಿ ಅಧಿಕ. ಮುಷರಫ್‌ಗೆ ಇವರ ಬೆಂಬಲ, ಆತ ಕೂಡ ತಮ್ಮವನೆಂದು. ನ್ಯಾಯಮೂರ್ತಿ ಚೌಧರಿಯವರ ಉಚ್ಚಾಟನೆ ಮುಷರಫ್ ಆಡಳಿತಕ್ಕೆ ದೊಡ್ಡ ಸವಾಲಾಗಿ ಪರಿಣಮಿಸಿದೆ.

ಭಾರತದ ಮಟ್ಟಿಗೆ ಈ ಬೆಳವಣಿಗೆಗಳ ಪರಿಣಾಮಗಳನ್ನು ಎಚ್ಚರಿಕೆಯಿಂದ ಅವಲೋಕಿಸ ಬೇಕಾಗಿದೆ. ಪಾಕಿಸ್ತಾನದಲ್ಲಿ ಯಾರೇ ಅಧಿಕಾರಕ್ಕೆ ಬಂದಾಗ್ಯೂ ಅವರೊಂದಿಗೆ ವ್ಯವಹರಿಸುವುದು ಅನಿವಾರ್ಯ. ಪಾಕಿಸ್ತಾನದೊಂದಿಗೆ ಇದುವರೆಗೆ ನಡೆಸಿರುವ ಶಾಂತಿ ಸಂಧಾನಗಳು ವ್ಯರ್ಥವಾಗದಂತೆ ನೋಡಿಕೊಳ್ಳುವುದು ಮುಖ್ಯವಾಗುತ್ತದೆ.

ಸೀಯಾರ್ಕೆ
'ಚೌಬೀನ', ೮೪೯, ೬ನೇ ಕ್ರಾಸ್, ೧ನೇ ಮೇನ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಜೀವ ನದಿಯ ಜಾಡು ಹಿಡಿದು ಅಸ್ಪೃಶ್ಯಲೋಕದಲ್ಲೊಂದು ಪಯಣ

'**ತ**ಲಪರಿಗೆ' ಎಂದರೆ ನೀರ್ಬುಗ್ಗೆ ಅಥವಾ ನೀರು ಚಿಲುಮೆ, ಇದು ಕೃತಿಯ ಹೆಸರು. ''ಜೀವ ನದಿಯ ಜಾಡು ಹಿಡಿದು – ಅಸ್ಪೃಶ್ಯಲೋಕದಲ್ಲೊಂದು ಪಯಣ'' – ಇದು ಕೃತಿಯೊಳಗೆ ಪ್ರವೇಶಿಸುವ ಮುನ್ನ ಗಟ್ಟಿಹೊದಿಕೆಯ ಮೇಲೆ ಕಾಣಿಸಿಕೊಳ್ಳುವ ಕೃತಿಯ ಸ್ಲೋಗನ್. 'ತಲಪರಿಗೆ' ಅಸ್ಪೃಶ್ಯತೆ ಕುರಿತ ಒಂದು ಸಾಂದರ್ಭಿಕ ದಾಖಲೆ. ಇದು ಅಸ್ಪೃಶ್ಯಲೋಕದ ತಲ್ಲಣಗಳನ್ನು ಒಂದು ನಿರ್ದಿಷ್ಟ ಕಾಲ ಘಟ್ಟದಲ್ಲಿ ಗ್ರಹಿಸುವ ಪ್ರಯತ್ನ ಎನ್ನುವ ಕೃತಿಯ ಮುಖ್ಯ ಸಂಪಾದಕ ಕೋಟಿಗಾನಹಳ್ಳಿ ರಾಮಯ್ಯ ಒಂದು ಪುರಾಣ ಕಥೆಯನ್ನು ಇಲ್ಲಿ ಬಿಚ್ಚುತ್ತಾರೆ: ''ಈ ಅಸ್ಪೃಶ್ಯಲೋಕ ಅಸಂಖ್ಯ ಗಾಯಗಳ ಲೋಕ. ಅಸ್ಪೃಶ್ಯರು ಆಚರಿಸುವ 'ಭಾರತ ಹುಣ್ಣಿಮೆ'ಯಲ್ಲಿ ಒಂದು ಮುಖ್ಯ ಇಂಗಿತವಿದೆ. ಅಂದು ಕೇರಿಯ ಗುಡಿಯ ಮುಂದೆ ಮಡಿಕೆಯಲ್ಲಿ ಕುಡಿಯುವ ನೀರು ಮತ್ತು ಸೂಜಿ-ದಾರವನ್ನು ಇಡುವುದು ಪದ್ಧತಿ. ಮಹಾಭಾರತದ ಯುದ್ಧಕ್ಕೆ ಹೋಗಿರುವ ತಮ್ಮ ಪೂರ್ವಿಕರು ಅಂದು ಮರಳಿ ಬರುತ್ತಾರೆ. ಯುದ್ಧದಲ್ಲಿ ಹರಿದ ಮೈ ಗಾಯಗಳನ್ನು ಹೊಲಿದುಕೊಳ್ಳುತ್ತಾರೆ. ನೀರು ಕುಡಿದು ದಣಿವಾರಿಸಿಕೊಳ್ಳುತ್ತಾರೆ.'' ಇದಿರಲಿ.

೫೨೦ ಪುಟಗಳ ಈ ಕೃತಿಯಲ್ಲಿ ೫ ಭಾಗಗಳಿವೆ. ಒಂದನೇ ಭಾಗದಲ್ಲಿ ಅಸ್ಪೃಶ್ಯತೆ, ಆರ್ಥಿಕತೆ ಮತ್ತು ಅಭಿವೃದ್ಧಿ, ವರ್ಣವ್ಯವಸ್ಥೆ ನಿರ್ಮೂಲನೆ, ದಲಿತ ಚಳುವಳಿಗಳು, ದಲಿತರು ಮತ್ತು ಮಾನವ ಹಕ್ಕುಗಳು, ಶಿಕ್ಷಣ ಮತ್ತು ಸಾಮಾಜಿಕ ಚಲನೆ, ಬ್ರಾಹ್ಮಣೀಯ ಸಂರಚನೆ ಮತ್ತು ಆದಿವಾಸಿಗಳು ಮತ್ತು ಮುಸ್ಲಿಮರ ನಡುವಿನ ಅಸ್ಪೃಶ್ಯತೆಯ ಮುಖಗಳ ಬಗ್ಗೆ ವಿವಿಧ ಲೇಖಕರ ಲೇಖನಗಳಿವೆ. ಉಳಿದ ೪ ಭಾಗಗಳಲ್ಲಿ ೯ ಲೇಖನಗಳು, ೧೮ ಸಂದರ್ಶನಗಳು, ೩ ಆತ್ಮಕತೆಗಳು, 'ಗರಿಗೆದರಿದ ನವಿಲು' ಕೃತಿಯ ಅಸ್ಪೃಶ್ಯ ಜನಪದದ ಕಲಾವಿದರ ಆಯ್ದ ಸಂಕ್ಷಿಪ್ತ ಅನುಭವಗಳು ಮತ್ತು 'ಬುದ್ಧ ಶಾಸನ' ಕೃತಿಯಿಂದ ಆಯ್ದ ಜಾತಕ ಕಥೆ 'ಪ್ರಾಚೀನ ಅಸ್ಪೃಶ್ಯ ಕಥನ'ಗಳು ಎಲ್ಲವೂ ಇವೆ.

ಪ್ರಸ್ತುತ, ದೇಶದಲ್ಲಿ ಅಸಲಿ ಚಿಂತಕರಿಲ್ಲ ಎನ್ನುವ ಮಾತು ಕೇಳಿಬರುತ್ತಿದೆ. ೧೯೫೬ರಲ್ಲಿ ಡಾ॥ ಬಿ. ಆರ್. ಅಂಬೇಡ್ಕರ್ ಪರಿನಿರ್ವಾಣ ಹೊಂದಿದ ಮೇಲೆ ಭಾರತದಲ್ಲಿ ಅವರಂತಹ ಮತ್ತೊಬ್ಬ ಅಸಲಿ ಚಿಂತಕ, ಧೀಮಂತ ವ್ಯಕ್ತಿ ಹುಟ್ಟಿಬರಲಿಲ್ಲ. ಪೂರ್ಣವಾಗಿ ತಳಕ್ಕೆ ಇಳಿದುಹೋಗಿದ್ದ ಒಂದು ಸಮಾಜಕ್ಕೆ ಅಂಬೇಡ್ಕರ್ ಅವರು ಚಿಕಿತ್ಸೆ ನೀಡಿ ಚೈತನ್ಯ ತುಂಬಿದರು. ಬಹುಶಃ ಪ್ರಪಂಚದಲ್ಲಿ ಇವರ ಸಾಲಿಗೆ ಬರುವವರೆಂದರೆ ಮಾರ್ಟಿನ್ ಲೂಥರ್ ಕಿಂಗ್ ಮತ್ತು ನೆಲ್ಸನ್ ಮಂಡೇಲಾ. ಇವರು ಅಸಲಿ ಚಿಂತಕರಲ್ಲದಿದ್ದರೂ ಅಂಬೇಡ್ಕರರಂತೆ ಒಂದು ಸಮಾಜಕ್ಕೆ ಹೆಗಲು ಕೊಟ್ಟು ನಿಂತವರು. ಅಂಬೇಡ್ಕರ್ ಅವರು ತಮ್ಮ ಜೀವನದಲ್ಲಿ ರಚಿಸಿದ ಬರಹ ಮತ್ತು ಭಾಷಣಗಳನ್ನು ಮೊದಲ ಬಾರಿಗೆ ಮಹಾರಾಷ್ಟ್ರ ಸರಕಾರ ೧೭ ಸಂಚಿಕೆಗಳಲ್ಲಿ (ಇಂಗ್ಲಿಷ್) ಹೊರತಂದಿತ್ತು. ಆದರೆ ಈ ಸಂಚಿಕೆಗಳನ್ನು ನೋಡುವ ಭಾಗ್ಯ ಅಂಬೇಡ್ಕರ್ ಅವರಿಗೆ ದೊರಕಲಿಲ್ಲ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಈ ಸಂಚಿಕೆಗಳನ್ನು ಕರ್ನಾಟಕ ಸರಕಾರದ ಸಹಾಯದಿಂದ ಅದ್ಭುತವಾಗಿ ಹೊರತಂದಿತು. ಈ ಕೃತಿಗಳು ಕೆಲವು ವರ್ಷಗಳ ಕಾಲ ದಲಿತರು ಮತ್ತು ಬುದ್ಧಿಜೀವಿಗಳ ತಲೆ ಹೊಕ್ಕಿದರೂ ಕೊನೆಗೆ ಪುಸ್ತಕ ಕಪಾಟುಗಳನ್ನು ಸೇರಿಕೊಂಡವು.

ಇದನ್ನೆಲ್ಲ 'ತಲಪರಿಗೆ' ಕೃತಿಯೊಂದಿಗೆ ಯಾಕೆ ಹೇಳುತ್ತಿದ್ದೇನೆಂದರೆ ವಿವಿಧ ಗಣ್ಯರು ರಚಿಸಿರುವ ೯ ಲೇಖನಗಳನ್ನು ಓದಿದಾಗ ನಮಗೆ ಯಾವ ಹೊಸ ಆಲೋಚನೆಗಳೂ ಕಾಣಿಸುವುದಿಲ್ಲ. ಅಂಬೇಡ್ಕರ್ ಅವರ ಸಂಚಿಕೆಗಳಲ್ಲಿರುವ ಚಿಂತನೆಗಳನ್ನೇ ಜಾಗತೀಕರಣದ ಕೊಡುಗೆಯಾದ ಕಂಪ್ಯೂಟರ್‌ನಲ್ಲಿ ಕಟ್ ಅಂಡ್ ಪೇಸ್ಟ್ ಮಾಡಿ ಒಂದಷ್ಟು ರೀಫೈನ್ ಮಾಡಿರುವುದು ಕಾಣಿಸುತ್ತದೆ. (ಭಾನುಪ್ರತಾಪ್ ಸಿಂಗ್ ಅವರ 'ದಲಿತ್ ಡೈರಿ' ಲೇಖನಗಳಲ್ಲಿ ಮಾತ್ರ ಸ್ವಲ್ಪಮಟ್ಟಿಗೆ ಕೆಲವು ಹೊಸ ಆಲೋಚನೆಗಳನ್ನು ನೋಡಬಹುದು. ಹಾಗೆಯೇ ಕಾಂಚ ಐಲಯ್ಯ, ಗೋಪಾಲ್ ದಾಸ್ ಮುಂತಾದವರನ್ನು ಹೆಸರಿಸಬಹುದು.) ಮೊದಲನೇ ಲೇಖನದಲ್ಲಿ ಸರಕಾರ ಪಟ್ಟಿಮಾಡಿರುವ ಇತ್ತೀಚಿನ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಜನಸಂಖ್ಯೆ, ಸಾಕ್ಷರತೆ, ದುಡಿಮೆಗಾರರ ಸಂಖ್ಯೆ, ಕೃಷಿ ಅವಲಂಬನೆ ಇತ್ಯಾದಿಯ ಅಂಕಿಅಂಶಗಳು ದೊರಕುತ್ತವೆ. 'ಅಸ್ಪೃಶ್ಯತೆಯ ಆದಿವಾಸಿ ಮುಖ'ದ ಲೇಖನದಲ್ಲಿ ಎಸ್. ಶ್ರೀಕಾಂತ್ ಅವರು ಆದಿವಾಸಿಗಳಲ್ಲಿ ಅಸ್ಪೃಶ್ಯತೆಗೆ ಸಂಬಂಧಪಟ್ಟಂತೆ ಕೆಲವು ವಿವರಗಳನ್ನು ವಿಶ್ಲೇಷಿಸಿದ್ದಾರೆ. ಯಾವ ಜೀವನಾಧಾರವೂ ಇಲ್ಲದೆ ಕಾಡು ಮೇಡುಗಳಲ್ಲಿ ವಾಸಿಸುವ, ಸೊಪ್ಪುಸೆದೆಯನ್ನೇ ತಿಂದುಕೊಂಡಿರುವ ಬುಡಕಟ್ಟು ಜನರೂ ಅಸ್ಪೃಶ್ಯತೆಯನ್ನು ಆಚರಿಸುತ್ತಿದ್ದಾರೆಂದರೆ ಈ ದೇಶದ ಸಾಮಾಜಿಕ ಮಟ್ಟ ಎಷ್ಟರಮಟ್ಟಿಗೆ ಕೊಳೆತು ನಾರುತ್ತಿದೆ ಎನ್ನುವುದು ತಿಳಿಯುತ್ತದೆ. ಇದರ ಬೇರುಗಳು ಎಲ್ಲಿ ಹುದುಗಿವೆ? ಇದನ್ನು ನಾಶ ಮಾಡುವುದು ಹೇಗೆ? ಎನ್ನುವ ಪ್ರಶ್ನೆಗಳು ಶತಶತಮಾನಗಳಿಂದಲೂ ಚಾರ್ವಾಕರು, ಲೋಕಾಯತರು, ಬುದ್ಧ, ಬಸವಣ್ಣ, ಸರ್ವಜ್ಞ, ಗಾಂಧಿ, ಅಂಬೇಡ್ಕರ್‌ರಂತಹವರನ್ನು ಕಾಡುತ್ತಲೇ ಬಂದಿವೆ.

ಏಪ್ರಿಲ್ ೨೮, ೧೯೪೨ರಂದು ಡಾ॥ ಅಂಬೇಡ್ಕರ್ ಅವರು ಒಂದು ಭಾಷಣದಲ್ಲಿ ಈ ಮಾತುಗಳನ್ನು ಹೇಳಿದ್ದರು: ''ಹಿಂದೂ ಸಮಾಜವನ್ನು ಅದರ ಕೆಡುಕುಗಳಿಂದ ಮುಕ್ತಗೊಳಿಸಬಹುದೆಂದು, ದಮನಿತ ವರ್ಗವನ್ನು ಸಮಾನತೆಯ ಪಾತಳಿಗೆ ತರಬಹುದೆಂದು ನಾನು ಬಹುಕಾಲದವರೆಗೂ ಎಣಿಸಿದ್ದೆ. ಆ ಆಶಯವೇ 'ಮಹಾಡ್ ಸತ್ಯಾಗ್ರಹ'ವನ್ನು,'ನಾಸಿಕ್ ದೇವಾಲಯ ಪ್ರವೇಶ ಚಳುವಳಿ'ಯನ್ನು ಪ್ರೇರೇಪಿಸಿದ್ದು. ಈ ಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡೇ ನಾವು ಮನುಸ್ಮೃತಿಯನ್ನು ಸುಟ್ಟಿದ್ದು, ಸಾಮೂಹಿಕ ಜನಿವಾರ ಕಾರ್ಯಕ್ರಮವನ್ನು ಆಯೋಜಿಸಿದ್ದು. ಈ ಅನುಭವ ನನಗೆ ಸಾಕಷ್ಟು ಕಲಿಸಿದೆ. ಇಂದು ನನಗೆ ಖಚಿತವಾಗಿ ಮನದಟ್ಟಾಗಿರುವ ಅಂಶವೆಂದರೆ, ದಮನಿತ ವರ್ಗಕ್ಕೆ ಹಿಂದೂಗಳಲ್ಲಿ ಸಮಾನತೆ ಸಿಗುವುದಿಲ್ಲ. ಏಕೆಂದರೆ ಅಸಮಾನತೆಯ ಮೇಲೆಯೇ ಹಿಂದೂಧರ್ಮದ ತಳಹದಿ ಇದೆ. ಹಿಂದೂಧರ್ಮದ ಭಾಗವಾಗಿರುವುದನ್ನು ಇನ್ನು ನಾವು ಬಯಸುವುದಿಲ್ಲ.'' ೬೦ ವರ್ಷಗಳ ನಂತರ ಈ ಸಮಾಜ ಏನಾದರೂ ಬದಲಾವಣೆ ಹೊಂದಿದೆಯೆ? ಇಲ್ಲ.

ಡಾ॥ ಸುಭಾಷ್ ಭರಣಿಯವರು ತಮ್ಮ ಸಂದರ್ಶನದಲ್ಲಿ ಹೇಳಿರುವ ಮಾತುಗಳು ಹೀಗಿವೆ: ''ನೋಡಿ... ಈ ಸಮಾಜ ಎಂದೆಂದೂ ತನಗೆ ತಾನೇ ಬದ್ಲಾಗೋದಿಲ್ಲ. ಇದು ಇಪ್ಪತ್ತು ಶತಮಾನಗಳ ಅನುಭವ. ಇಷ್ಟು ವರ್ಷ ಯಾವ್ದೇ ಬದ್ಲಾವಣೆ ಆಗ್ದೇನೇ ಉಳ್ದಿರೋದು ಅಂದ್ರೆ ಇದೊಂದೇ ವ್ಯವಸ್ಥೆ. ಈ ಪ್ರಪಂಚದ ಎಲ್ಲ ವ್ಯವಸ್ಥೆಗಳೂ ಕಾಲಕ್ಕೆ ತಕ್ಕಂತೆ ಸ್ವಲ್ಪ ಸ್ವಲ್ಪಾನಾದ್ರೂ ಬದ್ಲಾವಣೆ ಆಗ್ತಾ ಬಂದಿವೆ. ಆದ್ರೆ ಇದಿದೆಯಲ್ಲ ಅಸ್ಪೃಶ್ಯತೆ, ಪ್ರತಿನಿತ್ಯ ಗಟ್ಟಿಗೊಳ್ತಾ ಇದೆ. ಇದೊಂದು ಇನ್‌ಹ್ಯೂಮನ್ ವ್ಯವಸ್ಥೆ. ಬಹಳ ಜನ ಕಾಲಕಾಲಕ್ಕೆ ಜನಿಸಿ ಈ ನಾಡ್ನಲ್ಲಿ ಬಾಳಿ ದೊಡ್ಡ ದೊಡ್ಡ ಪ್ರಯತ್ನ ಮಾಡಿದ್ರು. ಇದನ್ನ ಬದ್ಲಾಯಿಸ್ಲಿಕ್ಕೆ ನಂಗೆ ಗೊತ್ತಾದ್ಹಾಗೆ ಬಸ್ವಣ್ಣೋರು, ರಾಮಾನುಜಾಚಾರ್ಯರು ಅವರ ಶಿಷ್ಯ ಕೋಟಿಗಳ್ಗೆ ಹೇಳಿದ್ರು: ಇದೆಲ್ಲ ಮಾಡ್‌ಬಾರ್ದು. ಅವ್ರು ನಮ್ಮ ಸಹೋದರರಿದ್ದಂಗೆ, ಅವರ್ನ ಸಮಾನ್ವಾಗಿ ಕಾಣ್ಬೇಕು ಅಂತ. ಅದೇ ರೀತಿ ಕೆಳವರ್ಗದ ಕಬೀರ, ಸೂರ್‌ದಾಸ್, ರವಿದಾಸ್ ಹೀಗೆ ಭಕ್ತಿಪಂಥದವರು ಮತ್ತೆ ಸಾಮಾಜಿಕ ಹರಿಕಾರರು, ಧಾರ್ಮಿಕ ನಾಯಕರು ಹೀಗೆ ಎಲ್ಲಾರೂ ಮಾಡಿದ್ರು. ಕೊನೆಗೆ

ಎಂ. ವೆಂಕಟಸ್ವಾಮಿ

## ತಲಪರಿಗೆ

ಸಂ.: ಕೋಟಿಗಾನಹಳ್ಳಿ ರಾಮಯ್ಯ
ಪ್ರಕಟಣೆ : ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ
ಬೆಂಗಳೂರು, ೨೦೦೫

ಪೆರಿಯಾರ್, ಅಂಬೇಡ್ಕರ್‌ರವರೆಗೂ ಬಂದು ನಿಲ್ತು. ಆಮೇಲೆ ಅನೇಕ ರಾಜ-ಮಹಾರಾಜರು, ನಾಲ್ವಡಿ ಕೃಷ್ಣರಾಜ ಒಡೆಯರು, ಕೊಲ್ಲಾಪುರ ಶಾಹುಮಹಾರಾಜರು, ಶಿವಾಜಿರಾವ್ ಗಾಯಕ್‌ವಾಡ್ ಇವ್ರೆಲ್ಲ ಪ್ರಯತ್ನ ಮಾಡ್ಕೊಂಡು ಬಂದ್ರು, ಆದ್ರೂ ಈ ಸಮಾಜವಂತೂ ಸ್ವಲ್ಪಾನೂ ಬದ್ಲಾಗಿಲ್ಲ.''

೨ನೇ ಭಾಗದಲ್ಲಿ ೧೮ ಸಂದರ್ಶನಗಳಿವೆ. ಇವುಗಳ ವಿಶೇಷತೆ ಎಂದರೆ ಕೆ. ಎಚ್. ರಂಗನಾಥ್, ಕೆ. ಎಚ್. ಮುನಿಯಪ್ಪ ಅವರಂತಹ ರಾಜಕಾರಣಿಗಳಿಂದ ಹಿಡಿದು ಕೆ. ಗಂಗಹನುಮಯ್ಯ, ಡಾ॥ ಸುಭಾಷ್ ಭರಣಿ, ಎಸ್. ಮರಿಸ್ವಾಮಿ ಮತ್ತು ಜಸ್ಟೀಸ್ ಎಂ. ರಾಮಕೃಷ್ಣ, ಡಾ॥ ಸಿದ್ಧಲಿಂಗಯ್ಯ ಮತ್ತು ಡಾ॥ ಎಲ್. ಹನುಮಂತಯ್ಯನಂಥವರ ಸಂದರ್ಶನಗಳ ಜೊತೆಗೆ ಜಾಡಮಾಲಿ ಕೆಲಸಮಾಡುವ ಜಯಮ್ಮ ಮತ್ತು ಮನಿಯಮ್ಮನವರ ಸಂದರ್ಶನಗಳೂ ಇವೆ. ಕೆಲವು ಸಂದರ್ಶನಗಳಲ್ಲಿ ಹಿಂದೂ ಸಮಾಜದ ಸಾಮಾಜಿಕ ಪಿಡುಗಾದ ಅಸ್ಪೃಶ್ಯತೆಯ ಹಲವು ಮಜಲುಗಳು ಅನಾವರಣಗೊಂಡಿವೆ. ಅನಕ್ಷರಸ್ಥರಾದ ಸಾಧಾರಣ ಹೆಣ್ಣುಮಕ್ಕಳು ಸಮಾಜದ ಎದುರಿಗೆ ನಿಂತು ಹೋರಾಡುವ ಎದೆಗಾರಿಕೆ ನಮ್ಮನ್ನು ಬೆರಗುಗೊಳಿಸುತ್ತದೆ. ಅಧಿಕಾರಿಗಳು ತಮ್ಮ ಪ್ರಾಮಾಣಿಕತೆಯನ್ನು ಮೆರೆದಿರುವುದು ಇಲ್ಲಿ ದಾಖಲಾಗಿದೆ. ನೊಂದವರ ಹೃದಯದಿಂದ ಬಂದಿರುವ ಮಾತುಗಳು ನಮ್ಮನ್ನು ಆಲೋಚನೆಗೆ ಒಳಪಡಿಸುವ ಶಕ್ತಿಯನ್ನು ಹೊಂದಿವೆ. ಕೆಲವು ಸಂದರ್ಶನಗಳಲ್ಲಿ ನಾವೂ ಇದ್ದಂತೆ ತೋರುತ್ತದೆ. ಇವರೆಲ್ಲ ಈ ಕೊಳಕು ಸಮಾಜದ ಜೊತೆಗಿದ್ದರೂ ಆ ಸಮಾಜಕ್ಕೆ ಯಾವುದೇ ಕೆಡುಕನ್ನು ತೋರಿಸದೆ ಒಳಿತನ್ನೇ ಬಯಸಿದ್ದಾರೆ. ಅಸ್ಪೃಶ್ಯರನ್ನು ಬಿಟ್ಟರೆ ಇಂತಹ ತ್ಯಾಗದ ಮನೋಭಾವ ಹೊಂದಿರುವ ಇನ್ನೊಂದು ಜನಾಂಗ ಇಲ್ಲವೇನೋ ಎನಿಸುವಷ್ಟು ನಂಬಿಕೆ ಮೂಡುತ್ತದೆ.

೩ನೇ ಭಾಗದಲ್ಲಿ ೩ ಆತ್ಮಕಥೆಗಳಿವೆ. ಎನ್. ಕೆ. ಹನುಮಂತಯ್ಯ ಎಲ್ಲಾ ರೀತಿಯ ರಿಜರ್ವೇಷನ್‌ಗಳನ್ನು ಬಿಟ್ಟು ತಮ್ಮ ಆತ್ಮಕಥೆಯನ್ನು ಬರೆದುಕೊಂಡಿರುವುದು ಕಾಣಿಸುತ್ತದೆ. ತಮ್ಮ ಬಾಲ್ಯಜೀವನದಿಂದ ಹಿಡಿದು ಕಾಲೇಜಿನಲ್ಲಿ, ಹಳ್ಳಿಯಲ್ಲಿ, ಕೊನೆಗೆ ಬೆಂಗಳೂರಿನ ಮಹಾನಗರಿಯಲ್ಲಿ ಅಸ್ವಸ್ಥ ಸಮಾಜದ ಜೊತೆಗೆ ಹೆಣಗಾಡುವ ಪರಿ ಎಂತಹ ಸಮಾಜಕ್ಕೂ ನಾಚಿಕೆ ತರುವಂತಹದು. ಒಬ್ಬ ಮನುಷ್ಯ ಹೊಟ್ಟೆಗಿಲ್ಲದೆ ನರಳಿ ಸಾಯುವುದಕ್ಕಿಂತ ನೂರು ಪಟ್ಟು ಹೀನವಾದುದು ಅಸ್ಪೃಶ್ಯತೆ. ಹಿಂದೂ ಸಮಾಜದ ವ್ಯವಸ್ಥೆ ಏನು ಎನ್ನುವುದು ಅವರ ಕಥೆಯಲ್ಲಿ ಸ್ವಲ್ಪಮಟ್ಟಿಗೆ ಅನಾವರಣಗೊಂಡಿದೆ. ಕೊನೆಗೂ ಅವರಿಗೆ ತುಸು ನೆಮ್ಮದಿಯಿಂದ ಬದುಕುವುದಕ್ಕೆ ಒಂದು ಆಧಾರ ಸಿಕ್ಕಿದೆ. ಆರಂಭ ಮತ್ತು ಅಂತ್ಯ ಒಂದೇ ಆಗಿರುವ ಇಂತಹ ನತದೃಷ್ಟರು ನಮ್ಮ ಸಮಾಜದಲ್ಲಿ ಎಷ್ಟು ಮಂದಿ ಇದ್ದಾರೊ ಏನೋ ? ಹನುಮಂತಯ್ಯನ ಆತ್ಮಕತೆಯನ್ನು ನೋಡಿದಾಗ ನಮ್ಮನ್ನು ನಾವೇ ಹೀಯಾಳಿಸಿಕೊಳ್ಳುತ್ತಿದ್ದೇವೋ, ಇಲ್ಲ ಗ್ಲೋರಿಫೈ ಮಾಡಿಕೊಳ್ಳುತ್ತಿದ್ದೇವೋ ಎನ್ನುವ ಪ್ರಶ್ನೆ ಕಾಡುತ್ತದೆ.

ಬಿ. ಡಿ. ನಾರಾಯಣ ದಾಸ್ ಅವರ ಆತ್ಮಕಥೆ ನೇರ ಮತ್ತು ಸರಳವಾಗಿ ದಾಖಲಾಗಿದ್ದು ಇದನ್ನು ಒಂದಷ್ಟು ಪಾಲಿಷ್ ಮಾಡಿದ್ದರೆ ಇನ್ನೂ ಚೆನ್ನಾಗಿ ಮೂಡಿಬರುತ್ತಿತ್ತು. ನೇತ್ರ ಎಂಬ ಹೆಣ್ಣುಮಗಳ ಪುಟ್ಟ ಆತ್ಮಕಥೆ ಇಲ್ಲಿ ದಾಖಲಾಗಿರುವುದು ಅಸ್ಪೃಶ್ಯತೆಯ ಲೋಕದಲ್ಲಿ ಒಂದು ಮಹತ್ವದ ಹೆಜ್ಜೆಯಾಗಿದೆ. ಎಷ್ಟೋ ವರ್ಷಗಳ ಹಿಂದೆಯೇ ನಗರ ಸೇರಿದ ನನ್ನಂತಹವನಿಗೆ ಹಳ್ಳಿಗಳಲ್ಲಿ ಇನ್ನೂ ಇದೆಲ್ಲ ಇದೆಯೆ ? ಎನ್ನುವ ಪ್ರಶ್ನೆ ಏಳುತ್ತದೆ. ಜೊತೆಗೆ ರಾಜ್ಯದಾದ್ಯಂತ ನಾಯಿಕೊಡೆಗಳಂತೆ ಹರಡಿಕೊಂಡಿರುವ ದಲಿತ ಸಂಘಟನೆಗಳು, ಅವುಗಳ ನಾಯಕರೆಲ್ಲ ಇದನ್ನೆಲ್ಲ ನೋಡಿ ನೋಡದಂತೆ ಸುಮ್ಮನಿದ್ದಾರೆಯೆ ? ಅಥವಾ ಇದನ್ನೆಲ್ಲ ಗಮನಿಸುವ ವ್ಯವಧಾನ ಅವರಿಗಿಲ್ಲವೆ ?

ಪಕ್ಕದ ಮಹಾರಾಷ್ಟ್ರದಲ್ಲಿ ಬಿರುಗಾಳಿಯಂತೆ ಎದ್ದುಬಂದ ದಲಿತ ಆತ್ಮಕಥೆಗಳು ಕರ್ನಾಟಕದಲ್ಲಿ ಯಾಕಾದರೂ ಬರುತ್ತಿಲ್ಲ ಎನ್ನುವ ಪ್ರಶ್ನೆಗಳು ನಮ್ಮನ್ನು ಕಾಡುತ್ತಲೇ ಬಂದಿವೆ. ಗೌರ್ನಮೆಂಟ್ ಬ್ರಾಹ್ಮಣ, ಊರುಕೇರಿ, ಮಣೆಗಾರ, ಸಂಬೋಳಿ, ಈಗೇನು ಮಾಡ್ತೀರಿ ? ದಲಿತ ಕಥನ, ಇತ್ಯಾದಿಗಳನ್ನು ಇಲ್ಲಿ ಹೆಸರಿಸಬಹುದು. ಇವುಗಳ ಜೊತೆಗೆ ಅಸ್ಪೃಶ್ಯರು, ಧರೆಗೆ ದೊಡ್ಡವರು, ದೊಕ್ಕಳು ಮಕ್ಕಳು ಇತ್ಯಾದಿ ಸಂಶೋಧನಾ ಕೃತಿಗಳನ್ನು ಜ್ಞಾಪಿಸಿಕೊಳ್ಳಬಹುದು. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹೊರತಂದಿರುವ ೨೬ ಉಪಬುಡಕಟ್ಟುಗಳ ಸಂಶೋಧನಾ ಕೃತಿಗಳು ಇವುಗಳ ಜೊತೆಗಿವೆ.

ಬಹುಶಃ ಇಂದಿನ ಜಾಗತೀಕರಣದ ಪ್ರಕ್ರಿಯೆಯಲ್ಲಿ ಆರ್ಥಿಕ ಶಕ್ತಿ ದೊರಕುವ ಅಂತರಜಾತೀಯ ಹೆಣ್ಣು-ಗಂಡು ಹನುಮಂತಯ್ಯನಂತೆ ಸಾಮಾಜಿಕ ತೊಂದರೆಗಳಿಗೆ ಸಿಲುಕಿಕೊಳ್ಳಲಾರರು. ಜಾಗತೀಕರಣಕ್ಕೆ ತನ್ನದೇ ಆದ ವಿಪರ್ಯಾಸಗಳಿರುವುದು ಬೇರೆ ವಿಷಯ. ಇಡೀ ಪ್ರಪಂಚವನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ಶರವೇಗದಲ್ಲಿ ಸ್ಥಳೀಯ ಕಲೆ, ಸಾಹಿತ್ಯ, ಭಾಷೆ, ಸಂಸ್ಕೃತಿ ಎಲ್ಲವನ್ನೂ ಏಕಕಾಲಕ್ಕೆ ನುಂಗಿಹಾಕುತ್ತಿರುವ ಜಾಗತೀಕರಣ ಜಾತಿ, ಅಸ್ಪೃಶ್ಯತೆಯಂತಹ ಸಾಮಾಜಿಕ ಪಿಡುಗುಗಳನ್ನು ನುಂಗಿಬಿಡುವುದೆ ? ಹಾಗೇನಾದರೂ ನಡೆದರೆ ಅದು ನಡೆದೇಹೋಗಲಿ ಎನ್ನುವವರಲ್ಲಿ ನಾನೂ ಒಬ್ಬ. ಹೀನವಾಗಿ ಬದುಕುವ ಸಮಾಜ ಸಾಯುವುದೇ ಮೇಲು ಎನ್ನುವ ಅಂಬೇಡ್ಕರ್ ಮಾತುಗಳು ಜ್ಞಾಪಕಕ್ಕೆ ಬರುತ್ತವೆ. ನೀವು ಹುಟ್ಟಿದ ಹಳ್ಳಿಗಳನ್ನು ತೊರೆದು ನಗರಗಳನ್ನು ಸೇರಿಕೊಂಡುಬಿಡಿ. ಅಲ್ಲಿಗೆ ನಿಮ್ಮನ್ನು ಕಾಡುವ ಜಾತಿ, ಅಸ್ಪೃಶ್ಯತೆ ಎಂಬ ಭೂತಗಳು ನಿಮ್ಮನ್ನು ಬಿಟ್ಟು ತೊಲಗುತ್ತವೆ ಎನ್ನುವ ಮಾತುಗಳನ್ನು ಬಾಬಾಸಾಹೇಬ್ ಹೇಳಿದ್ದಾರೆ. ಮುಸ್ಲಿಮರು ಮತ್ತು ಅಸ್ಪೃಶ್ಯತೆ ಲೇಖನದಲ್ಲಿ ಎಸ್. ಬಾಬು ಅವರು ಮುಸ್ಲಿಮರಲ್ಲಿರುವ ಅಸ್ಪೃಶ್ಯತೆಯನ್ನು ವಿವರಿಸಿದ್ದಾರೆ. ದಲಿತರು ಯಾವುದೇ ದಾರಿಯಲ್ಹೋದರೂ ಈ ಕೀಳರಿಮೆ ಜನ್ಮಜನ್ಮಗಳಾದರೂ ಅವರನ್ನು ಬಿಡುತ್ತಿಲ್ಲ ಎನ್ನುವುದು ಖೇದದ ವಿಷಯವಾಗಿದೆ. ೪ನೇ ಭಾಗದಲ್ಲಿರುವ 'ಗರಿಗೆದರಿದ ನವಿಲು' ಕೃತಿಯ ಅಸ್ಪೃಶ್ಯ ಜನಪದ ಕಲಾವಿದರ ಆಯ್ದ ಸಂಕ್ಷಿಪ್ತ ಅನುಭವಗಳು ಅದ್ಭುತವಾಗಿವೆ. 'ಪ್ರಾಚೀನ ಅಸ್ಪೃಶ್ಯ ಕಥನ' ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ ಬುದ್ಧಶಾಸನ ಕೃತಿಯಿಂದ ಆಯ್ದುಕೊಂಡ ಜಾತಕ ಕಥೆಯಾಗಿದೆ.

... ಸರ್ಕಾರಿ ಇಲಾಖೆಯ ಉನ್ನತ ಹುದ್ದೆಯಲ್ಲಿದ್ದಾರ್ರೀ...! ಜನ ಅನುಮಾನ ಪಡಬಾರದು ಅಂತ ಈ ಹೆಸ್ರಿಟ್ಟದ್ದಾರೆ...!!

ಯಾವಾಗಲೂ ತಲೆ ತುಂಬಾ ಯೋಚನೆಗಳು, ಜೋಳಿಗೆ ತುಂಬಾ ಪುಸ್ತಕಗಳನ್ನು ತುಂಬಿಕೊಂಡು ಓಡಾಡುವ ರಾಮಯ್ಯ ತನ್ನ ಜೀವನದುದ್ದಕ್ಕೂ ನಿಂತ ಕಡೆ ನಿಂತವರಲ್ಲ, ಕುಳಿತ ಕಡೆ ಕುಳಿತುಕೊಂಡವರಲ್ಲ. ದಲಿತ ಸಂಘಟನೆಗಳು ದಾರಿತಪ್ಪಿದಾಗ ಅದರ ಒಂದು ಅಂಗವಾಗಿದ್ದ ರಾಮಯ್ಯ ಅದರಿಂದ ದೂರ ಸರಿದು ನಾಟಕ, ಸಿನಿಮಾಗಳ ಕಡೆ ಮುಖಮಾಡಿ ಕುಳಿತುಕೊಂಡರು. ಅಲ್ಲಿ ಒಂದು 'ನೀಲಾ' ಕಾಣಿಸಿಕೊಂಡಿತು. ದೇಶದ ಜೀವನಾಡಿ ಹಳ್ಳಿಯ ಶಾಲೆಯಿಂದ ಕೆಲವು ಅದ್ಭುತ ಮಕ್ಕಳ ನಾಟಕಗಳು ರವೀಂದ್ರ ಕಲಾಕ್ಷೇತ್ರದ ಮೆಟ್ಟಿಲು ಹತ್ತಿ ಕುಳಿತುಕೊಂಡವು. ೫೦೦ ಕಂತುಗಳಿಗಿಂತ ಹೆಚ್ಚಾಗಿ ಹರಿದುಬಂದ ಮೆಗಾ ಧಾರಾವಾಹಿ 'ಸಂಕ್ರಾಂತಿ' ಹಳ್ಳಿಯ ಆಂತರ್ಯವನ್ನು ತೆರೆದುತೋರಿಸಿತ್ತು. ಯಾವುದೇ ಕೆಲಸವನ್ನು ಕೈಗೆತ್ತಿಕೊಂಡರೂ ಬೇತಾಳನಂತೆ ಮಾಡಿಮುಗಿಸಿದಾಗ ರಾಮಯ್ಯನವರ ಬೆನ್ನ ಹಿಂದೆ ಸಾಲದ ಬೇತಾಳನು ಪರ್ಮನೆಂಟಾಗಿ ಏರಿ ಕುಳಿತಿರುತ್ತಾನೆ. ಕರ್ನಾಟಕ ಸರಕಾರ ೨೦೦೫ನೇ ವರ್ಷದಲ್ಲಿ ರಾಜ್ಯೋತ್ಸವ ಪ್ರಶಸ್ತಿ ಕೊಟ್ಟಿರುವುದು ಸ್ವಲ್ಪ ಸಮಾಧಾನ ತಂದಿರುವ ಸಂಗತಿಯಾಗಿದೆ.

''ತಲಪರಿಗೆ ಸಾರ್ವಕಾಲಿಕ ದಾಖಲಾಗಿದೆ. ಇದು ಇಡೀ ಅಸ್ಪೃಶ್ಯ ಸಮುದಾಯಕ್ಕೆ ಮಾತ್ರವಲ್ಲ, ಅಸ್ಪೃಶ್ಯತೆಯನ್ನು ತೊಡೆದುಹಾಕಬೇಕೆಂಬ ಯಾರಿಗೇ ಆಗಲಿ ಅವರ ತಾತ್ವಿಕ ತಿಳುವಳಿಕೆಯನ್ನು, ವಿಸ್ತರಿಸಿ ಗಟ್ಟಿಗೊಳಿಸುವಷ್ಟು ಪರಿಣಾಮಕಾರಿಯಾದ ದಾಖಲೆಯಾಗಿದೆ. ಸಂಶೋಧನಾ ವಿದ್ಯಾರ್ಥಿಗಳಿಗೆ, ಸಮಾಜ ಶಾಸ್ತ್ರಜ್ಞರಿಗೆ, ಚಳುವಳಿಗಾರರಿಗೆ ಮತ್ತು ಸಮಾಜ ಕಾರ್ಯಕರ್ತರಿಗೆ ಅಮೂಲ್ಯ ಆಕರವಾಗಿದೆ'' – ಇದು ತಲಪರಿಗೆ ಕುರಿತ ಡಾ॥ ಬಾಬುರಾವ್ ಮುಡಬಿ ಅವರ ಬೆನ್ನುಡಿ. ಈ ಮಾತುಗಳು ಖರೆಯಾಗಿವೆ.

ಎಂ. ವೆಂಕಟಸ್ವಾಮಿ
ನಂ. ೫೭ಎ, 'ಕ್ರಾಂತಿ ನಿವಾಸ', ಸಾಯಿ ಲೋಟಸ್ ಬಡಾವಣೆ, ಸುಬ್ರಮಣ್ಯಪುರ ಪೋಸ್ಟ್, ಬೆಂ. - ೬೨

# ಬಡತನ, ಅಸ್ಪೃಶ್ಯತೆ, ಆಧ್ಯಾತ್ಮಿಕ ಹಸಿವು ಹಾಗೂ ಧರ್ಮಾಂತರ

**ಮತಾಂತರ ವಿರೋಧಿ ಶಕ್ತಿಗಳು ಸಂವಿಧಾನಬದ್ಧ ನಾಗರಿಕ ಸಮಾಜದಲ್ಲಿ ನಡೆಯುತ್ತಿರುವ ದಲಿತರ ಮೇಲಿನ ದೌರ್ಜನ್ಯಗಳ ಪಾಲಿಗೆ ಸರ್ವಚೇತನಗಳನ್ನು ಏಕೆ ಜಡಗಟ್ಟಿಸಿಕೊಂಡಿವೆ ? ಅಲ್ಪಸಂಖ್ಯಾತರ ಬದುಕಿನಲ್ಲಿ ಕ್ಷಣ ಕ್ಷಣಕ್ಕೂ ಆತಂಕದ ವಾತಾವರಣವನ್ನು ಏಕೆ ಸೃಷ್ಟಿಸತೊಡಗಿವೆ ? ತಂತಮ್ಮ ಧರ್ಮದೊಳಗೆ ಖಾಸಗಿಯಾದ ಕಿರುದಾರಿಗಳು ನಿರ್ಮಾಣವಾಗದಂತೆ ಏಕೆ ತಡೆಯುತ್ತಿವೆ ? – ಇಂತಹ ಹಲವು ಪ್ರಶ್ನೆಗಳು ಈ ಹೊತ್ತು ನಮ್ಮನ್ನು ಬಿಟ್ಟೂಬಿಡದೆ ಕಾಡುತ್ತಿವೆ. ಜನಸಮುದಾಯವಂತೂ ಧರ್ಮದ ದಾರಿಯಲ್ಲಿ ಬೇರೆ ಬೇರೆ ರೂಪದ ಸಾಮಾಜಿಕ ಬಿಡುಗಡೆಯನ್ನು ಹುಡುಕುತ್ತಿದೆ. ನಮ್ಮೆದುರಿಗಿರುವ ಆಯ್ಕೆಗಳಲ್ಲಿ ಅಂಬೇಡ್ಕರರು ಶುದ್ಧೀಕರಿಸಿದ ಬುದ್ಧಮಾರ್ಗ ಹೆಚ್ಚು ಸ್ವಾತಂತ್ರ್ಯ ದೊರಕಿಸಬಲ್ಲದು ಎಂಬಂತೆ ತೋರುತ್ತಿದೆ. ಆದ್ದರಿಂದ ಚಿರಾಯುವಾದ ಸಮಬಾಳನ್ನು ಹಾರೈಸುತ್ತ ಬುದ್ಧಪ್ರಜ್ಞೆಯು ನಡೆದಾಡಿದ ಮಹಾಕಾರುಣ್ಯದ ದಾರಿಯಲ್ಲಿ ಹೆಜ್ಜೆಹಾಕಲು ನಾವೀಗ ನಿರ್ಧರಿಸಿದ್ದೇವೆ.**

೧೯೫೬ ಅಕ್ಟೋಬರ್ ೧೪ ಈ ನೆಲದ ದಮನಿತ ದಲಿತ ಚೇತನಗಳ ಪಾಲಿಗೆ ಸ್ಮರಣೀಯ ಸುವರ್ಣ ದಿನ. ವೈದಿಕ ಧರ್ಮದ ಸನಾತನವಾದ ಜಾತಿಗರ್ವಾಂಧತೆಗೆ ಡಾ|| ಅಂಬೇಡ್ಕರ್ ವಾಚ್ಯವಾಗಿ ಪೆಟ್ಟನ್ನು ಕೊಟ್ಟಂತಹ ಸುದಿನ. ''ಹುಟ್ಟು ನನ್ನ ಕೈಯಲ್ಲಿರಲಿಲ್ಲ. ಆದರೆ, ಸಾವು ನನ್ನ ಕೈಯಲ್ಲಿದೆ. ನಾನು ಹಿಂದೂವಾಗಿ ಹುಟ್ಟಿದ್ದೇನೆ. ಹಿಂದೂವಾಗಿ ಸಾಯಲಾರೆ'' ಎಂಬ ಮಹತ್ವದ ನಿರ್ಧಾರಕ್ಕೆ ಬಂದು ತದನಂತರ ಆ ದಾರಿಯಲ್ಲಿ ಮುಂದುವರೆದು ತಮ್ಮ ಲಕ್ಷಾಂತರ ಅನುಯಾಯಿಗಳ ಜೊತೆ ಬೌದ್ಧಧಮ್ಮ ದೀಕ್ಷೆ ಪಡೆದ ದಿನ. ಆ ಸಂದರ್ಭದ ಸುವರ್ಣ ನೆನಪಿನ ಕಾರ್ಯಕ್ರಮವನ್ನು ಈ ವರ್ಷ ನಾಡಿನೆಲ್ಲೆಡೆ ತುಂಬು ಆತ್ಮಾಭಿಮಾನದಿಂದ ಆಚರಿಸಲಾಗುತ್ತಿದೆ. ಜೊತೆಗೆ ಬೌದ್ಧಧಮ್ಮಕ್ಕೆ ಧರ್ಮಾಂತರ ಹೊಂದುವ ನಿರ್ಧಾರವನ್ನು ಕುರಿತಂತೆ ಸೂಕ್ಷ್ಮವಾಗಿ ಆಲೋಚಿಸಲಾಗುತ್ತಿದೆ.

ಈ ಧಮ್ಮದೀಕ್ಷೆಯ ತಾತ್ವಿಕ ಚಳವಳಿಯನ್ನು ಅದರ ಶೈಶವದಲ್ಲೇ ಹಿಮ್ಮೆಟ್ಟಿಸಲು ಈಗಾಗಲೆ ಹಲವು ಕಡೆ ಟೀಕೆ ಟಿಪ್ಪಣಿಗಳ ಮಹಾಪೂರವೇ ಹರಿಯತೊಡಗಿದೆ. ಸಮಾನತೆಯ ಸಮಾಜಕ್ಕಾಗಿ ದಲಿತ ಚೇತನಗಳು ವಿಮೋಚನೆಯ ದಾರಿಯನ್ನು ಬೌದ್ಧಧರ್ಮದಲ್ಲಿ ಕಂಡುಕೊಳ್ಳಲು ಶುರುಮಾಡುತ್ತಿದ್ದಂತೆಯೇ ಹಿಂದೂಧರ್ಮದ ಮುದಿಮೂಳೆ ಮಿಸುಕಾಡತೊಡಗಿದೆ. ಮುಂದಿನ ಪೀಳಿಗೆಯ ಹಿಂದೂಗಳ ಹಿತವನ್ನು ಗಮನದಲ್ಲಿಟ್ಟುಕೊಂಡು – ಇಂತಹ ಮತಾಂತರವನ್ನು ಹಿಮ್ಮೆಟ್ಟಿಸಲು – ನಾಡಿನ ಧರ್ಮಸಂಸತ್ತು ಮೈಕೊಡವಿಕೊಂಡು ಮೇಲೆದ್ದು, ಸಾಧುಸಂತರ ಸಮಾವೇಶವನ್ನು ಕೂಡ (ನವೆಂಬರ್ ೨೮) ಏರ್ಪಾಡು ಮಾಡಿ ಮುಗಿಸಿದೆ.

ಬೌದ್ಧಜೀವನ ಮಾರ್ಗವನ್ನು ನಾಶಪಡಿಸುವ ವಿಫಲ ಪ್ರಯತ್ನಗಳು ಅದು ಜನ್ಮ ತಳೆದ ಕಾಲದಿಂದಲೂ ನಡೆಯುತ್ತ ಬಂದಿವೆ. ಇದು ಹೊಸ ತಯಾರಿಯೇನಲ್ಲ. ಧಾರ್ಮಿಕ ಸ್ವಾತಂತ್ರ್ಯದ ಹಕ್ಕು ಸಂವಿಧಾನಬದ್ಧವಾಗಿ ಜಾರಿಯಲ್ಲಿರುವ ಈ ದಿನಮಾನಗಳಲ್ಲೇ ಇದರ ಪರಿ ಹೀಗಿರಬೇಕಾದರೆ, ವೈದಿಕ ದೌರ್ಜನ್ಯದ ಉತ್ಥಾನಾವಸ್ಥೆಯ ಅಂದಿನ ಸಂದರ್ಭದಲ್ಲಿ ಬೌದ್ಧಧರ್ಮವು ಇಡೀ ಭರತಖಂಡದಿಂದ ಕಾಲ್ತೆಗೆಯದೆ ಬೇರೆ ದಾರಿಯೇ ಇರಲಿಲ್ಲ. ಸನಾತನ ಧರ್ಮವು ಮಿಕ್ಕಂತೆ ಬಂದ ಯಾವ ಚಿಂತನೆಗಳಿಂದಲೂ ಪಾಠ ಕಲಿಯದೆ, ತಿರುಗಿ ಅವುಗಳಿಗೇ ಪಾಠ ಕಲಿಸುವ ತಂತ್ರಗಾರಿಕೆಯನ್ನು ಮಾತ್ರ ಬಹಳ ಚೆನ್ನಾಗಿ ಅರಗಿಸಿಕೊಂಡು ಕೊಬ್ಬಿದೆ. ಅಂತೆಯೇ ಬುದ್ಧನ ಜೀವಪರ ತಹತಹಗಳು ಅದಕ್ಕೆ ರುಚಿಸಲಿಲ್ಲ. ಒಂದರ್ಥದಲ್ಲಿ ಅಂಬೇಡ್ಕರ್ ಅವರು ದಿಕ್ಕುತಪ್ಪಿ ಹೋಗಿದ್ದ ಬೌದ್ಧಧರ್ಮವನ್ನು ಮರಳಿ ಮನೆಗೆ ತಂದಿದ್ದಾರೆ. ತರುವ ಮೊದಲೇ ವಿಕೃತಗೊಂಡು ಬೆಳೆದಿದ್ದ ಅದರ ಕಿರೀಟ, ಭುಜಕೀರ್ತಿ, ಖಡ್ಗಗದಾಸಂಕುಲಗಳನ್ನೆಲ್ಲಾ ವಿಚಾರಾಸ್ತ್ರದಿಂದ ಸವರಿ ಶುದ್ಧಗೊಳಿಸಿದ್ದಾರೆ. ಬುದ್ಧ ಗುರುವಿನ ಸಂದೇಶವನ್ನು ಅವನ ಮೂಲ ದನಿಯಲ್ಲೇ ಹಿಡಿದಿಟ್ಟುಕೊಟ್ಟಿದ್ದಾರೆ. ಈಗ ದಲಿತ ಶಕ್ತಿಗಳು ಅಂಬೇಡ್ಕರ್ ಅವರು ನೆಟ್ಟು ಕಸಿ ಕಟ್ಟಿರುವ ಈ ಹೊಸ ಧರ್ಮವನ್ನು ನೀರುಣಿಸಿ ಬೆಳೆಸುವ ಸಹಜ ಪ್ರಯತ್ನದಲ್ಲಿ ತಲ್ಲೀನವಾಗಿವೆ.

ಇದು ಈ ದೇಶದ ಎಲ್ಲ ಜಾತಿಯ, ಎಲ್ಲ ಸ್ತರದ, ಎಲ್ಲ ವರ್ಗದ ಜನರು ಆತ್ಮವಿಮರ್ಶೆ ಮಾಡಿಕೊಳ್ಳಬೇಕಾದ ಸೂಕ್ಷ್ಮ ವಿಚಾರ. ಬಹಿರಂಗವಾಗಿ ದಲಿತ ಚೇತನಗಳನ್ನು ಆಟ್ಟಾಡಿಸಿ ಕೊಂಡು ಸುಡುತ್ತಿರುವ, ಎಲ್ಲೆಂದರಲ್ಲಿ ಬೆತ್ತಲೆಗೊಳಿಸುತ್ತಿರುವ, ದಲಿತರ ಆತ್ಮಗೌರವದ ಪ್ರತೀಕಗಳನ್ನು ವಿರೂಪಗೊಳಿಸುತ್ತಿರುವ ತಿಳಿಗೇಡಿ ಮನಸ್ಸುಗಳಿಗೆ ಕುಮ್ಮಕ್ಕು ಯಾವ ಧರ್ಮದಿಂದ ದೊರೆಯುತ್ತಿದೆ ? ಪುರೋಹಿತಶಾಹಿಯ ಸಂಸತ್ತು ಎನಿಸಿದ 'ದೇಗುಲ' ವ್ಯವಸ್ಥೆಯಲ್ಲಿ ಇಲ್ಲಿಯವರೆವಿಗೂ ಒಂದಾದರೂ ದಲಿತಪರ ಪರಿವರ್ತನೆ ಆಗಿದೆಯೇ ?



ಈ ದೇಶದ ಜನಸಾಮಾನ್ಯರ ಕೊರಳಿಗೆ ಉರುಳಾಗಿರುವ ವೈದಿಕಾಚರಣೆಗಳ ಬಗ್ಗೆ ಯಾರಾದರೂ ತಲೆಕೆಡಿಸಿಕೊಂಡಿದ್ದಾರೆಯೆ? ಸಂಘಪರಿವಾರಗಳ ಬಗ್ಗೆ ಚಿಂತಕರು ಎತ್ತುತ್ತಿರುವ ಪ್ರಶ್ನೆಗಳ ಸಂಬಂಧದಲ್ಲಿ ಪ್ರತಿದಿನ ಭೀಮಾರಿ ನಡೆಯುತ್ತಿರುವುದೇಕೆ? ಈ ಬಗ್ಗೆ ಎಲ್ಲ ಸಾಂಸ್ಕೃತಿಕ ಸ್ತರದ ಜನರು ಶತಮಾನಗಳ ತಮ್ಮ ಪಾಪಗಳಿಗೆ ಪ್ರಾಯಶ್ಚಿತ್ತ ರೂಪದಲ್ಲಿ ಇನ್ನಾದರೂ ಆತ್ಮಾವಲೋಕನ ಮಾಡಿಕೊಳ್ಳಬೇಕಿದೆ.

ಮೊದಲಿಗೆ ಸ್ಪಷ್ಟಪಡಿಸಬಹುದಾದ ವಿಚಾರವೆಂದರೆ, ಯಾವುದೇ ಧರ್ಮದ ಸಾಂಸ್ಥೀಕರಣದ ಬಗ್ಗೆ ನಮ್ಮ ಕಡುವಿರೋಧ ಇದ್ದೇ ಇದೆ. ಮತಧರ್ಮದ ಸಾಂಸ್ಥೀಕರಣವು ಅಂತಿಮವಾಗಿ ಜೀವವಿರೋಧಿಯಾಗಿಯೇ ಇರುತ್ತದೆಂಬ ಸತ್ಯ ನಮಗೆಲ್ಲರಿಗೆ ಗೊತ್ತಿದೆ. ಜಾತಿ-ಮತ-ಧರ್ಮದಿಂದ ದೂರವಾದ ಆದರ್ಶಯುತ ಜಗತ್ತಿನಲ್ಲಿ ಬಾಳಬೇಕೆಂಬ ಆಸೆಯಿಂದ ನಾವೇನೂ ವಿಮುಕ್ತರಾಗಿಲ್ಲ. ಕುವೆಂಪು ಸೂಚಿಸಿರುವ ಎಲ್ಲ ತತ್ತ್ವಗಳ ಎಲ್ಲೆ ಮೀರಿದ ಅನಿಕೇತನ ಪ್ರಜ್ಞೆಯಲ್ಲಿ ಬಾಳುವುದು ನಮ್ಮ ಕನಸಾಗಿದೆ. ಆದರೆ ಅದು ಎಷ್ಟು ಮಂದಿಗೆ ಸಾಧ್ಯ? ಅಲ್ಲದೆ, ಮನುಷ್ಯ ಧ್ವನಿಯೇ ಕ್ಷೀಣವಾಗುತ್ತಿರುವ ಇಂದಿನ ಯಾಂತ್ರಿಕ ಯುಗದಲ್ಲಿ ಜನಸಮುದಾಯವು ಕೊನೆಗೆ ಧರ್ಮದತ್ತ ವಾಲುತ್ತಿರುವುದನ್ನು ನಾವು ನಿಚ್ಚಳವಾಗಿ ಕಾಣುತ್ತಿದ್ದೇವೆ.

ಭಾರತದಂತಹ ದೇಶದಲ್ಲಿ ಜನಸಾಮಾನ್ಯರಿಗೆ ಅತ್ಯವಶ್ಯಕವಾಗಿರುವ ಆಧ್ಯಾತ್ಮಿಕ ಹಸಿವನ್ನು ಕಡೆಗಣಿಸುವಂತಿಲ್ಲ. ತಮ್ಮ ಪಾಲಿನ ಎಲ್ಲ ಬಗೆಯ ಕಡುಕಷ್ಟಗಳಿಗೆ ಅವರು ಧರ್ಮದಲ್ಲಿ ಸಾಂತ್ವನ ಹುಡುಕುತ್ತಿದ್ದಾರೆ. ಈಗಂತೂ ಜನರು ಆಧ್ಯಾತ್ಮಿಕ ಸಾಂತ್ವನವನ್ನು ಅರಸಿ ದತ್ತಜಯಂತಿ, ಪ್ರಜಾಪಿತ ಬ್ರಹ್ಮಕುಮಾರಿ, ತರಳಬಾಳು ಹುಣ್ಣಿಮೆ, ಗೋಯಾತ್ರೆ-ಉತ್ಸವಗಳಲ್ಲಿ, ಯೋಗ-ಧ್ಯಾನ ಶಿಬಿರಗಳಲ್ಲಿ ಹೆಚ್ಚು ಹೆಚ್ಚು ಪಾಲ್ಗೊಳ್ಳುತ್ತಿದ್ದಾರೆ. ರವಿಶಂಕರ್, ತರುಣಮುನಿ, ಬೆನ್ನಿಹಿನ್‌ರಂತಹ 'ಸಂತ'ರ ಬೆನ್ನ ಹಿಂದೆ ಬಿದ್ದಿದ್ದಾರೆ. ಧರ್ಮದ ದಾರಿಯಲ್ಲಿ ಸಾಮಾಜಿಕ ಬಿಡುಗಡೆಯನ್ನು ಬಯಸುತ್ತಿರುವ ಜನರ ಧಾರ್ಮಿಕ ಹಸಿವನ್ನು ನೀಗಿಸುವ ಮಟ್ಟಿಗಾದರೂ ಈ ಕುರಿತು ನಾವು ಆಲೋಚಿಸಬೇಕಾಗಿದೆ. ಅಲ್ಲದೆ, ನಾವು ಅನಿಕೇತನ ಪ್ರಜ್ಞೆಯನ್ನು ಧ್ಯಾನಿಸುವಷ್ಟರ ಮಟ್ಟಕ್ಕೆ ಇಲ್ಲಿನ ಶ್ರೀಸಾಮಾನ್ಯರನ್ನು ಬೆಳೆಸಿಲ್ಲ. ಅಕ್ಷರ ಸಂಪತ್ತಿನಿಂದ ವ್ಯವಸ್ಥಿತವಾಗಿ ವಂಚಿಸಿ ಅವರನ್ನು ಕತ್ತಲೆಯಲ್ಲಿ ಕೈಬಿಟ್ಟು, ಅವರ ಶ್ರಮದ ಕಾವಿನಲ್ಲಿ ನಮ್ಮ ಬೇಳೆಯನ್ನು ಬೇಯಿಸಿಕೊಳ್ಳುತ್ತಿದ್ದೇವೆ. ಅವರೆದುರು ಕರಗಲಾರದಷ್ಟು ಮಹಾಮೌಢ್ಯದ ಗುಡ್ಡವನ್ನು ಇಟ್ಟಿದ್ದೇವೆ. ನಾವು ಮಾತ್ರ ಬೆಚ್ಚಗೆ ಕೂತು ಅನಿಕೇತನ ಪ್ರಜ್ಞೆಯ ಬಗ್ಗೆ ದಿನಗಟ್ಟಲೆ ಭಾಷಣ ಮಾಡುತ್ತಿದ್ದೇವೆ.

ಎಲ್ಲರಿಗೂ ತಿಳಿದಿರುವಂತೆ ಹಿಂದೂಧರ್ಮದ ಜೀವಶೋಷಕ ಮೌಲ್ಯಗಳು ಜನಸಮಸ್ತರ ಆಶೋತ್ತರಗಳನ್ನು ಆದಿ ಕಾಲದಿಂದಲೂ ಕಡೆಗಣಿಸಿವೆ. ಪ್ರಪಂಚದಲ್ಲಿಯೇ ದೊಡ್ಡದಾದ ಪ್ರಜಾಪ್ರಭುತ್ವ ತತ್ತ್ವದಡಿಯಲ್ಲಿ ಬದುಕುತ್ತಿದ್ದರೂ ಪ್ರಜೆಗಳ ಪಾಲಿಗೆ ಸಮಾನತೆ ಎಂಬುದು ಇಲ್ಲಿ ಗಗನಕುಸುಮವಾಗಿದೆ. ಜಗತ್ತಿನಾದ್ಯಂತ ಹೆಸರು ಮಾಡಿದ ವಿಜ್ಞಾನಿಗಳು, ಇಂಜಿನಿಯರುಗಳು, ತತ್ತ್ವಜ್ಞಾನಿಗಳು, ಸಂತರು, ಶರಣರು, ಬುದ್ಧಿಜೀವಿಗಳು ಇದ್ದಾಗ್ಯೂ ಸನಾತನ ಯಜ್ಞಕುಂಡಕ್ಕೆ 'ದಲಿತರ ರಕ್ತ'ದ ಆಜ್ಯ ಸಾಕಾಗುತ್ತಿಲ್ಲ. ಕ್ರೌರ್ಯವನ್ನು ಅನುಭವಿಸಿ ಸುಖಿಸುವ ಕಣ್ಣುಗಳಿಗೆ ದಲಿತ ಹೆಣ್ಣುಮಕ್ಕಳ ಬೆತ್ತಲೆ ದೇಹಗಳನ್ನು ನೋಡಿದಷ್ಟೂ ಆಸೆ ತಣಿಯುತ್ತಿಲ್ಲ. ತಂತಮ್ಮ ದೇವರು, ದಿಂಡರುಗಳನ್ನು ಖಾಸಗಿಯಾಗಿ ಪ್ರೀತಿಸುವ, ಆರಾಧಿಸುವ ಕನಿಷ್ಠ ಹಕ್ಕನ್ನು ಕ್ರಮೇಣ ಕಿತ್ತುಕೊಳ್ಳಲಾಗುತ್ತಿದೆ. ಪರಿಣಾಮ ರವಿಶಂಕರರೋ, ತರುಣಮುನಿ ಸಾಗರರೋ, ಬೆನ್ನಿಹಿನ್ನೋ, ಬಿನ್‌ಲಾಡೆನ್ನೋ ಹೇಳಿದ್ದು ವೇದವಾಕ್ಯವಾಗಿ ಪಸರಿಸುತ್ತಿದೆ. ಒಟ್ಟಾರೆ ಫಲಿತಾಂಶವಾಗಿ ಧಾರ್ಮಿಕ ಅವಲಂಬನೆಯೇ ಮನುಷ್ಯನ ಮೂಲಭೂತ ಹಸಿವೆಂಬುದು ದೃಢಪಡುತ್ತಿದೆ.

ಎಣಿಕೆಯನ್ನು ಮೀರಿದ ಧರ್ಮಗಳು ಜೀವಂತವಾಗಿರುವಾಗ ಬೌದ್ಧಧರ್ಮದ ಕಡೆಗೇ ಏಕೆ ಮುಖ ಮಾಡಬೇಕು? ಈ ಪ್ರಶ್ನೆ ಎಲ್ಲರ ಹುಬ್ಬೇರುವಂತೆ ಮಾಡಿದೆ. ನಿಜ, ಹಾಗೆ ನೋಡಿದರೆ ನಮ್ಮ ನೆಲದಲ್ಲಿ ಇಡೀ ಜಗತ್ತಿನಲ್ಲೇ ವಿಶಿಷ್ಟವೆನಿಸಿದ ಬಸವ ಧರ್ಮವಿದೆ. (ಜಗತ್ತಿನ ಮೊಟ್ಟಮೊದಲ ಧರ್ಮನಿರಪೇಕ್ಷ ಸಂಸ್ಥೆಯನ್ನು ಕಟ್ಟಿದ ಬಸವಣ್ಣನು ಕೊಟ್ಟ ಧರ್ಮ; ನುಡಿದಂತೆ ನಡೆದ ಶಿವಶರಣರು ಬದುಕಿ ಬೆಳಗಿದ ಧರ್ಮ ಇದು.) ಆದರೆ, ಭೂತದ ಸತ್ಯವನ್ನು ಅರಗಿಸಿಕೊಳ್ಳಲಾಗದ ಸ್ಥಿತಿಯಲ್ಲಿ ಬಸವನ ಹುಸಿ ಅನುಯಾಯಿಗಳು ಶ್ರೇಷ್ಠತೆಯ ವ್ಯಸನದಲ್ಲಿ ತೊಡಗಿದ್ದಾರೆ. ಚಿದಾನಂದಮೂರ್ತಿಯವರಂಥವರಿಗೆ ಬಸವಧರ್ಮ ಹಿಂದೂಧರ್ಮದೊಳಗೆ ಜೀರ್ಣವಾಗಿರುವ ಬಗ್ಗೆ ಕಿಂಚಿತ್ ದುಃಖವಿಲ್ಲ; ಬದಲಿಗೆ ಬಹುತ್ ಖುಷಿಯಿದೆ. ಇಂಥವರಿಂದ ಬಸವಧರ್ಮದ ತಾತ್ತ್ವಿಕ ಬೆಳಕಿನ ಪ್ರಕಾಶಕ್ಕೆ ಅವಕಾಶವಿಲ್ಲವಾಗಿದೆ. ಗಾಂಧಿಯ ರಾಮರಾಜ್ಯದ ಆಶಯಕ್ಕೂ ಇದಕ್ಕಿಂತ ಉನ್ನತ ಸ್ಥಾನ ದೊರಕಲಾರದು. ಜೈರಪ್ಪನಂಥವರ ಸಂತಾನವಿರುವವರೆಗೂ ಹಿಂದೂಧರ್ಮದ ವಕ್ತಾರ ಭಗವಾನ್ ಶ್ರೀಕೃಷ್ಣನಿಗೆ ಸೆರೆಮನೆಯೇ ಗತಿ!

ಹೆಚ್ಚೆಂದರೆ, ಇಲ್ಲಿನ ರಾಮಮಂದಿರಗಳು, ಅಷ್ಟಮಠಗಳು, ದತ್ತಪೀಠಗಳು ದಲಿತ-ಅಲ್ಪಸಂಖ್ಯಾತರ ಪಾಲಿಗೆ ಬಲಿಪೀಠಗಳಾಗಬಹುದು ಅಷ್ಟೆ. ಇಲ್ಲವೇ ಸ್ವಲ್ಪ ಉದಾರ ಹೃದಯವಂತರಾದರೆ ಈ ವ್ಯವಸ್ಥೆಯ ಗಂಡುವರ್ಗದ ಬಾವುಟವನ್ನೋ, ಮುದಿಮೂಳೆಗಳನ್ನು ಮಲಗಿಸಿದ ಅಡ್ಡಪಲ್ಲಕ್ಕಿಗಳನ್ನೋ ಹೊತ್ತು ತಿರುಗುವ ಜೋಕರ್‌ಗಳಾಗಬಹುದು ನಾವು ಅಷ್ಟೆ. ಈ ನೆಲದಲ್ಲಿ ಕೊಳೆತು ನಾರುವ ಶತಮಾನಗಳ ಮಲ ಹೊತ್ತು ಹೊತ್ತು ಸುಸ್ತಾಗಿದ್ದೇವೆ. ಆದರೆ, ಸಾರ್ವಜನಿಕ ಅಸಹ್ಯಗಳಲ್ಲಿ ತೊಡಗುವ ಮಠಮಾನ್ಯ ನಾಯಕಮಣಿಗಳ ತಲೆಯೊಳಗಿನ ಮಲ ತೊಳೆಯಲು ಸಾಧ್ಯವಾಗದೆ ಕೈ ಚೆಲ್ಲಿದ್ದೇವೆ. ನಿಂತ ನೆಲೆಗಳನ್ನೆಲ್ಲಾ ಶೋಧಿಸಿ ಅಂತಿಮವಾಗಿ ಈ ನಿರ್ಧಾರಕ್ಕೆ ಬಂದಿದ್ದೇವೆ. ಇನ್ನು ಮುಂದಾದರೂ ಕೀಳರಿಮೆಯ ಅನುಭವವನ್ನು ಗಾಳಿಗೆ ತೂರಿ, ಆತ್ಮವಿಶ್ವಾಸದ ಬಂಡಿಯೇರಿ ಹೊರಡುತ್ತೇವೆ.

**ಧರ್ಮಾಂತರದ ಅವಶ್ಯಕತೆ** : ಧರ್ಮಾಂತರದ ಮೂಲಕ ಹಿಂದೂಧರ್ಮದ ಪುರಾತನ ಗರ್ವಕ್ಕೆ ಅಂಬೇಡ್ಕರ್ ಕೊಟ್ಟ ಸ್ವಾಭಿಮಾನದ ಪೆಟ್ಟು ಮುಟ್ಟಿನೋಡಿಕೊಳ್ಳುವಂಥದ್ದಾಗಿದೆ. ಸಾಮಾಜಿಕ ಜಡತೆಯ ನಡುವೆ ಇಂಥದ್ದೊಂದು ಜೀವಂತ ಚಲನೆಗೆ ವೇಗವರ್ಧಕರಾಗಬೇಕಾದ ತುರ್ತಿಗಾದರೂ ಸಾಂಕೇತಿಕವಾಗಿ ಧರ್ಮಾಂತರದ ಅವಶ್ಯಕತೆ ಇದೆ. ಅದು ದಲಿತರಿಗೆ ಬಹಳ ದೊಡ್ಡ ಗೌರವ, ಹಣ, ಅಂತಸ್ತು, ಅನ್ನಾಹಾರ ತಂದುಕೊಡದೆ ಇರಬಹುದು. ಅನುಕ್ಷಣವೂ ಆತ್ಮಗೌರವಕ್ಕೆ ಬೀಳುತ್ತಿರುವ ಪೆಟ್ಟಿನ ಗಾಯವನ್ನು ಮಾಯಿಸಲಾದರೂ ನಮಗೊಂದು ಧರ್ಮ ಬೇಕಾಗಿದೆ. ಕಾಲದುದ್ದಕ್ಕೂ ಎಡೆಬಿಡದೆ ನಡೆಯುತ್ತಿರುವ ಅವಮಾನಗಳ ಹಳೆ ಚರಿತ್ರೆಯಿಂದ ಗುಳೆ ಹೊರಡಲು ನಾವು ದೃಢ ನಿರ್ಧರಿಸಿದ್ದೇವೆ. ಮನೆಯೊಳಗೆ ಮನೆಯೊಡೆಯರಿರದೆ ಹೇಗೆ ಬಾಳುತ್ತಾರೋ ಕಾದುನೋಡುತ್ತೇವೆ.

ಸಾಮಾಜಿಕ, ಧಾರ್ಮಿಕ, ತಾತ್ತ್ವಿಕವಾಗಿ ಯಾವ ನಿಟ್ಟಿನಿಂದ ನೋಡಿದರೂ ಬೌದ್ಧಧರ್ಮ ಅತ್ಯಂತ ಜೀವಪರವಾದ ಧರ್ಮ. ನಮಗೆ ತಿಳಿದಂತೆ ಕಾಮನ್‌ಸೆನ್ಸ್ ಇರುವ ಪ್ರಪಂಚದ ಮೊತ್ತಮೊದಲ ಮನುಷ್ಯ ಬುದ್ಧ. ಬುದ್ಧ ಮುಟ್ಟುವುದನ್ನೇ ಹುಟ್ಟು ನಿಷೇಧಿಸಿದ್ದ ವ್ಯವಸ್ಥೆಯಲ್ಲಿ ಜೀವಪರಿಸರದ ನಾಡಿಮಿಡಿತವನ್ನು ಮುಟ್ಟಿ ಮೈದಡವಿದ ಸಂತ; ಸಕಲ ಜೀವಾತ್ಮಗಳ ಬಿಟ್ಟಾಲಿಗಳ ನಿಟ್ಟುಸಿರಿಗೆ ಸಾಂತ್ವನವನ್ನು ನೇವರಿಸಿದ ಮಹಾತ್ಮ; ಯುದ್ಧಸಂಬಂಧೀ ಹಿಂಸೆಗಳನ್ನು ಸ್ಪಷ್ಟ ಮಾತುಗಳಲ್ಲಿ ವಿರೋಧಿಸಿದ ಪ್ರಪಂಚದ ಸರ್ವಶ್ರೇಷ್ಠ ಶಾಂತಿದೂತ. ಅಂಥದೊಂದು ಮಿಡಿವ ಚೇತನವನ್ನು ಬಳುವಳಿಯಾಗಿ ಕೊಟ್ಟ ಅರಳಿ ಮರದ ನೆರಳಿಗೆ ನಾವು ಋಣಿಯಾಗಿದ್ದೇವೆ. ಇನ್ನು ಮುಂದೆ ಶತಮಾನದ ಅವಮಾನಗಳ ಸ್ಮೃತಿಯ ನೆಲೆಯಿಂದ ಜೀವ ಶೋಷಕ ಧರ್ಮವನ್ನು ಸಾರಾಸಗಟು ಧಿಕ್ಕರಿಸುತ್ತೇವೆ. ನಮ್ಮ ನಮ್ಮದೇ 'ಅಧೋ' ಬದುಕಿನ ನುಡಿಗಟ್ಟುಗಳ ಮೂಲಕ ಆ ಚೇತನವನ್ನು ಆವಾಹಿಸಿಕೊಳ್ಳಲು ಮುನ್ನಡೆಯುತ್ತೇವೆ.

ಸಾಂಸ್ಥೀಕರಣಗೊಂಡ ಬೌದ್ಧಧರ್ಮ ಕೂಡ ಜಗತ್ತಿನ ಉಳಿದೆಲ್ಲ ಧರ್ಮಗಳ ಸಾಲಿಗೆ ಸೇರುವಷ್ಟರ ಮಟ್ಟಿಗೆ ಭ್ರಷ್ಟಗೊಂಡಿದೆ. ಪುರೋಹಿತಶಾಹಿ ಹಿತಾಸಕ್ತಿಗಳ ದಾಳವಾಗಿಯೇ ಅದು ಪ್ರಯೋಗವಾಗುತ್ತಿದೆ. ಬೌದ್ಧಧರ್ಮವನ್ನು ಪಾಲಿಸುತ್ತಿರುವ ದೇಶಗಳಲ್ಲೇ ಅಸಮಾನತೆಯು ಕೆಲಮಟ್ಟಿಗೆ ಜೀವಂತವಾಗಿದೆ. ಅಂದಮಾತ್ರಕ್ಕೆ ಭಾರತದಲ್ಲಿ ಅದನ್ನು ವಿರೋಧಿಸುತ್ತಿರುವ ದುಷ್ಟಶಕ್ತಿಗಳ ಹಿಂದಿನ ನಯವಂಚಕತನದ ನೇಣಿಗೆ ಕೊರಳೊಡ್ಡಲಾರೆವು. ಆ ಎಚ್ಚರವನ್ನು ಡಾ॥ ಅಂಬೇಡ್ಕರ್ ತಮ್ಮ ಶೋಧನೆಗಳ ಮೂಲಕ ನಮಗೆ ಈಗಾಗಲೆ ತಿಳಿಹೇಳಿದ್ದಾರೆ.

**ಕೊನೆಯ ಮಾತು** : ಅಂದ ಹಾಗೆ ನಮ್ಮ ಧಮ್ಮದೀಕ್ಷೆಯ ದಿಟ್ಟ ಹೆಜ್ಜೆಯು ಸಂಘಪರಿವಾರಗಳ ಧರ್ಮವನ್ನು ಕುರಿತ ವಾಚ್ಯ ವೈಭವೀಕರಣದಂತೆ ಮೆರೆಯುವುದಿಲ್ಲ. ಬುದ್ಧತತ್ತ್ವಗಳನ್ನು ಸೃಜನಶೀಲವಾಗಿ ಪರಿಷ್ಕರಿಸಿದ ಅಂಬೇಡ್ಕರರು ತೋರಿದ ಬಿಡುಗಡೆಯ ದಾರಿಯಲ್ಲಿ ಹೊಸ ಬದುಕನ್ನು ಅರಸಿ ನಡೆಯುತ್ತೇವೆ. ಎಂದಿನಂತೆ, ಸಾಂಸ್ಥೀಕರಣಗೊಂಡ ಬೌದ್ಧ ಧರ್ಮದ ಬಗ್ಗೆ ನಮಗೆ ಎಚ್ಚರ, ಭಯ ಇದ್ದೇ ಇದೆ. ಅದೇ ಸಂದರ್ಭದಲ್ಲಿ ಬುದ್ಧನ ಚಿಂತನೆಗಳನ್ನು ನಿಜವಾದ ಅರ್ಥದಲ್ಲಿ ವಿಶ್ಲೇಷಿಸಿರುವ ಅಂಬೇಡ್ಕರರ 'ಬುದ್ಧ ಮತ್ತು ಆತನ ಧಮ್ಮ' ನಮ್ಮೆದುರಿಗಿದ್ದೇ ಇದೆ. ಅದರ ಬೆಳಕಿನಲ್ಲಿ ಇಲ್ಲಿನ ಇನ್ನಿತರ ಅಲ್ಪಸಂಖ್ಯಾತ ಧರ್ಮಗಳನ್ನು ಮುಸುಕಿದ ಮಬ್ಬಿನಿಂದ ಪಾರುಮಾಡಿ ಹಿಡಿದೆತ್ತುವ ಗಂಭೀರ ಹೊಣೆ ಹೊತ್ತು ಸಾಗುತ್ತೇವೆ. ಈ ನಮ್ಮ ನಿರ್ಧಾರದಿಂದ ಭಾರತದ ಇತಿಹಾಸದ ದಿಕ್ಕು ಕೊಂಚಮಟ್ಟಿಗಾದರೂ ಬದಲಾಗಬಹುದೆಂಬ ಭರವಸೆಯನ್ನಂತೂ ಇಟ್ಟುಕೊಂಡಿದ್ದೇವೆ.

**ಚಿಕ್ಕಮಗಳೂರು ಗಣೇಶ**
ಸಂಶೋಧಕ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು

# 'ಆವರಣ'




# ಸಾಹಿತಿಯ ರಾಜಕಾರಣ

ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ

ಕನ್ನಡದ ಪ್ರಸಿದ್ಧ ಕಾದಂಬರಿಕಾರರಾದ ಡಾ॥ ಎಸ್. ಎಲ್. ಭೈರಪ್ಪನವರು ತಮ್ಮ ಎರಡನೇ ಐತಿಹಾಸಿಕ ಕಾದಂಬರಿಯ ಪ್ರವೇಶದಲ್ಲಿ ''ಸತ್ಯವನ್ನು ಮರೆಮಾಚುವ ಮಾಯೆಯ ಕಾರ್ಯಕ್ಕೆ 'ಆವರಣ' ''ವೆಂದು ಹೆಸರು ಎಂದು ಹೇಳಿ ಕೃತಿಯ ಶೀರ್ಷಿಕೆಯ ಔಚಿತ್ಯವನ್ನು ಸ್ಪಷ್ಟಪಡಿಸಿದ್ದಾರೆ. ಕ್ರಿ.ಶ. ಎಂಟನೆಯ ಶತಮಾನದ ಅನಂತರದ ಚರಿತ್ರೆಯು 'ಆವರಣಕ್ಕೆ ಒಳಗಾಗಿದೆ' ಎಂದು ಭಾವಿಸುವ ಲೇಖಕರು 'ಆವರಣವನ್ನು ಭೇದಿಸಿ' 'ಚರಿತ್ರೆಯ ಸತ್ಯವನ್ನು ಪ್ರಕಟಿಸುವ ಉದ್ದೇಶದಿಂದ ಕೃತಿರಚನೆಯಲ್ಲಿ ತೊಡಗಿದ್ದಾರೆ. ಲೇಖಕರ ಈ ಉದ್ದೇಶ ಘನವಾದುದು; ಅಡ್ಡಿ ಇಲ್ಲ. ಡಾ॥ ಎಸ್. ಎಲ್. ಭೈರಪ್ಪನವರ ದೃಷ್ಟಿಯಲ್ಲಿ ಒಂದು ದೇಶದ, ಒಂದು ಕಾಲದ 'ಚರಿತ್ರೆ' ಎಂದರೆ – ಅದು ಪ್ರಾಚೀನವಾಗಲಿ, ಅರ್ವಾಚೀನವಾಗಲಿ – ಆ ಕಾಲದಲ್ಲಿ ನಡೆದಿರಬಹುದಾದ ಮತಧರ್ಮಗಳ, ಜಾತಿ ಉಪಜಾತಿಗಳ ಸಂಘರ್ಷದ ಜಟಿಲಜಾಲ. ಅದರಾಚೆಗೆ ಆ ಕಾಲಾವಧಿಯ ಆರ್ಥಿಕ, ಸಾಮಾಜಿಕ ಪರಿಸ್ಥಿತಿ, ವೈಜ್ಞಾನಿಕತೆ, ತಾಂತ್ರಿಕತೆ, ಕಲೆ, ಸಾಹಿತ್ಯ, ಸಂಗೀತ ಇತ್ಯಾದಿ ಕ್ಷೇತ್ರಗಳ ಸಾಧನೆ ಸೋಲುಗಳಾವುವೂ ಮುಖ್ಯವಾಗುವುದಿಲ್ಲ. ಹೀಗಾಗಿ ಡಾ॥ ಭೈರಪ್ಪನವರ ಸತ್ಯಶೋಧನೆಯು ಮತೀಯ ರಾಜಕಾರಣದ ನೆಲೆಯಿಂದ ಮೇಲೇರುವುದೇ ಇಲ್ಲ.

೧೯೬೦ನೇ ವರ್ಷದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಎಂ.ಎ. ವಿದ್ಯಾರ್ಥಿಗಳಿಗೆ 'ಚಾರಿತ್ರಿಕ ಕಾದಂಬರಿ'ಯನ್ನು ವಿಶೇಷ ಅಧ್ಯಯನ ವಿಷಯವಾಗಿ ಗೊತ್ತುಪಡಿಸಲಾಗಿತ್ತು. ತ.ರಾ.ಸು. ಅವರ ಪ್ರಸಿದ್ಧ ಚಾರಿತ್ರಿಕ ಕಾದಂಬರಿಗಳ ಜೊತೆಯಲ್ಲಿ ಕನ್ನಡ ವಿದ್ಯಾರ್ಥಿಗಳು ಅನುವಾದಗಳ ಮೂಲಕ ಮರಾಠರ ಉಚ್ಛ್ರಾಯವನ್ನು ಚಿತ್ರಿಸುವ 'ಈಶ್ವರೀಸೂತ್ರ', 'ಮರಾಠರ ಅಭ್ಯುದಯ', 'ಛತ್ರಪತಿ' ಕಾದಂಬರಿಗಳನ್ನೂ 'ಆನಂದಮಠ', 'Tale of Two Cities' ಗಳನ್ನೂ ಅಧ್ಯಯನ ಮಾಡಬೇಕಾಗಿತ್ತು. ಇತ್ತೀಚೆಗೆ ನಿಧನರಾದ ಕನ್ನಡದ ಶ್ರೇಷ್ಠ ಕಾದಂಬರಿಕಾರರಲ್ಲಿ ಒಬ್ಬರಾಗಿದ್ದ ಪೂರ್ಣಚಂದ್ರ ತೇಜಸ್ವಿಯವರು ಆಗ ವಾದಿಸುತ್ತಿದ್ದರು – 'ಚಾರಿತ್ರಿಕ ಕಾದಂಬರಿ' ಎಂಬ ಪರಿಕಲ್ಪನೆಯೇ ಒಂದು ವಿಪರ್ಯಾಸ, ಎಂದು.

ಚರಿತ್ರೆಗೆ 'ಇತಿಹಾಸ' ಎಂಬ ಪರ್ಯಾಯಪದವೂ ಉಂಟಷ್ಟೆ. ಇದನ್ನು ಇತಿ+ಹ+ಆಸ, ಎಂದರೆ 'ಹೀಗೆ ನಡೆಯಿತು' ಎಂಬುದರ ವರದಿ ಎಂದು ಅರ್ಥೈಸಲಾಗುತ್ತದೆ. ಚರಿತ್ರೆಯು ವಸ್ತುನಿಷ್ಠವಾಗಿರಬೇಕು ಎಂಬುದು ಒಂದು ಆದರ್ಶ. ಆದರೆ ಚರಿತ್ರೆಯನ್ನು ಬರೆದಿಡುವವರೂ ಮನುಷ್ಯ ವ್ಯಕ್ತಿಗಳೇ ತಾನೆ. ಒಂದು ವ್ಯವಸ್ಥೆಯ ಪರವಾದ, ವ್ಯವಸ್ಥೆಯನ್ನು ಸಮರ್ಥಿಸುವ ಚರಿತ್ರಕಾರರು ತಮ್ಮ ಬದ್ಧತೆಗೆ ಅನುಗುಣವಾಗಿ ಸದರಿ ವ್ಯವಸ್ಥೆಯನ್ನು ವಿಜೃಂಭಿಸಿ ಬರೆಯಬಹುದು; ಹಾಗೆಯೇ ಸದರಿ ವ್ಯವಸ್ಥೆಯನ್ನು ವಿರೋಧಿಸುವವರು ಕೀಳ್ಗಳೆದು ಬರೆಯಬಹುದು. ಈ ಅಭಿಪ್ರಾಯವನ್ನು ಸ್ವಲ್ಪ ಉತ್ಪ್ರೇಕ್ಷಿಸಿ ವಿಡಂಬನೆ ಮಾಡುವವರು 'ಚರಿತ್ರೆಯಲ್ಲಿ ಹೆಸರುಗಳು ಮತ್ತು ತೇದಿಗಳನ್ನು ಹೊರತುಪಡಿಸಿ ಇನ್ನಾವುದೂ ಸತ್ಯವಲ್ಲ' – Nothing is true in History except dates and names – ಎನ್ನುವುದೂ ಉಂಟು. ಚರಿತ್ರೆಯಂತಹ ಚರಿತ್ರೆಯ ವಿಚಾರವೇ ಹೀಗಾದ ಮೇಲೆ ಇನ್ನು ಕಾದಂಬರಿಯ ಮಾತೇನು ಬಂತು. ಹೇಳಿ ಕೇಳಿ ಕಾದಂಬರಿ ಎಂಬುದು ಕಲ್ಪನಾಪ್ರಧಾನ ಕಥನ ಪ್ರಕಾರ. ನಾವು 'ಕಾದಂಬರಿ' ಎಂದು ಹೆಸರಿಸುವ ಸಾಹಿತ್ಯಪ್ರಕಾರಕ್ಕೆ ಮೂಲವಾದ 'ನಾವೆಲ್' ಎಂಬುದನ್ನು ಇಂಗ್ಲಿಷ್‌ನಲ್ಲಿ 'ಫಿಕ್ಷನ್' ಎನ್ನುತ್ತಾರಷ್ಟೆ. Fiction ಎಂಬುದು fact ಎಂಬುದಕ್ಕೆ ವಿರುದ್ಧ ಪದ. ಹೀಗಾಗಿ ಚಾರಿತ್ರಿಕ ಕಾದಂಬರಿಯಲ್ಲಿ ವಸ್ತುಸತ್ಯ ಮತ್ತು ಕಲ್ಪನೆಗಳನ್ನು ವಿಂಗಡಿಸುವುದು ಬಡಪಾಯಿ ಬುದ್ಧಿಗೆ ಸುಲಭವಲ್ಲ. ಹೀಗೆಂದಮಾತ್ರಕ್ಕೆ ಜಗತ್ತಿನಲ್ಲಿ ಶ್ರೇಷ್ಠ ಚಾರಿತ್ರಿಕ ಕಾದಂಬರಿಗಳೇ ಇಲ್ಲವೆಂದು ಅರ್ಥವಲ್ಲ. ಆದರೆ, ಡಾ॥ ಭೈರಪ್ಪನವರು ಒಂದು ತತ್ವ ಪ್ರತಿಪಾದನೆಗೆ ಬದ್ಧರಾಗಿ, ತಮ್ಮ ನಿರೂಪಣೆಗೆ ಆಧಾರಗಳನ್ನು ಕೊಡುತ್ತ ಚರಿತ್ರೆಯನ್ನು ಪುನರ್‌ರಚಿಸುವ ಸಾಹಸದಲ್ಲಿ ತೊಡಗುವುದರಿಂದ ಕಾದಂಬರಿ ಎಲ್ಲಿಯೋ ಕಳೆದುಹೋಗಿಬಿಡುತ್ತದೆ.

ವಿಮರ್ಶಕರು ಕಾದಂಬರಿಯೆಂಬ ಸಾಹಿತ್ಯಪ್ರಕಾರವನ್ನು ವಿಶ್ಲೇಷಿಸುವಾಗ ಕಥೆ, ವಸ್ತುವಿನ್ಯಾಸ, ಪಾತ್ರರಚನೆ, ಕಥನತಂತ್ರ, ನಿರೂಪಣಾಶೈಲಿ ಮತ್ತು ಇವೆಲ್ಲದರ ಮೂಲಕ 'ಧ್ವನಿತವಾಗುವ' ಕೃತಿಯ ಆಶಯ ಅಥವಾ ಕೃತಿಕಾರನ ತಾತ್ವಿಕ ನಿಲುವು – ಎಂಬ ಅಂಶಗಳನ್ನು ಪರಿಗಣಿಸುತ್ತಾರೆ. ಆದರೆ ಪ್ರಸ್ತುತ ಗ್ರಂಥದಲ್ಲಿ 'ಕೃತಿಯ ಆಶಯ' ಅಥವಾ ಕೃತಿಕಾರನ 'ತಾತ್ವಿಕ ನಿಲುವು' ಆರಂಭದಿಂದಲೂ 'ವಾಚ್ಯ'ವಾಗಿಯೇ ಇರುವುದರಿಂದ ಓದುಗರು 'ಧ್ವನಿ'ಯನ್ನು ಗ್ರಹಿಸಲು ಹೆಚ್ಚು ಶ್ರಮಪಡಬೇಕಾಗಿಲ್ಲ. ಇಲ್ಲಿರುವ ಕಥೆಯೆಂಬುದು ನೆಪಕ್ಕೆ ಮಾತ್ರ – ಅದೂ ಒಂದು ಮತಧಾರ್ಮಿಕ ರಾಜಕೀಯ ಸಂದೇಶವಾಹಕವಾಗಿ.

ಕುಣಿಗಲ್ ಸಮೀಪ ನರಸಾಪುರದ ನರಸಪ್ಪಗೌಡರ ಮಗ ನರಸಿಂಹೇಗೌಡರ ಮಗಳು ಲಕ್ಷ್ಮಿ, ಪುಣೆಯ 'ಫಿಲ್ಮ್ ಇನ್‌ಸ್ಟಿಟ್ಯೂಟ್'ನಲ್ಲಿ ಚಲನಚಿತ್ರ ತಂತ್ರವನ್ನು ಅಧ್ಯಯನ ಮಾಡಲು ಹೋದಾಗ, ಸಹಪಾಠಿಯಾಗಿದ್ದ ಅಮೀರನ ಆಕರ್ಷಣೆಗೆ ಒಳಗಾಗುತ್ತಾಳೆ. ಅವನನ್ನೇ ಮದುವೆಯಾಗುತ್ತೇನೆಂದು ಹಠ ಹಿಡಿದಾಗ ಅಪ್ಪ ಹೇಳಿದ ಕೊನೆಯ ಮಾತು ''ನೀನೊಬ್ಬಳು ಏನು ಮಾಡಿಕೊಂಡೆ ಅನ್ನೋದೊಂದೇ ಮುಖ್ಯವಲ್ಲ. ನಿನ್ನ ಹೊಟ್ಟೇಲಿ ಹುಟ್ಟುವ ಮಗುವೋ ಅದರ ಮಗುವೋ ಯಾವುದೋ ಒಂದು ತಲೆಮಾರಿನ ಮಗುವು ನಮ್ಮ ದೇವಸ್ಥಾನವನ್ನು ಒಡೆದು ನಾಶ ಮಾಡುತ್ತೆ; ಅದರ ಪಾಪ ನಿನಗೆ ತಟ್ಟುತ್ತೆ'' – ಎಂಬುದು.

ಲಕ್ಷ್ಮಿ ಇನ್ನೂ ಮೂರುವರ್ಷದವಳಾಗಿರುವಾಗಲೇ ಅವಳಮ್ಮ ತೀರಿಕೊಂಡದ್ದರಿಂದ ಅಪ್ಪ ಅವ್ವ ಎರಡೂ ಆಗಿ ಸಾಕಿದ್ದ ನರಸಿಂಹೇಗೌಡರನ್ನೂ, ತೌರೂರನ್ನೂ ತೊರೆದು ರಜಿಯಾ ಆಗಿ ಮತಾಂತರಹೊಂದಿ ಅಮೀರನೊಡನೆ ಸಂಸಾರ ನಡೆಸುತ್ತಾಳೆ. ನಜೀರ್‌ನನ್ನು ಹೆತ್ತು, ಬೆಳೆಸಿ ಅವನು ವಿದ್ಯಾವಂತನಾಗಿ ಸೌದಿಗೆ ಹೋದ ಮೇಲೆ, ದಾಂಪತ್ಯವು ತನ್ನ ಆಕರ್ಷಣೆ ಕಳೆದುಕೊಳ್ಳುವ ಹಂತದಲ್ಲಿ, ಇಪ್ಪತ್ತೆಂಟು ವರ್ಷಗಳ ಬಳಿಕ, ಸಾಕ್ಷ್ಯಚಿತ್ರವೊಂದನ್ನು ತಯಾರಿಸುವ ಸಲುವಾಗಿ ಹಂಪಿಗೆ ಬರುತ್ತಾಳೆ. ಅಲ್ಲಿ 'ಕೈಕಾಲು ಮುರಿದುಕೊಂಡು ಮುಕ್ಕಾದ ನರಸಿಂಹ ವಿಗ್ರಹ'ವನ್ನು ನೋಡಿ ಉದ್ವಿಗ್ನಳಾಗುತ್ತಾಳೆ. ಆ ನರಸಿಂಹ ದೇವರ ಮೂಲಕ ತನ್ನ ಹುಟ್ಟೂರಿನ ಸಂಬಂಧ, ಸತ್ತು ಹೋದ ತೌರೂರಿನ ನರಸಿಂಹದೇವರು ರಜಿಯಾಳನ್ನು ಕಾಡಲಾರಂಭಿಸುತ್ತವೆ. (ಹಂಪಿಯ ವಿರೂಪಾಕ್ಷ ದೇವಾಲಯದ ಭಗ್ನಾವಶೇಷಗಳನ್ನು ಕಂಡು ಚಿಂತಾಕ್ರಾಂತರಾದ, ಕನ್ನಡದ ಪ್ರಸಿದ್ಧ ವಿದ್ವಾಂಸರಾಗಿದ್ದ ಪ್ರೊ॥ ವಿ. ಸೀತಾರಾಮಯ್ಯನವರು ಒಂದು ನಾಟಕ ಬರೆದಿದ್ದಾರೆ. ನಾಟಕದಲ್ಲಿ ಒಬ್ಬ ಯುವಕ 'ಸರ್ವಶಕ್ತನಾದ ದೇವರು ಮುಸಲ್ಮಾನರ ದಾಳಿಯ ವಿರುದ್ಧ ತನ್ನನ್ನು ತಾನು ರಕ್ಷಿಸಿಕೊಳ್ಳಲಾಗಲಿಲ್ಲವೇಕೆ ?' ಎಂಬ ಪ್ರಶ್ನೆ ಕೇಳುತ್ತಾನೆ. ಯುವಕನ ಪ್ರಶ್ನೆಯಿಂದ ನಾಟಕಕಾರರು ಕೃದ್ಧರಾಗುವುದಿಲ್ಲ. ವಿ.ಸೀ. ಅವರು ತಮ್ಮ ನಾಟಕಕ್ಕೆ 'ನಾಗರಿಕ' ಎಂಬ ಹೆಸರಿಟ್ಟಿದ್ದಾರೆ !)

ಹಂಪಿಯಿಂದ ಹಿಂತಿರುಗಿದ ಒಂದು ವಾರದ ಬಳಿಕ ತನ್ನ ಅಪ್ಪ ಸತ್ತ ಸುದ್ದಿ – ಆ ವೇಳೆಗಾಗಲೇ ನರಸಿಂಹೇಗೌಡರು ತೀರಿಕೊಂಡು ಹದಿನೈದು ದಿನಗಳು ಕಳೆದಿದ್ದವು – ರಜಿಯಾಳಿಗೆ ತಲುಪುತ್ತದೆ. ರಜಿಯಾ ಹಳ್ಳಿಗೆ ಬಂದು ತನ್ನ ಅಪ್ಪನಿಗೆ ಧರ್ಮಗುರುಗಳೂ ಆಗಿದ್ದ ಅರ್ಚಕ ಶೇಷಶಾಸ್ತ್ರಿಗಳನ್ನು ಕಾಣುತ್ತಾಳೆ. ಶಾಸ್ತ್ರಿಗಳು ಬಾಯಿಬಿಟ್ಟು ಹೇಳದಿದ್ದರೂ, ತನ್ನ ಅಪ್ಪ ಸಾಯುವ ಕಾಲದಲ್ಲಿ ಕೂಡ ಮಗಳ ಮುಖ ನೋಡಲು ಇಚ್ಛಿಸಲಿಲ್ಲವೆಂಬುದು ಲಕ್ಷ್ಮಿ ಉರುಫ್ ರಜಿಯಾಳಿಗೆ ಅರ್ಥವಾಗುತ್ತದೆ.

ನರಸಿಂಹದೇವರ ಗುಡಿಯ ಹಿಂಭಾಗದಲ್ಲಿದ್ದ ಹಳೆಯ ಮನೆಯನ್ನು ಹೊಕ್ಕು, ಅಪ್ಪ ಮಲಗುತ್ತಿದ್ದ ಎರಡು ಅಂಕಣಗಳ ಕೋಣೆಯ ಬಾಗಿಲು ತೆರೆದು ಅಲ್ಲಿ ಹಲವಾರು ಬೀರುಗಳಲ್ಲಿ ಜೋಡಿಸಿಟ್ಟಿದ್ದ ಅಪಾರ ಸಂಖ್ಯೆಯ ಪುಸ್ತಕಗಳನ್ನು ನೋಡಿದಾಗ ರಜಿಯಾ ಬೆಕ್ಕಸ ಬೆರಗಾಗುತ್ತಾಳೆ. ಕನ್ನಡದಲ್ಲಿ ಮಾತ್ರ ಓದಲು ಬರೆಯಲು ಕಲಿತಿದ್ದ ಅಪ್ಪ ಇಂಗ್ಲಿಷ್ ಭಾಷೆಯ (ಇನ್ನಿತರ ಭಾಷೆಗಳಿಂದ ಇಂಗ್ಲಿಷ್‌ಗೆ ಅನುವಾದಗೊಂಡ ಗ್ರಂಥಗಳೂ ಸೇರಿದಂತೆ) ಇಷ್ಟೊಂದು ಉದ್ಗ್ರಂಥಗಳನ್ನು ಅಧ್ಯಯನ ಮಾಡಿದುದು ಹೇಗೆ ಎಂಬುದು ಅವಳ ಆಶ್ಚರ್ಯಕ್ಕೆ ತತ್‌ಕ್ಷಣದ ಕಾರಣ.

ಆ ಪುಸ್ತಕಗಳನ್ನೆಲ್ಲ ಬೆಂಗಳೂರಿಗೆ ಸಾಗಿಸುವ ಬದಲು ಅಪ್ಪನ ಆ ಗ್ರಂಥಗಳನ್ನು ಅಪ್ಪನು ಓದಿದ ಆ ಕೋಣೆಯಲ್ಲೇ, ಆ ಮನೆಯ ವಾತಾವರಣದಲ್ಲೇ ಓದಬೇಕು ಎಂಬ 'ಭಾವನಾತ್ಮಕ ತಾದಾತ್ಮ್ಯ'ದಿಂದ ಮೂರುವರ್ಷ ಸತತವಾಗಿ ಅಧ್ಯಯನ ಮಾಡಿ, ಅಪ್ಪ ತಯಾರಿಸಿಟ್ಟಿದ್ದ ಟಿಪ್ಪಣಿಗಳನ್ನು ಆಧರಿಸಿ ಒಂದು ಚಾರಿತ್ರಿಕ ಕಾದಂಬರಿ ಬರೆಯುತ್ತಾಳೆ. ರಜಿಯಾ ಬರೆದ ಪುಸ್ತಕದಿಂದ ಮತೀಯ ಗಲಭೆಯು ಪ್ರಚೋದನೆಗೊಳ್ಳಬಹುದೆಂದು ಹೆದರಿದ ಸರ್ಕಾರವು ಆ ಪುಸ್ತಕವನ್ನು ಮುಟ್ಟುಗೋಲು ಹಾಕಿಕೊಂಡು, ಚಿತ್ರಕಥಾ ಲೇಖಕಿ ರಜಿಯಾ ಬೇಗಮಳನ್ನು ರಾತ್ರೋರಾತ್ರಿ ಬಂಧಿಸುವ ಸಂಚು ರೂಪಿಸುತ್ತದೆ. ಈ ಗುಮಾನಿಯನ್ನು ಹೇಗೋ ಗ್ರಹಿಸಿದ ಅಮೀರ್ ಹಳ್ಳಿಗೆ ಬಂದು ರಜಿಯಾಳನ್ನು ತನ್ನೊಡನೆ ಕಾರಿನಲ್ಲಿ ಕರೆದುಕೊಂಡು ಹೋಗುತ್ತಾನೆ. (ಒಂದು ವೇಳೆ ಅವಳನ್ನು ಹಿಂದೂಧರ್ಮಕ್ಕೆ ಮತ್ತೆ ಮತಾಂತರಿಸಿದ್ದರೆ ಯಾವ ಜಾತಿಗೆ ಸೇರಿಸಬೇಕೆಂಬ ಪ್ರಶ್ನೆ ಉದ್ಭವಿಸುತ್ತಿತ್ತಲ್ಲವೆ ?)

ನಾಯಕ ಪಾತ್ರವನ್ನೇ ನಿರೂಪಕ(ಕಿ)ನಾಗಿಟ್ಟುಕೊಂಡು ಉತ್ತಮ ಪುರುಷದಲ್ಲಿ ಬರೆಯುವುದು ಒಂದು ಕಥನ ತಂತ್ರ. ಪ್ರಥಮ ಪುರುಷ ಅಥವಾ ಉತ್ತಮ ಪುರುಷ ನಿರೂಪಣೆಯು ಲೇಖಕನು ತನ್ನ ಅನುಕೂಲಕ್ಕಾಗಿ ಅಳವಡಿಸಿಕೊಳ್ಳುವ ಲೇಖನ ವಿಧಾನವಷ್ಟೆ. ಡಾ॥ ಭೈರಪ್ಪನವರು ''... ನನ್ನ ಸ್ವಂತದ್ದು ಏನೂ ಇಲ್ಲ...'' ಎಂದು ಮತ್ತೆ ಮತ್ತೆ ಘೋಷಿಸುತ್ತಾರಾದರೂ ಕೃತಿಯ ಎಲ್ಲ ಪಾತ್ರ, ಉಪಪಾತ್ರಗಳೂ ಕೃತಿಕಾರನ ಸಂತಾನವೇ ಎಂಬುದನ್ನು ಸಾಹಿತ್ಯದ ವಿದ್ಯಾರ್ಥಿಗಳು ಬಲ್ಲರು. 'ನನ್ನದಲ್ಲ' ಎಂಬ ಮಾತು ವಿನಯದ ತೋರಿಕೆಯಾಗಬಹುದು ಅಥವಾ ಜವಾಬ್ದಾರಿಯಿಂದ ನುಣುಚಿಕೊಳ್ಳುವ ಉಪಾಯವಾಗಬಹುದು ಅಷ್ಟೆ. 'ವೀರನಾರಾಯಣನೆ ಕವಿ; ಲಿಪಿಕಾರ ಕುವರವ್ಯಾಸ' ಎಂದು ಸ್ವತಃ ಕವಿಯೇ ಹೇಳಿದ್ದರೂ ಸಹ ನಾವು 'ಕರ್ಣಾಟ ಭಾರತ ಕಥಾಮಂಜರಿ'ಯನ್ನು ಗದುಗಿನ ನಾರಣಪ್ಪನ ಕವಿವ್ಯಕ್ತಿತ್ವದ ಮೂಲಕವೇ ಅಭ್ಯಾಸ ಮಾಡುತ್ತೇವೆ. ವಾಸ್ತವವಾಗಿ ಕೃತಿಕಾರನ ಚಿತ್ತದಲ್ಲಿ ವಾಸನಾತ್ಮಕವಾಗಿರುವ ನಾನಾಬಗೆಯ ಸ್ಥಾಯಿ, ಸಂಚಾರಿಭಾವಗಳೇ ಕೃತಿಯಲ್ಲಿ ಶಬ್ದ ಪ್ರತೀಕಗಳ ಮೂಲಕ ಪಾತ್ರಗಳಾಗಿ ರೂಪುತಳೆಯುತ್ತವೆಯೆಂಬುದು ಸಾಹಿತ್ಯ ವಿಮರ್ಶಕರ ಸಾಮಾನ್ಯ ಅಭಿಪ್ರಾಯ. ಹೀಗಿರುವುದರಿಂದ ಪ್ರಸ್ತುತ ಕಾದಂಬರಿಯ ನಿರೂಪಕಿಯೂ ನಾಯಕಿಯೂ ಆದ ಲಕ್ಷ್ಮೀ ಉರುಫ್ ರಜಿಯಾ ಬೇಗಂ ಮಾತ್ರವಲ್ಲದೆ, ಲಕ್ಷ್ಮಿಯ ಅಪ್ಪ ನರಸಿಂಹೇಗೌಡ, ಶೇಷಶಾಸ್ತ್ರಿಗಳು, ದೇವಘಡದ ರಾಜಕುಮಾರ, ಅಮೀರ್, ನಜೀರ್, ಎನ್.ಎಸ್.ಎನ್. ಶಾಸ್ತ್ರಿ ಮೊದಲಾದವರೆಲ್ಲ ನಿರ್ವಹಿಸುವ ಪಾತ್ರ, ಆಡುವ ಮಾತುಗಳಿಗೆ ಲೇಖಕರದೇ ಜವಾಬ್ದಾರಿ. ಕೆಲವು ವೇಳೆ ಒಂದು ಪಾತ್ರದ ನಡೆನುಡಿಗಳು ಸಮಕಾಲೀನ ವ್ಯಕ್ತಿಯೊಬ್ಬನ 'ಪ್ರತಿಚಿತ್ರ'ದಂತೆ ಭಾಸವಾಗುವ ಸಂದರ್ಭದಲ್ಲಿ ಅದು ಕೇವಲ 'ಕಾಕತಾಳೀಯ' ಎಂದು ವಿವರಣೆ ನೀಡಿ ಲೇಖಕರು 'ಕಾನೂನುಕ್ರಮ'ದಿಂದ ಪಾರಾಗುವುದೂ ಉಂಟು. ಇರಲಿ.

ನರಸಿಂಹೇಗೌಡರು ಮೊದಲಿನಿಂದಲೂ ಚರಕದಲ್ಲಿ ನೂಲು ತೆಗೆಯುವುದು ಮತ್ತು ತಮ್ಮ ಜಾತಿ ರೂಢಿಯಾದ ಮಾಂಸಾಹಾರ, ಮದ್ಯಪಾನಗಳನ್ನು ತ್ಯಜಿಸಿ ಕೇವಲ ಸಸ್ಯಾಹಾರಿಯಾಗಿ ಸಾತ್ವಿಕ ಜೀವನ ನಡೆಸುವ ವಿಚಾರದಲ್ಲಿ 'ಅಪ್ಪಟ ಗಾಂಧೀವಾದಿ'. ('ಆವರಣ'ದಲ್ಲಿ ಪರಮತ ಸಹಿಷ್ಣುತೆಯೊಂದನ್ನು ಹೊರತುಪಡಿಸಿ – ಎಂದು ಸೇರಿಸಿಕೊಳ್ಳಬೇಕಾಗುತ್ತದೆ.) ಆದ್ದರಿಂದ, ಇಪ್ಪತ್ತೆಂಟು ವರ್ಷಗಳ ಹಿಂದೆ ಹಳ್ಳಿಯನ್ನು ತೊರೆದುಹೋಗಿದ್ದ ರಜಿಯಾ ಹಿಂದಿರುಗಿ ಬಂದು ಅಪ್ಪನ ಕೋಣೆ ಹೊಕ್ಕಾಗ 'ಮೊದಲು ಗೋಡೆಯ ಮೇಲೆ ತೂಗುಹಾಕಿದ್ದ ಗಾಂಧೀ ಮಹಾತ್ಮರ ಚಿತ್ರ ಅಲ್ಲಿಂದ ಕಾಣೆಯಾಗಿರುವುದು' ಸಾಂಕೇತಿಕವಾಗಿರಬಹುದು.

ಡಾ॥ ಭೈರಪ್ಪನವರು ಗ್ರಂಥದ ಪ್ರವೇಶದಲ್ಲೆ 'ಐತಿಹಾಸಿಕ ವಸ್ತುವನ್ನು ಸಾಹಿತ್ಯವಾಗಿ ಪರಿವರ್ತಿಸುವಾಗಲಂತೂ ಸಾಹಿತಿಗೆ ಸತ್ಯದ ಬಗೆಗೆ ಇರಬೇಕಾದ ಜವಾಬ್ದಾರಿಯು ನನ್ನನ್ನು ಎಚ್ಚರಿಸಿದೆ' (ಪು. X) ಎಂದಿದ್ದಾರಷ್ಟೆ. ಇಲ್ಲಿ 'ಪರಿವರ್ತಿಸು' ಎಂಬ ಮಾತನ್ನು ಮುಖ್ಯವಾಗಿ ಗಮನಿಸಬೇಕು. ಇಂದು ನಾವು ಸಾಹಿತಿ, ಸಾಹಿತ್ಯ ಎಂಬ ಪದಗಳನ್ನು ಬಳಸುವ ವಿಶಾಲಾರ್ಥದಲ್ಲಿ 'ಕಾವ್ಯ' ಎಂಬುದನ್ನೇ ಬಳಸಿದ ಪ್ರಾಚೀನ ಸಾಹಿತ್ಯ ಚಿಂತಕರು ಹೇಳುವುದು ಹೀಗೆ : ''ಅಪಾರವಾದ ಕಾವ್ಯ (ಸಾಹಿತ್ಯ) ಜಗತ್ತಿನಲ್ಲಿ ಕವಿಯೆ (ಸಾಹಿತಿಯೆ) ಸೃಷ್ಟಿಕರ್ತ. ತನಗೆ ಹೇಗೆ ರುಚಿಸುವುದೋ ಹಾಗೆ ವಿಶ್ವವನ್ನು ರೂಪಾಂತರಗೊಳಿಸುತ್ತಾನೆ.'' (ಅಪಾರೇ ಕಾವ್ಯಸಂಸಾರೇ ಕವಿರೇವ ಪ್ರಜಾಪತಿಃ। ಯಥಾಸ್ಮೈ ರೋಚತೇ ವಿಶ್ವಂ ತಥೇದಂ ಪರಿವರ್ತತೇ॥) ಆದ್ದರಿಂದ ಸಾಹಿತಿಗಳಿಗೆ, ಅವರಲ್ಲಿ ಒಬ್ಬರಾದ ಭೈರಪ್ಪನವರಿಗೆ, ವಸ್ತುವನ್ನು ಪರಿವರ್ತಿಸುವ ಸ್ವಾತಂತ್ರ್ಯವಿದ್ದೇ ಇದೆ; ಅದನ್ನು ಯಾರೂ ಪ್ರಶ್ನಿಸುವಂತಿಲ್ಲ. ಆದರೆ ಬಹುಜನಪ್ರಿಯರಾದ ಈ ಲೇಖಕರು ಇತ್ತ 'ಚರಿತ್ರೆಯ ಸತ್ಯ'ವನ್ನು ಅನಾವರಣಗೊಳಿಸುವುದಾಗಿ ಹೇಳುತ್ತ ಅತ್ತ ಕಾದಂಬರಿಯಾಗಿ ಪರಿವರ್ತಿಸುವುದನ್ನೂ ಹೇಳುತ್ತ ಓದುಗರನ್ನು ಗೊಂದಲದಲ್ಲಿ ಕೆಡವಬಾರದು ಅಷ್ಟೆ. ಈಚೆಗೆ ನಡೆದ ಸಂವಾದಗೋಷ್ಠಿಯೊಂದರಲ್ಲಿ ಒಬ್ಬ ವಿದ್ವಾಂಸರು 'ಆವರಣ'ವನ್ನು ಆಧುನಿಕ ಋಷಿಯೊಬ್ಬರು ರಚಿಸಿದ, ಚರಿತ್ರೆಯ ಸತ್ಯವನ್ನು ತೆರೆದಿಡುವ ಮಹಾನ್‌ಕೃತಿ (epic) ಎಂದು ವರ್ಣಿಸಿದರೆ ಮತ್ತೊಬ್ಬರು ಈ ಗ್ರಂಥವನ್ನು 'ಕಾದಂಬರಿಯಾಗಿಯೇ ಓದಬೇಕು' ಎಂದು ಪ್ರತಿಪಾದಿಸಿದ್ದನ್ನು ನಾವಿಲ್ಲಿ ನೆನೆಯಬಹುದು.

ಉಳಿದಂತೆ ''ಈ ಕಾದಂಬರಿಯ ಐತಿಹಾಸಿಕ ವಿಷಯದಲ್ಲಿ ನನ್ನ ಸ್ವಂತದ್ದು ಏನೂ ಇಲ್ಲ. ಪ್ರತಿಯೊಂದು ವಿವರ ಅಥವಾ ನಡೆಗೂ ಇರುವ ಆಧಾರಗಳನ್ನು ಸಾಹಿತ್ಯದ ಕಲೆಯು ತಡೆದುಕೊಳ್ಳುವಮಟ್ಟಿಗೂ ಕಾದಂಬರಿಯ ಅಂಗವಾಗಿಯೇ ಅಳವಡಿಸಿದ್ದೇನೆ. ...ಉಳಿದ ಆಧಾರಗಳನ್ನು ನಾನಲ್ಲ 'ಕಾದಂಬರಿಯೊಳಗಿನ ಕಾದಂಬರಿ'ಯನ್ನು ರಚಿಸಿದ ಪಾತ್ರವು (ಅಂದರೆ ಲಕ್ಷ್ಮಿ ಉರುಫ್ ರಜಿಯಾ ಬೇಗಮ್) ತನ್ನ ಕ್ರಿಯೆಯ ಅಗತ್ಯವಾಗಿ ಕೊಟ್ಟಿದೆ'' (ಪು. IX) ಎಂದಿದ್ದಾರೆ. ಈ ವಿಚಾರದಲ್ಲಿ 'ಕಾದಂಬರಿಯೊಳಗಿನ ಕಾದಂಬರಿಯನ್ನು ರಚಿಸಿದ ಪಾತ್ರ' ಮತ್ತು ಕಾದಂಬರಿಕಾರನನ್ನು ಪ್ರತ್ಯೇಕಿಸಿ ನೋಡಬೇಕಾಗಿಲ್ಲ ಎಂಬ ಮಾತನ್ನು ಆಗಲೇ ಹೇಳಿದ್ದಾಗಿದೆ. ಇನ್ನು ಕಾದಂಬರಿಯೊಳಗಿನ ವಿವರಗಳನ್ನು ಪ್ರಾಮಾಣ್ಯ (authenticity)ಗೊಳಿಸುವ ಸಲುವಾಗಿ ಕೊಟ್ಟಿರುವ ಆಧಾರಗಳನ್ನು ಗಮನಿಸಬಹುದು :

ನಿರ್ದಿಷ್ಟವಾಗಿ ಹುಡುಕುತ್ತ ಹೋದರೆ, ಔರಂಗಜೇಬನ ಸೇನಾಪತಿ ಮೀರ್‌ಜುಮ್ಲಾನು ಅಸ್ಸಾಮಿನ ರಾಜನನ್ನು ಸೋಲಿಸಿ ಅವನ ಮಕ್ಕಳನ್ನು ಒತ್ತೆಯಾಳುಗಳಾಗಿ ಇಟ್ಟುಕೊಂಡ ಸಂದರ್ಭವನ್ನು ಉಲ್ಲೇಖಿಸುತ್ತ ಮಾಸಿರ್- ಇ-ಆಲಂಗೀರಿ ಮತ್ತು A Short History of Aurangazib ಗ್ರಂಥಗಳನ್ನು ವಿವರ ಸಹಿತವಾಗಿ ಹೆಸರಿಸುತ್ತಾರೆ (ಪು. ೬೦). ಹಿಜಡಾಗಳ ವಿಷಯವಾಗಿ ಬರೆಯುವಾಗ ಭಾರತದಲ್ಲಿ ಸಂಚರಿಸಿದ ಯೂರೋಪೀಯ ಪ್ರವಾಸಿಗಳಾದ ಮನೂಕಿ ಮತ್ತು ಬರ್ನಿಯರ್ ಎಂಬ ಇಬ್ಬರು ವ್ಯಕ್ತಿಗಳ ಹೆಸರು ದೊರೆಯುತ್ತದೆ (ಪು. ೯೨). ಮುಘಲ್ ರಾಜಕುಮಾರರ ಎಳತನದ ವಿದ್ಯಾಭ್ಯಾಸವು ಜನಾನಾದ ಹೆಂಗಸರು ಮತ್ತು ಹಿಜಡಾಗಳಿಂದ ನಡೆಯುತ್ತಿತ್ತು – ಎನ್ನುವಾಗ 'Travels in the Mughal Empire' ಎಂಬ ಹೆಸರು (ಲೇಖಕರು ಮತ್ತು ಪ್ರಕಟಣೆಯ ವಿವರ ಸಹಿತವಾಗಿ) ದೊರೆಯುತ್ತದೆ. ಮೊಘಲ್ ಬಾದಷಹರ ಜನಾನಾದ ಹೆಂಗಸರ ನಡೆನುಡಿಗಳನ್ನು ವರ್ಣಿಸುವಾಗ



ತೂರಾಡ್ತಾ ಬರೋದು ನೋಡಿದ್ರೆ ಇವರು ಕುಡಿದು ನಾಶ ಮಾಡಿರಬಹುದು ಅಂತ ಅನುಮಾನ ಬರುತ್ತೆ ಕಣೊ...

'Jahangir's India' ಎಂಬ ಪುಸ್ತಕದ (ಲೇಖಕರು ಮತ್ತು ಪ್ರಕಾಶನದ ವಿವರ ಸಹಿತ) ಉಲ್ಲೇಖವಿದೆ; ಎಳೆಯ ರಾಜಕುಮಾರರಿಗೆ ಪ್ರಿಯತಮೆಯರನ್ನು ಒದಗಿಸುತ್ತಿದ್ದವರೂ ಹಿಜಡಾಗಳೇ ಎನ್ನುವಾಗ K. S. Lal ಅವರ Mughal Harem – ಪುಸ್ತಕದ ಉಲ್ಲೇಖವಿದೆ (ಎಲ್ಲವೂ ಪು. ೯೨).

ಮಿಕ್ಕಂತೆ, ಕಾದಂಬರಿಯೊಳಗಿನ ಕಾದಂಬರಿಯ ನಿರೂಪಕಿ ರಜಿಯಾ ಒಂದು ಕಡೆ, ''ಅಪ್ಪನ ಇಡೀ ಮೂವತ್ತೆರಡು ಪುಟಗಳ ಟಿಪ್ಪಣಿಯನ್ನು ನನ್ನ ಕಾದಂಬರಿಯ ಭಾಗವಾಗಿ ಸೇರಿಸಿಕೊಳ್ಳುವ ಆಸೆ ಯಾಗುತ್ತದೆ. ಹಾಗೆ ಮಾಡಿದರೆ ಕಾದಂಬರಿಯ ಹದ ಕೆಡುತ್ತದೆ'' ಎನ್ನುತ್ತಾಳೆ. (ಹಾಗಿದ್ದರೆ ಟಿಪ್ಪಣಿಯನ್ನೇ ಪ್ರಕಟಿಸಬಹುದಾಗಿತ್ತಲ್ಲವೇ? – ಎಂಬ ಪ್ರಶ್ನೆಗೆ ಉತ್ತರವಿಲ್ಲ.) ಇನ್ನೊಂದು ಕಡೆ ''ನಾನು ಪುಸ್ತಕಗಳನ್ನು ತಂದುಕೊಡ್ತೀನಿ. ಪೂರ್ತಿ ಓದಬೇಡ. ನಾನು ಗುರುತು ಹಾಕಿರುವ ಭಾಗಗಳನ್ನು ಓದು'' ಎಂದು ರಜಿಯಾ ತನ್ನ ಗಂಡನಿಗೆ ಸಲಹೆ ಕೊಡುತ್ತಾಳೆ. ಆಮೇಲೆ ''ಮತ್ತೊಮ್ಮೆ ಕಾಶಿಯನ್ನು ನೋಡದೆ ಔರಂಗಜೇಬನು ವಿಶ್ವನಾಥ ಮಂದಿರವನ್ನು ಧ್ವಂಸಮಾಡಿಸಿ ಅದೇ ಸ್ಥಳದಲ್ಲಿ ಜ್ಞಾನವಾಪೀ ಮಸೀದಿಯನ್ನು ಕಟ್ಟಿಸಿದ ಭಾಗವನ್ನು ಬರೆದರೆ ವಾಸ್ತವತೆ ಮೂಡುವುದಿಲ್ಲ''ವೆಂದು ಆಲೋಚಿಸಿ, ತಾನು ಮೊದಲೇ ಊಹಿಸಿದ್ದ ವಾಸ್ತವತೆಗೆ ಪುರಾವೆಗಳನ್ನು ಹುಡುಕುತ್ತ 'ಪುರಾಣ ಪುಣ್ಯಕಥೆ'ಗಳ ಪ್ರವಚನಮಾಡಿ 'ಧರ್ಮ ಉಳಿಸಿದ್ದ' ಸನಾತನ ಬ್ರಾಹ್ಮಣ ಜಾತಿಗೆ ಸೇರಿದ್ದರೂ ಸಹ, ಈಗ ಹೊಟ್ಟೆಪಾಡಿಗಾಗಿ ಸೈಕಲ್‌ರಿಕ್ಷಾ ತುಳಿಯುತ್ತಿರುವ ಬಿಸ್ವನಾಥ ಸರ್ಮ (ಶರ್ಮ)ನ ಜೊತೆ ಕಾಶಿಯ ಬೀದಿಬೀದಿಗಳಲ್ಲಿ ಸಂಚರಿಸಿ, ಮಂದಿರ, ಮಸೀದಿ, ಕಂಬ ಬೋದಿಗಳ ಕಥೆಯನ್ನು ಅರಿತುಕೊಳ್ಳುತ್ತಾಳೆ. ಆಕೆಗೆ 'ಇತಿಹಾಸ ಕಾಣತೊಡಗುತ್ತದೆ.'

ಚಾರಿತ್ರಿಕ ಆಧಾರಗಳ ಬಗೆಗಿನ ಅತ್ಯಂತ ಸ್ವಾರಸ್ಯಕರ ಪ್ರಸಂಗ ಬರುವುದು ಗ್ರಂಥದ ಕಡೆಯಲ್ಲಿ; ರಾತ್ರೋರಾತ್ರಿ ಪೊಲೀಸರು ರಜಿಯಾಳ ನಿವಾಸದ ಮೇಲೆ ದಾಳಿಮಾಡಿ, ಅವಳು ಬರೆದ ಪುಸ್ತಕವನ್ನು ಮುಟ್ಟುಗೋಲು ಹಾಕಿಕೊಂಡು, ಆಧಾರಗ್ರಂಥಗಳ ಇಡೀ ಸಂಗ್ರಹವನ್ನು ಜಪ್ತು ಮಾಡಿಕೊಂಡು ಲಾರಿಯಲ್ಲಿ ತುಂಬಿಕೊಂಡು ಹೋದರು. ಆಮೇಲೇನಾಯಿತು? ಅಲ್ಲಿಗೆ ಕಾದಂಬರಿಗೆ ಬಳಸಿದ ಚಾರಿತ್ರಿಕ ಆಧಾರಗಳ ಸರ್ವನಾಶವಾಯಿತು.

ಈಗ ಗ್ರಂಥದ ಕಡೆಯಲ್ಲಿ ಲಗತ್ತಿಸಿರುವ ೫೦ ಆಧಾರಗ್ರಂಥಗಳ ಪಟ್ಟಿಯನ್ನು ಲಕ್ಷ್ಮಿ ಉರುಫ್ ರಜಿಯಾ ಬೇಗಮಳು 'ಬೆಂಗಳೂರಿನ ಸ್ನೇಹಿತ ನಂಜುಂಡಪ್ಪ ನವರ ಮನೆಯಲ್ಲಿ ಅವಿತು ಕುಳಿತಿದ್ದಾಗ ಕೇವಲ ನೆನಪಿನಿಂದ' ತಯಾರಿಸಿದಳು. ಆಮೇಲೇನಾಯಿತು? ಡಾ|| ಎಸ್. ಎಲ್. ಭೈರಪ್ಪನವರ 'ಆವರಣ' ಪ್ರಕಟವಾಗಿ ಎರಡೇ ತಿಂಗಳಲ್ಲಿ ಆರು ಮುದ್ರಣಗಳನ್ನು ಕಂಡು ಅತ್ಯಂತ ಜನಪ್ರಿಯವಾಯಿತು. ಇಲ್ಲಿ ಹೇಳಿರುವುದಷ್ಟೂ – ಅಷ್ಟು ಮಾತ್ರ – ಚಾರಿತ್ರಿಕ ಸತ್ಯ ಎಂದು ಜನ ಕೊಂಡಾಡಿದರು.

ಕಾದಂಬರಿಯುದ್ದಕ್ಕೂ 'ಧರ್ಮ' ಶಬ್ದವನ್ನು

**ವಾಸ್ತವ**

ಉಪದೇಶಗಳ ಕೇಳುವುದು
ಮಲ್ಲಿಗೆಯ ಮೃದು ಸೊಬಗು
ಕೇದಗೆಯ ತುದಿ ಮುಳ್ಳು
ಅದ ಹೊತ್ತು ಬದುಕುವುದು

**ವಾಸುದೇವ ನಾಡಿಗ್**
ಜವಾಹರ್ ನವೋದಯ ವಿದ್ಯಾಲಯ
ಏನಿಗದಲೆ, ಚಿಂತಾಮಣಿ, ಕೋಲಾರ

ಬಿಡಿಯಾಗಿಯೂ ವಿಶೇಷಣಗಳ ಸಹಿತವಾಗಿಯೂ ಮತ್ತೆ ಮತ್ತೆ ಬಳಸಲಾಗಿದೆಯಾದರೂ ಧರ್ಮ, ಮತಧರ್ಮ, ಜಾತಿಧರ್ಮ, ಆಶ್ರಮಧರ್ಮ ಎಂಬ ಪರಿಕಲ್ಪನೆಗಳ ಅರ್ಥವನ್ನು ಸ್ಫುಟಗೊಳಿಸುವ ಯಾವ ಪ್ರಯತ್ನವೂ ಇಲ್ಲಿ ಇಲ್ಲ. ಒಂದು ಕಡೆ 'ಧರ್ಮದ್ರೋಹಿ ಯನ್ನು ಧರ್ಮನಿಷ್ಠರು ಟೀಕಿಸುವಂತೆ' ಎಂದರೆ, ಇನ್ನೊಂದು ಕಡೆ ಶೇಷಶಾಸ್ತ್ರಿಗಳು ನರಸಿಂಹೇಗೌಡನಿಗೆ ಮತ್ತೊಂದು ಮದುವೆ ಮಾಡಿಕೊಳ್ಳುವಂತೆ ಉಪದೇಶಿಸುತ್ತ 'ಆಶ್ರಮಧರ್ಮ'ವನ್ನು ಪೂರೈಸಲೇ ಬೇಕು ಎನ್ನುತ್ತಾರೆ. ಮುಂದಿನ ಸಾಲಿನಲ್ಲಿ 'ಪರಧರ್ಮೋ ಭಯಾವಹಃ' ಎಂಬ ಮಾತು ಬರುತ್ತದೆ. (ವಾಸ್ತವ ವಾಗಿ ಇದು ಬಂಧುಬಾಂಧವರ ವಧೆಗೆ ಹಿಂಜರಿದು, ಯುದ್ಧ ಮಾಡುವುದಿಲ್ಲವೆಂದು ಕುಳಿತಿದ್ದ ಅರ್ಜುನ ನನ್ನು ಯುದ್ಧಕ್ಕೆ ಪ್ರೇರೇಪಿಸುವ ಸಲುವಾಗಿ 'ನೀನು ಕ್ಷತ್ರಿಯ ಧರ್ಮ'ವನ್ನು ಪಾಲಿಸಲೇಬೇಕು ಎಂದು ಕೃಷ್ಣ ಪರಮಾತ್ಮನು ಉಪದೇಶಿಸುವ ಸಂದರ್ಭದಲ್ಲಿ ಬರುವ ಮಾತಲ್ಲವೆ? – ಬಲ್ಲವರು ಉತ್ತರ ಹೇಳಬೇಕು.)

ಸೈಕಲ್‌ರಿಕ್ಷಾ ತುಳಿಯುವ ಕಾಶಿವಾಸಿ ಬಿಸ್ವನಾಥ ಸರ್ಮನು ''ನಮ್ಮ ಧರ್ಮ, ಬ್ರಾಹ್ಮಣ ಧರ್ಮ'' ಎನ್ನುತ್ತಾನೆ. ಹಾಗೆಯೇ ''ಹಿಂದೂಧರ್ಮದಲ್ಲಿ ಗಂಡು ದೇವರಷ್ಟೇ ಸಂಖ್ಯೆಯ ಹೆಣ್ಣು ದೇವತೆಗಳಿದ್ದಾರೆ!'' ಎಂಬ ಮಾತು ಬರುತ್ತದೆ.

ಮತಧರ್ಮ, ಜಾತಿ, ಪಂಥ – ಇವೆಲ್ಲ ಅನೂಚಾನ ವಾಗಿ ನಡೆದುಬಂದಿರುವ ನಂಬಿಕೆಗಳನ್ನು, ಆಚಾರವಿಚಾರ ಗಳನ್ನು ಆಧರಿಸಿದ, ಮಾನವ ಸಮುದಾಯದ ವಿಂಗಡಣೆಗಳೆಂಬ ಮೂಲ ಸತ್ಯವನ್ನು ಈ ಲೇಖಕರು ಅಂಗೀಕರಿಸುವಂತೆ ತೋರುವುದಿಲ್ಲ. ಒಂದು ಹಂತದಲ್ಲಿ ದೇವಘಡದ ಯುವರಾಜಕುಮಾರನ ಬಾಯಲ್ಲಿ ''... ಸೃಷ್ಟಿ ಸ್ಥಿತಿ ಲಯಗಳ, ಅವುಗಳ ಅಧಿದೇವತೆ ಗಳಾದ ಬ್ರಹ್ಮ ವಿಷ್ಣು ಮಹೇಶ್ವರರ ಧರ್ಮವು ನನ್ನ ಮನಸ್ಸಿನಿಂದ ಅರೆಕ್ಷಣದಲ್ಲಿ ಕಳಚಿಕೊಂಡಿತು'' ಎಂಬ ಮಾತನ್ನು ಕೂಡ ಆಡಿಸಿದ್ದಾರೆ. ಶೇಷಶಾಸ್ತ್ರಿಗಳು ಒಮ್ಮೆ ರಜಿಯಾಳಿಗೆ ಹೇಳುತ್ತಾರೆ: ''ಧರ್ಮಾಂತರ ಅನ್ನೋದು ಇಲ್ಲವೇ ಇಲ್ಲ. ಹುಟ್ಟಿದ ಧರ್ಮ ಬಿಟ್ಟರೆ ಹೋಗುಲ್ಲ'' – ಎಂದು. ಅಂದರೆ ಮತಧರ್ಮವು, ಅದರಲ್ಲೂ ಹಿಂದೂ ಧರ್ಮವು ವಂಶವಾಹಿ (genes)ಗಳ ಮೂಲಕ ಹರಿದುಬರುವ ಹುಟ್ಟುಗುಣವಿದ್ದಂತೆ ಎಂದು ಕೆಲವು ಬಾರಿ ಪ್ರತಿಪಾದಿಸಲಾಗಿದೆ. – ಲಕ್ಷ್ಮಿ ಉರುಫ್ ರಜಿಯಾ ಬೇಗಮಳಲ್ಲಿ ಹೀಗಾಗಿದೆ. ಇನ್ನು ಕೆಲವು ಬಾರಿ ಮತಾಂತರ ಹೊಂದಿದ ಹಿಂದೂಗಳ ಮಕ್ಕಳು ಹೊಸದಾಗಿ ಸ್ವೀಕರಿಸಿದ ಮತೀಯ ನಂಬಿಕೆ ಆಚರಣೆ ಗಳನ್ನು ಅನುಸರಿಸುವುದರಿಂದ ವಂಶವಾಹಿಯ ಗುಣವು ಬದಲಾಗುತ್ತದೆ. ಅಮೀರನನ್ನು ಮದುವೆಯಾದರೆ ''ನಿನ್ನ ಹೊಟ್ಟೇಲಿ ಹುಟ್ಟುವ ಮಗುವೋ ಅದರ ಮಗುವೋ ಯಾವುದೋ ಒಂದು ತಲೆಮಾರಿನ ಮಗುವು ನಮ್ಮ ದೇವಸ್ಥಾನವನ್ನು ಒಡೆದು ನಾಶ ಮಾಡುತ್ತೆ...'' ಎಂದು ನರಸಿಂಹೇಗೌಡರು ಲಕ್ಷ್ಮಿಯನ್ನು ಎಚ್ಚರಿಸುತ್ತಾರೆ. ಮುಂದೆ ಅಮೀರ್ ಮತ್ತು ರಜಿಯಾರ ಮಗ ನಜೀರ್ ಇಸ್ಲಾಂ ಧರ್ಮವನ್ನು ಸಮರ್ಥಿಸುವ ಮಾತುಗಳನ್ನೇ ಆಡುತ್ತಾನೆ. ಹಾಗೆಯೇ, ''ಮೊಗಲ್ ಬಾದಶಾಹ ಜಹಂಗೀರ್, ಅವನ ಮಗ ಷಾಹಜಹಾನ್ ಇವರೆಲ್ಲರೂ ಹಿಂದೂ ತಾಯಂದಿರ ಹೊಟ್ಟೇಲಿ ಹುಟ್ಟಿದೋರು. ಅಧಿಕಾರಕ್ಕೆ ಬಂದಮೇಲೆ ದೇವಸ್ಥಾನಗಳನ್ನು ಒಡೆಸಿದರು'' ಎಂಬ ಮಾತು ಬರುತ್ತದೆ. ಅಂದರೆ ಹೆಣ್ಣು ಮತ್ತು ಗಂಡಿನಿಂದ ಹರಿದುಬರುವ ವಂಶವಾಹಿಯ ಗುಣಾಂಶಗಳಲ್ಲಿ ಗಂಡಿನ ಗುಣಾಂಶವೇ ಪ್ರಬಲವಾಗುತ್ತದೆ ಎಂಬುದು ಲೇಖಕರ ತೀರ್ಮಾನವಿರಬಹುದು. ಆದರೆ ದೇವಘಡದ ರಾಜಕುಮಾರನು ಮತಾಂತರ ಹೊಂದಿ ಹಿಜಡಾ ಆಗುವ ಮುಂಚೆಯೇ ರಜಪೂತ ರಾಜಕುಮಾರಿ ಶ್ಯಾಮಲೆಯಲ್ಲಿ ಅವನು ಬಿತ್ತಿದ ಬೀಜವು ಇಬ್ರಾಹಿಂ ಆಗಿ ದಿಲ್‌ಷದ್‌ಖಾನನ ಮನೆಯಲ್ಲಿ ಬೆಳೆದರೆ ಅದು ಸೈನಿಕನೇ ಆಗುತ್ತದೆ. ಮುಂದೊಂದು ದಿನ ದೇವಾಲಯ ಒಡೆಯುವ, ಜೆಸಿಯಾ ವಸೂಲು ಮಾಡುವ ಕೆಲಸದಲ್ಲಿ ತೊಡಗುತ್ತದೆ – ಎಂದು ದೇವಘಡದ ರಾಜವಂಶಸ್ಥನು ಭಯಪಡುತ್ತಾನೆ. ಈ ಸಂದರ್ಭದಲ್ಲಿ ತಂದೆಯ ಅಥವಾ ತಾಯಿಯ ವಂಶಾಣುಗಳಾವುವೂ ಕೆಲಸ ಮಾಡುವುದಿಲ್ಲ; ಬೆಳೆಯುವ ಪರಿಸರವೇ ಪ್ರಭಾವಶಾಲಿಯಾಗುತ್ತದೆ. ಒಟ್ಟಿನ ಮೇಲೆ ಮತಧರ್ಮವು ಆನುವಂಶಿಕವಾದ ಹುಟ್ಟುಗುಣವೆ? ಅಥವಾ ಸಾಮಾಜಿಕ ಪರಿಸರದ ಕೊಡುಗೆಯೆ? ಎಂಬ ಪ್ರಶ್ನೆಗೆ ಕಾದಂಬರಿಯಲ್ಲಿ ದೊರೆಯುವ ಉತ್ತರ ಗೊಂದಲಮಯವಾಗಿದೆ.

''ಆಧ್ಯಾತ್ಮದಲ್ಲಿ ದೇವರು ಅನ್ನುವುದು ಮುಖ್ಯ ವಲ್ಲವೇ ಅಲ್ಲ. ದೇವರನ್ನು ನಂಬದವನೂ ಆಧ್ಯಾತ್ಮಿ(?) ಯಾಗಬಲ್ಲ'' ಎಂಬ ಮಾತನ್ನು ಸಾಧು ಮಹಾರಾಜ್ ಒಬ್ಬರಿಂದ ಹೇಳಿಸುವ ಲೇಖಕರು ಕಾದಂಬರಿಯ ಕಥೆ ಹೆಣೆಯುವುದು ಹಂಪಿ ಮತ್ತು ನರಸಾಪುರದ ನರಸಿಂಹ ದೇವರು, ಕಾಶಿವಿಶ್ವನಾಥ ಮಂದಿರ, ಬಾಬ್ರಿ ಮಸೀದಿಯ ನಿರ್ಮಾಣಕ್ಕಿಂತ ಮುಂಚಿನ ಅಯೋಧ್ಯೆಯ ರಾಮಜನ್ಮಭೂಮಿ ಇವುಗಳ ಸುತ್ತಲೇ ಆಗಿದೆ.

ಹಿಂದೂಧರ್ಮ, ಭಾರತೀಯ ಸಂಸ್ಕೃತಿಗಳನ್ನು ಡಾ|| ಭೈರಪ್ಪನವರು ಚಿತ್ರಿಸುವುದು ಬಹುಮಟ್ಟಿಗೆ ಸನಾತನ ಬ್ರಾಹ್ಮಣ ಮತಾಚರಣೆಗಳು, ಕರ್ಮಕಾಂಡಗಳ ರೂಪದಲ್ಲಿಯೇ. ಅಲ್ಲಿಂದ ಆಚೆಗೆ ಹಿಂದೂಧರ್ಮದ ಅಂಗೋಪಾಂಗಗಳಾದ ಹತ್ತು ಹಲವು ಜಾತಿಪದ್ಧತಿ ಗಳಾಗಲಿ, ಭಾರತೀಯ ಸಂಸ್ಕೃತಿಯಲ್ಲಿ ಅಂತರ್ಗತ

ವಾಗಿರುವ ಹಲವು ಉಪಸಂಸ್ಕೃತಿಗಳಾಗಲಿ ಲೇಖಕರ ಲೆಕ್ಕಕ್ಕೇ ಬರುವುದಿಲ್ಲ. ಉದಾಹರಣೆಗೆ, 'ಕುಂಕುಮವಿಲ್ಲದ ಹಣೆ'ಯ ಪ್ರಸಂಗವನ್ನು ಗಮನಿಸಬಹುದು.

ರಜಿಯಾ ತನ್ನ ಹಳ್ಳಿಯ ಮನೆಗೆ ಬಂದ ಸ್ವಲ್ಪ ಹೊತ್ತಿನಲ್ಲೇ ಆ ಮನೆಯ ಜಗಲಿಯ ಮೇಲೆ ಕುಳಿತಿದ್ದವರಲ್ಲಿ ಒಬ್ಬಾಕೆ ''ಬರಿ ಅಣೇಲಿದೀಯಾ ಯಾಕವ್ವಾ ಏಟು ದಿನವಾತು ಗಂಡ ಸತ್ತು?'' ಎಂದು ಕೇಳಿಬಿಟ್ಟಳಂತೆ. (ರಜಿಯಾ ಆಕೆಗೆ ಅಪರಿಚಿತಳಾಗಿರಬೇಕು ಅಥವಾ ಆಕೆ 'ಜಾತಿಕೆಟ್ಟವಳು' ಎಂಬುದೂ ತುರುಕರು ಹಣೆಗೆ ಕುಂಕುಮವಿಡುವುದಿಲ್ಲವೆಂಬುದೂ ಆ ಹೆಂಗಸಿಗೆ ತಿಳಿದಿರಬೇಕು. ಎರಡೂ ಸಂದರ್ಭಗಳಲ್ಲಿ ಹೀಗೆ ಚುಚ್ಚುಮಾತಾಡುವಷ್ಟು ಅಸಂಸ್ಕೃತರಲ್ಲ ಹಳ್ಳಿಯ ಹೆಂಗಸರು.) ಇಂದಿಗೂ ಹಿಂದೂಗಳಲ್ಲಿ ಬಹುಸಂಖ್ಯಾತರಾಗಿರುವ ಕೆಳವರ್ಗದ ಜನ, ಶ್ರಮಜೀವಿಗಳು ಎಲ್ಲ ಹೊತ್ತಿನಲ್ಲೂ ಹಣೆಗೆ ಕುಂಕುಮವಿಟ್ಟುಕೊಂಡೇ ಇರುವ 'ಧರ್ಮ'ವನ್ನೇನೂ ಪಾಲಿಸುವುದಿಲ್ಲ. ಲಿಂಗಾಯಿತ ಮಹಿಳೆಯರಂತೂ – ಬ್ರಾಹ್ಮಣ ಹೆಂಗಸರಲ್ಲಿ ಕೇಶ ಮುಂಡನ ಮಾಡಿಸಿಕೊಂಡ ವಿಧವೆಯರಿಗೆ ಮಾತ್ರ ಮೀಸಲಾಗಿರುವ – ವಿಭೂತಿಯನ್ನು ಹಣೆಯಲ್ಲಿ ಧರಿಸುತ್ತಾರಷ್ಟೆ. ಆಧುನಿಕ ವೇಷ-ಭೂಷಣಗಳಲ್ಲಿ ಓಡಾಡುವ ಯುವತಿಯರು, ಹಣೆಯಲ್ಲಿ ಕುಂಕುಮ ಧರಿಸುವುದಿಲ್ಲ. ಇವರನ್ನೆಲ್ಲ ಹಿಂದೂಧರ್ಮ ಹೊರಹಾಕುತ್ತದೆಯೆ ?

(ವಿಧವೆಯರು ಕುಂಕುಮವಿಟ್ಟುಕೊಳ್ಳಬಹುದೇ ಬಾರದೇ ಎಂಬ ಬಗೆಗೆ ಹಿಂದೂಗಳಲ್ಲಿಯೇ ಕೆಲವು ದಿನಗಳ ಹಿಂದೆ ನಡೆದ ವಾದವಿವಾದಗಳನ್ನು ಪತ್ರಿಕೆಗಳ ಮೂಲಕ ಓದುಗರು ಅರಿತಿರಬಹುದು.)

ನರಸಿಂಹೇಗೌಡರು ತಮ್ಮ ಜಾತಿಪದ್ಧತಿಯಾದ ಮಾಂಸಾಹಾರ, ಮದ್ಯಪಾನಗಳನ್ನು ವರ್ಜಿಸಿ ಅಪ್ಪಟ ಸಸ್ಯಾಹಾರಿಯಾದುದನ್ನೂ ಅವರ ಶವವನ್ನು 'ಮಣ್ಣು ಮಾಡದೆ', ಶೇಷಶಾಸ್ತ್ರಿಗಳು ಮಂತ್ರಾಗ್ನಿಪೂರ್ವಕವಾಗಿ (ಮೃತನ ಗೋತ್ರ, ಸೂತ್ರ ?) ದಹನ ಮಾಡಿಸಿದುದನ್ನು; ಒಂದಷ್ಟು ಬೂದಿಯನ್ನು ಸಂಗಮದಲ್ಲಿ ವಿಸರ್ಜಿಸುವ (ಅಸ್ಥಿಸಂಚಯ ಮತ್ತು ಅಸ್ಥಿ ವಿಸರ್ಜನ) ಸಲುವಾಗಿ ಒಂದು ಮಡಿಕೆಯಲ್ಲಿ ಶೇಖರಿಸಿಟ್ಟಿದ್ದುದನ್ನು ಲೇಖಕರು ವಿವರವಾಗಿ ಚಿತ್ರಿಸುತ್ತಾರೆ. ಸ್ಪಷ್ಟವಾಗಿ ಇವೆಲ್ಲ ಬ್ರಾಹ್ಮಣ ಜಾತಿಪದ್ಧತಿಗೆ ವಿಶಿಷ್ಟವಾದ ಕರ್ಮಕಾಂಡಗಳು; ಇರಲಿ.




# ಒಕ್ಕಣೆಯೋಕುಳಿ !

ನಿಮಗೆ ಅಚ್ಚರಿಯೆನ್ನಿಸೀತು. ನಾನು ಜಾಹಿರಾತು, ಸೂಚನಾಫಲಕ, ತಿದ್ದುಪಡಿಗಳನ್ನು ಕಂಡರೆ ಹಾವು ಗೋಚರಿಸಿದಷ್ಟೇ ಹೌಹಾರಿಬಿಡುತ್ತೇನೆ. ನಿನ್ನೆ ಸೆಲೂನಿಗೆ ಹೋಗಿದ್ದಾಗ ಅಲ್ಲಿ ತೂಗುಹಾಕಲಾಗಿದ್ದ ಫಲಕಗಳಲ್ಲಿ ಒಂದಂತೂ ಬಹು ಗಾಬರಿ ಮೂಡಿಸಿತ್ತು; 'ಫೇಸ್ ಬೀಟಿಂಗ್ ಮಾಡುತ್ತೇವೆ'. ನಾನು ಹನುಮಂತುವನ್ನು ''ಏನಪ್ಪ ಹಾಗೆಂದರೆ ? ಮುಖವನ್ನು ತಟ್ಟಿತಟ್ಟಿ ಊದಿಸಿ ವಯಸ್ಸು ಕಾಣದಂತೆ ಮಾಡುತ್ತೀಯೋ ಹೇಗೆ, ಇಲ್ಲ ಕಪಾಳಕ್ಕೆ ಬಾರಿಸುತ್ತೀಯೋ ?'' ಎಂದು ಕೇಳಿದೆ. ''ಛೆ! ಎಲ್ಲಾದ್ರು ಹಾಗೆ ಮಾಡ್ತೀವ ಸಾರ್. ಸ್ವಲ್ಪ ಸರಿಯಾಗಿ ಕನ್ನಡಕ ಸರಿ ಮಾಡ್ಕೊಂಡು ನೋಡಿ. ಅಳಿಸಿಹೋಗಿರೋ ಅಕ್ಷರ ಯಾವುದು ಅಂತ ನಿಮ್ಗೇ ಗೊತ್ತಾಗುತ್ತೆ'' ಅಂದ. ''ಸ್ವಲ್ಪ ಕಟಿಂಗ್ ನಿಲ್ಲಿಸು'' ಎಂದು ಕನ್ನಡಕವನ್ನು ಮೂಗನ್ನು ಹಿಂಡಿಯೆ ಮೇಲೇರಿಸಿಕೊಂಡು ದಿಟ್ಟಿಸಿದೆ. 'ಬ್ಲೀಚಿಂಗ್' ನನ್ನ ಕಣ್ಣಿಗೆ 'ಬೀಟಿಂಗ್' ಎಂದೇ ಕಂಡಿತ್ತು! ಅಗೋ ಇನ್ನೊಂದು ಫಲಕ! 'ಶೇವ್ ಮಾಡಿಸಿಕೊಂಡರೆ ಮೀಸೆಗೆ ಡೈ ಉಚಿತ' ಅದರ ಒಕ್ಕಣೆ. ಸದ್ಯ ತಲೆ ಬೋಳಿಸಿಕೊಂಡರೆ ಹೇರ್‌ಡೈ ಉಚಿತ ಅಂತ ಇಲ್ವಲ್ಲ ಅಂದುಕೊಂಡು ಒಳಗೊಳಗೆ ನಕ್ಕೆ.

''ನಿಮಗೆ ಹಸಿವೆಯಾಗುತ್ತಿಲ್ಲವೆ ? ಹಾಗಾದರೆ ಕೂಡಲೇ ಸಂಪರ್ಕಿಸಿರಿ...'' ಎನ್ನುವ ಗೋಡೆ ಜಾಹಿರಾತನ್ನು ಈಚೆಗೆ ನಾನು ಗಮನಿಸಿದೆ. ಆ ಧನ್ವಂತರಿ ಮಹಾನುಭಾವ ಪರಿಣಾಮಕಾರಿಯಾದ ಗುಳಿಗೆಯನ್ನೋ ಅಥವಾ ಟಾನಿಕ್‌ಅನ್ನೋ ಕೊಡುತ್ತಾರೆಂದೇ ಭಾವಿಸೋಣ. ಹಸಿವೆ ವಿಪರೀತವಾಗಿ ಸಿಕ್ಕಿದ್ದೆಲ್ಲ ಭಕ್ಷಿಸುವಂತಾಗಿ ಅಜೀರ್ಣಕ್ಕೆ ಆಸ್ಪದವಾಗುವುದಿಲ್ಲವೆಂಬ ಖಾತರಿ ತಾನೆ ಏನು ? ನೀವು ಎಲ್ಲಾದರೂ 'ಆಸ್ಪತ್ರೆಗೆ ಏಕಮುಖ ದಾರಿ' ಎಂಬ ಫಲಕವನ್ನು ಗಮನಿಸಿರಬೇಕು. ಎಂಥವರಿಗಾದರೂ ಗುಮಾನಿ ಹುಟ್ಟೀತು, ರೋಗರುಜಿನ ಬಾಧಿತರು ಆ ಆಸ್ಪತ್ರೆಯಿಂದ ಚಿಕಿತ್ಸೆ ಪಡೆದುಕೊಂಡು ವಾಪಸ್ಸು ಅದೇ ದಾರಿಯಲ್ಲಿ ಬರಲಾರರೇ ಎಂದು! ''ಹಲ್ಲು ಕೀಳಿಸಬೇಡಿರಿ... ಅದನ್ನು ನಮಗೆ ಬಿಡಿ'' ಒಕ್ಕಣೆ ಕೂಡ ಆತಂಕ ಹುಟ್ಟಿಸುವಂಥದ್ದು. ಹಲ್ಲು ಉದುರಿಸಲು ನಾವಿದ್ದೇವೆ ಎನ್ನುವ ಅಭಯವನ್ನು ಆ ಜಾಹಿರಾತು ನೀಡುತ್ತಿದೆಯೆ ?

''ಜೀವನದಲ್ಲಿ ನಿಮಗೆ ಸಮಸ್ಯೆಗಳಿವೆಯೆ ? ನಮ್ಮಲ್ಲಿ ಬನ್ನಿ ಪರಿಹರಿಸಿಕೊಳ್ಳಿ'' ಎಂದು ಜಾಹೀರು ಪಡಿಸುವವರಿಗೆ ಬಾಳಿನಲ್ಲಿ ಕಷ್ಟ ಸುಖಗಳೆರಡೂ ಇರುತ್ತವೆಯೆಂಬ ತಥ್ಯ ಏಕಾದರೂ ಅರ್ಥವಾಗುವುದಿಲ್ಲವೋ ಕಾಣೆ. 'ಉಚಿತ'ಗಳ ಹಾವಳಿ ಇದ್ದದ್ದೇ ಅನ್ನಿ. 'ಉಳಿಸಿ'ಗಳ ಕಾಟವಂತೂ ವಿಪರೀತ. ಅರ್ಥಶಾಸ್ತ್ರಜ್ಞನೊಬ್ಬ 'ಉಳಿಸಿ' ಎಂದು ಗ್ರಾಹಕರನ್ನು ಆಕರ್ಷಿಸುವುದು ಇನ್ನೂ ಖರ್ಚಿಗೆ ದೂಡುವ ತಂತ್ರವೆನ್ನುತ್ತಾನೆ. ''ಲಾಟರಿಯಲ್ಲಿ ಲಕ್ಷ ಲಕ್ಷ ಗೆಲ್ಲಿ. ಒಂದು ಕಾರನ್ನೋ ಮನೆಯನ್ನೋ ಮಾಡಿಕೊಳ್ಳಿರಿ'' ಎಂದು ಆಟೋದಲ್ಲಿ ಸಾರುತ್ತಾ ಹೋಗುತ್ತಿದ್ದವನನ್ನು ಪ್ರಶ್ನಿಸಿದೆ : ''ಅಲ್ಲಯ್ಯ ಮಾರಾಯ ನನಗೆ ಹತ್ತು ಲಕ್ಷ ಬರುತ್ತೆ ಅನ್ನು. 'ಕಾರು ಕೊಳ್ಳುವ ಬದಲು ಆ ದುಡ್ಡನ್ನೂ ನೀನು ಟಿಕೇಟಿನ ಮೇಲೆ ಹಾಕು' ಅಂದರೆ ಏನು ಮಾಡಲಿ ?''

'ಇಂದೇ ಖರೀದಿಸಿ', 'ಇಂದೇ ಇಂಥ ಸಿನಿಮಾ ನೋಡಿ', 'ಇವೊತ್ತೇ ಬನ್ನಿರಿ. ಬೇಕಾದ ಸೀರೆ, ಪಂಚೆ ವಗೈರೆ ಕೊಳ್ಳಿರಿ' – ಇಂಥ ನಮೂನೆಯ ಜಾಹೀರುಗಳು ಮಾಮೂಲು. 'ಮರೆತು ನಿರಾಶರಾಗಬೇಡಿ' ಎನ್ನುವ ಸಲಹೆ ಅವುಗಳ ಕೊನೆಯಲ್ಲಿ! ನಮ್ಮ ನೆನಪಿನ ಶಕ್ತಿಯ ಬಗ್ಗೆ, ನಮ್ಮ ಆಸೆ ಆಕಾಂಕ್ಷೆಗಳ ಬಗ್ಗೆ ಅವರಿಗೆ ಎಷ್ಟೊಂದು ಕಾಳಜಿ ನೋಡಿ! ಒಂದು ನಾಟಕ ಅಥವಾ ಚಲನಚಿತ್ರ ಇಲ್ಲವೇ ಸರ್ಕಸ್ಸು. ಅಲ್ಲಿ ಇಂದೇ ಕೊನೆಯ ಪ್ರದರ್ಶನ ಎನ್ನುವ ಬೋರ್ಡು ನೇತುಹಾಕಿರುತ್ತದೆ. ಬಹುತೇಕ ಮರುದಿನ 'ಮಹಾಜನತೆಯ ಕೋರಿಕೆಯ ಮೇಲೆ' ಅದು ಮುಂದುವರಿಯದಿದ್ದರೆ ಕೇಳಿ! ಮಹಾಜನರೆಂದರೆ ಯಾರು ? ಅವರೆಲ್ಲಿರುತ್ತಾರೆ ? ಎನ್ನುವುದೆಲ್ಲ ಯಕ್ಷಪ್ರಶ್ನೆಗಳೆ. ಅಂದಹಾಗೆ ಪತ್ರಿಕೆಯೊಂದರಲ್ಲಿ ಹುಟ್ಟಿದ ಹಬ್ಬಕ್ಕೆ ಅಭಿನಂದನೆಗಳು ಕಾಲಂನಲ್ಲಿ ಒಬ್ಬರ ಫೋಟೋ ಬರಬೇಕಿತ್ತು. ಪ್ರಮಾದವಶಾತ್ ಶ್ರದ್ಧಾಂಜಲಿ ಕಾಲಂನಲ್ಲಿ ಪ್ರಕಟವಾಗುವುದೆ ? ಮಾರನೇ ದಿನ ಸಂಪಾದಕರು ತಿದ್ದುಪಡಿ ಕೊಟ್ಟರು. ಅದರ ಒಕ್ಕಣೆ ಹೀಗಿತ್ತು : 'ನಿನ್ನೆ ಪ್ರಕಟವಾದಂತೆ ರಾಯರು ದಿವಂಗತರಲ್ಲ. ಇದಕ್ಕೆ ವಿಷಾದಿಸುತ್ತೇವೆ'.

ಬಿಂಡಿಗನವಿಲೆ ಭಗವಾನ್
ಗಣಿತ ಪ್ರಾಧ್ಯಾಪಕರು, ಶ್ರೀ ಕೊಂಗಾಡಿಯಪ್ಪ ಪಿ. ಯು. ಕಾಲೇಜ್
ದೊಡ್ಡಬಳ್ಳಾಪುರ - ೫೬೧ ೨೦೩

ಆದರೆ ಇದೇ ಸಂದರ್ಭದಲ್ಲಿ ಬರುವ ''...ಹೂಳುಕ್ಕಿಂತ ಸುಡೋದೇ ಹೆಚ್ಚು ಉತ್ತಮವಾದದ್ದು ಶುಚಿಯಾದದ್ದು...'' ಎನ್ನುವ ಅಭಿಪ್ರಾಯ ವಿವಾದಾಸ್ಪದವಾಗಬಹುದು. ಹೆಣವನ್ನು ಸುಡಲು ಟನ್‌ಗಟ್ಟಲೆ ಸೌದೆಯನ್ನೊದಗಿಸುವ ಸಲುವಾಗಿ ಕಾಡುಗಳ ನಾಶ ಮತ್ತು ಹೆಣ ಸುಡುವ ಮೂಲಕ ಉಂಟಾಗುವ ವಾಯುಮಾಲಿನ್ಯಗಳ ಬಗೆಗೆ ಪರಿಸರಪ್ರೇಮಿಗಳು ಪ್ರತಿಭಟಿಸಬಹುದಲ್ಲವೆ ? ಗಯಾ, ಪ್ರಯಾಗ, ಹರಿದ್ವಾರ ಕ್ಷೇತ್ರಗಳ ನದಿಗಳಲ್ಲಿ ತೇಲಿಬರುವ ಅರೆಬೆಂದ ಹೆಣಗಳನ್ನು ಕೆಲವರಾದರೂ ಕಂಡಿರಬಹುದಷ್ಟೆ? (ಆಸ್ಟ್ರೇಲಿಯಾ ದೇಶದಲ್ಲಿ ಇತ್ತೀಚೆಗೆ ಹೆಣ ಹೂಳುವುದನ್ನು ಸಾರ್ವತ್ರಿಕ ಗೊಳಿಸಲಾಗಿದೆಯಂತೆ. ಸಾವಯವ ಗೊಬ್ಬರದಿಂದ ಮಣ್ಣಿನ ಫಲವತ್ತತೆ ಹೆಚ್ಚುವುದೆಂಬ ಕಾರಣದಿಂದ.)

ಶೇಷಶಾಸ್ತ್ರಿಗಳು ಮತ್ತು ಅವರ ಧರ್ಮಪತ್ನಿ ಅಚ್ಚಮ್ಮನವರದು ಸನಾತನ ಆದರ್ಶ ದಾಂಪತ್ಯ. ತಮ್ಮ ಮಡಿವಂತಿಕೆಯನ್ನು ಬಿಟ್ಟುಕೊಡದೆ, ಆತಿಥ್ಯಧರ್ಮವನ್ನು ಮೀರದೆ ಸಂಭಾಳಿಸಿಕೊಂಡು ಹೋಗುತ್ತಾರೆ. ಅಚ್ಚಮ್ಮನವರು ಸ್ವರ್ಗಸ್ಥರಾದಾಗ ನಡೆದ ಅಪರಕ್ರಿಯಾ ವಿಧಿಗಳನ್ನು ಡಾ|| ಭೈರಪ್ಪನವರು ಕರಾರುವಾಕ್ಕಾಗಿ ಚಿತ್ರಿಸುತ್ತಾರೆ. ಮಾನ್ಯ ಭೈರಪ್ಪನವರ ಇತರ ಕೆಲವು ಕಾದಂಬರಿಗಳಲ್ಲೂ ಬರುವ, ಬ್ರಾಹ್ಮಣರ ಒಂದು ಪಂಗಡದ ಆಚಾರವಿಚಾರಗಳ ಸೂಕ್ಷ್ಮತೆಯ ಅರಿವು, ಭಾಷೆಯ ನುಡಿಗಟ್ಟು, 'ಕಾಕು' ಮೊದಲಾದವುಗಳನ್ನು ಸ್ಥಳೀಯ ಬ್ರಾಹ್ಮಣರು ಮೆಚ್ಚಿ ಕೊಂಡಾಡುತ್ತಾರೆ.

ಶೇಷಶಾಸ್ತ್ರಿಗಳ ಮಗ ನಾಣಿ ಉರುಫ್ ಪ್ರೊ|| ಎನ್. ಎಸ್. ಎನ್. ಶಾಸ್ತ್ರಿಯು ಗೋಮಾಂಸ ಭಕ್ಷಣೆ ಮಾಡಿದುದಕ್ಕೆ ದೊರೆತ ಪ್ರಚಾರದ ಫಲವಾಗಿ, ಅವನು ತಾಯಿಯ ಕರ್ಮಾಂತರ ಮಾಡಬೇಕಾದರೆ ಆ ಪಾತಕಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂದು ನಿರ್ಣಯ ವಾಗುತ್ತದೆ. ಇದೆಲ್ಲ ಸರಿಯೆ. ಆದರೆ 'ಪಾತಕ' ಮತ್ತು 'ಪ್ರಾಯಶ್ಚಿತ್ತ ಹಾಗೂ ಅದರ ವಿವರಗಳನ್ನು' ನಿರ್ಧರಿಸುವವರು ಯಾರು ? ಆಯಾ ಜಾತಿಮತಗಳ ಪುರೋಹಿತರೇ ಅಲ್ಲವೆ ? ಕಾದಂಬರಿಯು ಇಂಥ ಮೂಲಭೂತ ಪ್ರಶ್ನೆಗಳನ್ನೆತ್ತಿದರೂ ಅದಕ್ಕೆ ಸಮರ್ಪಕ ವಾದ ಉತ್ತರ 'ಆವರಣ'ದಲ್ಲಿ ದೊರೆಯುವುದಿಲ್ಲ. (ಇಂಥ ಪ್ರಶ್ನೆಗಳ ತಂಟೆಗೆ ಹೋಗದ 'ಲೌಕಿಕ' (secular) ಕಾದಂಬರಿಗಳ ವಿಚಾರ ಬೇರೆ.)

ಡಾ|| ಭೈರಪ್ಪನವರ ಆವರಣದೊಳಗೆ ರಜಿಯಾ ರಚಿಸುವ ಕಾದಂಬರಿಯಲ್ಲಿ ಔರಂಗಜೇಬನ ಆಳ್ವಿಕೆಯ ಕಾಲದಲ್ಲಿ ಮತಾಂಧರು ನಡೆಸಿದ ವಿಧ್ವಂಸಕ ಕೃತ್ಯಗಳು ಮತ್ತು ಇಸ್ಲಾಂ ಧರ್ಮ ಗುರುಗಳ ಕ್ರೌರ್ಯಗಳನ್ನು ಯಾವುದೇ ಛಾಯೆಯ ಹಿಂದೂ ಮತಸ್ಥನೂ ಉದ್ವಿಗ್ನ ಗೊಳ್ಳುವಂತೆ ವರ್ಣಿಸಲಾಗಿದೆ. ದೇವಘಡದ ರಾಜಕುಮಾರನು ಯುದ್ಧದಲ್ಲಿ ಸೆರೆಸಿಕ್ಕಿ, ಗುಲಾಮನಾಗಿ ಬೀಜ ಒಡೆಸಿಕೊಂಡು ಹಿಜಡಾ ಆಗಿ, ಅನೇಕ ಮುಸಲ್ಮಾನರ ಸಲಿಂಗರತಿ, ವಿಕೃತಕಾಮಗಳಿಗೆ ಬಲಿಪಶು ವಾಗುವುದನ್ನು, ಮೊಘಲ್ ಬಾದಷಹರ ಜನಾನಾಗಳ ನಡೆನುಡಿಗಳನ್ನು ರೇಜಿಗೆ ಹಿಡಿಸುವಷ್ಟು ವಿವರವಾಗಿ ಚಿತ್ರಿಸಲಾಗಿದೆ. ಮತಧಾರ್ಮಿಕ ಸಂಘರ್ಷದಂಥ ಗಂಭೀರ ವಸ್ತುವಿನ್ಯಾಸದ ಕಾದಂಬರಿಯಲ್ಲಿ ಅದರ ಬಹುಸಂಖ್ಯಾತ ಓದುಗರ ಅಭಿರುಚಿಗೆ ಉಚಿತವೆನಿಸದ ಮಾತುಗಳೂ (ಅವು ಯಾರ ಬಾಯಿಂದಲೇ ಬಂದಿರಲಿ) ಬರುತ್ತವೆ. ಉದಾಹರಣೆಗೆ, ''ವೆಜಿಟೇರಿಯನ್ ಹೆಂಗಸಿನ ತಾವ ಏನಿರುತ್ತೆ...''; ''ನನ್ನ ಬೀಜಗಳು ಇಕ್ಕಳದ ಸಂದಿಗೆ ಸಿಕ್ಕಿಕೊಂಡದ್ದೂ ನನ್ನ ಅರಿವಿಗೆ ಬಂತು. ಒಂದೇ ಕ್ಷಣ. ಫಟ್ ಫಟ್ ಎಂಬ ಸದ್ದು''; ''ಖತ್ನ ಮಾಡಿಸಿಕೊಂಡರೆ ನಾಲ್ಕಲ್ಲ ನಲವತ್ತು ಹೆಂಗಸರ ನ್ನಾದರೂ ಸುಸ್ತುಮಾಡಿಸುವ ಶಕ್ತಿ ಬರುತ್ತೆ'' – ಇತ್ಯಾದಿ.

ಔರಂಗಜೇಬನ ಧರ್ಮಗುರುಗಳಾದ ಹಾಜಿ ಹಮ್‌ದುಲ್ಲಾಹ್ ಅವರ ಪರಮತದ್ವೇಷ, ವೈಯಕ್ತಿಕ ಕ್ರೌರ್ಯಗಳನ್ನು ಅತಿರೇಕಕ್ಕೆ ಒಯ್ದು ಮುಟ್ಟಿಸಲಾಗಿದೆ. ''ಅತಿರೇಕದ (ಈ) ವಿಚಿತ್ರ ಪಾತ್ರಸೃಷ್ಟಿ ಭೈರಪ್ಪನವರ ಕಾದಂಬರಿಗಳಲ್ಲಿ ಮತ್ತೆ ಮತ್ತೆ ಕಾಣುವ ಒಂದು ವಿಶಿಷ್ಟ ಲಕ್ಷಣ'' (ದೇಶ ಕುಲಕರ್ಣಿ : ಎಸ್. ಎಲ್. ಭೈರಪ್ಪ – ನವಕರ್ನಾಟಕ ಸಾಹಿತ್ಯ ಸಂಪದ - ೨೦೦೬. ಪು. ೬೨) ಎಂಬ ವಿಮರ್ಶಕರ ಅಭಿಪ್ರಾಯವನ್ನು ಗಮನಿಸಬಹುದು.

ಬುದ್ಧಿಜೀವಿಗಳು, ವಿಚಾರವಾದಿಗಳು, ಮಾರ್ಕ್ಸ್ ವಾದಿಗಳೆಂದರೆ ಕಾದಂಬರಿಕಾರರಿಗೆ 'ಅಲರ್ಜಿ' ಮಾತ್ರವಲ್ಲ; ಕಡುದ್ವೇಷ. ಈ ದೇಶದ ಅಸಂಖ್ಯಾತ ಜನರು ಉದಾರ ಮನೋಭಾವದವರೆಂದು ಒಪ್ಪುವ 'ಜಾತ್ಯತೀತವಾದಿ'ಗಳನ್ನು (secularists) ಭೈರಪ್ಪನವರು 'ಎಳಸು ಹಿಂದೂಗಳು' ಎಂದು ಹಂಗಿಸುತ್ತಾರೆ. ತಮ್ಮ ಅಭಿಪ್ರಾಯಗಳನ್ನು ಒಪ್ಪದ ಪ್ರಗತಿಪರ ವಿಚಾರಧಾರೆ ಯನ್ನು ''ಜೆ.ಎನ್.ಯು. ಕಾಮ್ರೆಡ್ ಇತಿಹಾಸಕಾರರು ಸೃಷ್ಟಿಸಿದ ವಿತಂಡವಾದ'' ಎಂದು ಹೀಗಳೆಯುತ್ತಾರೆ. ಒಬ್ಬ ವ್ಯಕ್ತಿಯ ಮುಖದ ಮೇಲಿನ ಕುರುಚಲು ಗಡ್ಡವು ಕಣ್ಣಿಗೆ ಬಿದ್ದೊಡನೆ ''ಇದು ಮಾರ್ಕ್ಸಿಸ್ಟ್ ಗಡ್ಡವೋ, ಮುಸ್ಲಿಂ ಗಡ್ಡವೋ ?'' ಎಂಬುದನ್ನು ನಿರ್ಣಯಿಸುವ ಗಾಢಚಿಂತನೆಯಲ್ಲಿ ಮಗ್ನರಾಗುತ್ತಾರೆ ! ಮಾರ್ಕ್ಸ್‌ವಾದಿ ಗಳ ವಿಚಾರ ಹಾಗಿರಲಿ; ಮಾರ್ಕ್ಸೀಯ ಸಿದ್ಧಾಂತವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕೆಂದು ಡಾ|| ಭೈರಪ್ಪ ನವರ ಮೇಲೆ ಯಾರೂ ಒತ್ತಡ ಹೇರಿದಂತೆ ತೋರುವುದಿಲ್ಲ. (ಅವರ ಮೇಲಿರುವ ಒತ್ತಡಗಳು ಬೇರೆಯೆ ಬಗೆಯಾಗಿರಬಹುದು.) ಆದರೆ ವಿಚಾರವಾದಿಗಳೆಂದೊಡನೆ ಭೈರಪ್ಪನವರು ಹೀಗೆ ಕಿಡಿಕಿಡಿಯಾಗುವುದೇಕೆ ? ವಿಷ ಕಕ್ಕುವುದೇಕೆ ?

ಹಾಗೆ ನೋಡಿದರೆ ಬಹುಸಂಖ್ಯಾತ ಹಿಂದೂಗಳು 'ಪಂಚಮವೇದ'ವೆಂದೇ ಪರಿಗಣಿಸುವ ಮಹಾಭಾರತ ಪುರಾಣಕತೆಯನ್ನು, ಮಾನವ ಸಂಸ್ಕೃತಿಶಾಸ್ತ್ರದ (Cultural Anthropology) ದೃಷ್ಟಿಯಿಂದ ವೈಚಾರಿಕಗೊಳಿಸಿ (de-mythification) 'ಪರ್ವ' ವಾಗಿಸಿದ ಭೈರಪ್ಪನವರದು ಕೂಡ ವಿಚಾರವಾದವೆಂದೇ ವಿಮರ್ಶಕರು ಅಭಿಪ್ರಾಯಪಟ್ಟರು. ಈಗ ನೋಡಿದರೆ 'ಆವರಣ'ದ ಲೇಖಕರದು 'ಭಾವೋದ್ವಿಗ್ನವಾದ' ವೆಂದೋ, 'ಮೂಲಭೂತವಾದ'ವೆಂದೋ ತಿಳಿಯ ಬೇಕಾಗಿ ಬಂದಿದೆ.

ವಿಚಾರವಾದಿಗಳು ಕುಡುಕರು, ಮಾಂಸಾಹಾರಿಗಳು ಮಾತ್ರವಲ್ಲ, ಅಭಕ್ಷಭಕ್ಷಕರು, ವಿಷಯಲಂಪಟರು ಎಂಬ ಕಲ್ಪನೆಯಲ್ಲದೆ ಬೇರೆಯ ಚಿತ್ರ ಇವರಿಗೆ ಹೊಳೆ ಯುವುದೇ ಇಲ್ಲ. ಪ್ರಾಯಶಃ ಕಟ್ಟಾಬ್ರಹ್ಮಚಾರಿಯೂ, ಶುದ್ಧ ಸಸ್ಯಾಹಾರಿಯೂ, ಮದ್ಯಪಾನ, ಧೂಮ್ರಪಾನ ವರ್ಜಿತನೂ ಆದ ವಿಚಾರವಾದಿಯೊಬ್ಬನನ್ನೂ ಡಾ|| ಭೈರಪ್ಪನವರು ಇಡೀ ಜೀವಮಾನದಲ್ಲಿ ಕಣ್ಣೆತ್ತಿ ನೋಡಿರಲಿಕ್ಕಿಲ್ಲ ! ಇದೊಂದು ದುರಂತವೇ ಸರಿ.

ಕಾದಂಬರಿಕಾರರು ಗ್ರಹಿಸಿದ ಬುದ್ಧಿಜೀವಿಗಳೆಲ್ಲರ ವ್ಯಕ್ತಿತ್ವದ ಪ್ರತಿನಿಧಿಯಂತೆ ಚಿತ್ರಿತರಾಗಿರುವ ಪ್ರೊ|| ಎನ್.ಎಸ್. ಎನ್. ಶಾಸ್ತ್ರಿಯ ಬಗೆಗಿನ ವಿವರಗಳನ್ನು ಓದುವಾಗ, ಕನ್ನಡನಾಡಿನ ಆಗುಹೋಗುಗಳನ್ನು ಬಲ್ಲವರಿಗೆಲ್ಲ ಸಮಕಾಲೀನ ವಿದ್ವಾಂಸರೊಬ್ಬರ ಹೋಲಿಕೆ ಕಂಡುಬಂದರೆ ಆಶ್ಚರ್ಯವಲ್ಲ; ಬಹುಶಃ ಆಕಸ್ಮಿಕವೂ ಅಲ್ಲ. ಕೃತಿಕಾರರು ನೇರವಾಗಿ ಮಾಡಲಾರದ ಚಾರಿತ್ರ್ಯವಧೆಯನ್ನು (ವ್ಯಕ್ತಿವಧೆ – ಇದು ಲೇಖಕರದೇ ಪ್ರಯೋಗ, ಬೇರೊಂದು ಸಂದರ್ಭದಲ್ಲಿ) ಕಾದಂಬರಿಯ ಪಾತ್ರದ ಮೂಲಕ ಮಾಡಿ ಅಸೂಯೆ ತೀರಿಸಿಕೊಳ್ಳುತ್ತಿರಬಹುದು. ಇರಲಿ. ಇದು ಇಬ್ಬರು ವ್ಯಕ್ತಿಗಳ ನಡುವಿನ ತಿಕ್ಕಾಟವಾದುದರಿಂದ ಸಾರ್ವಜನಿಕರು ತಲೆಕೆಡಿಸಿಕೊಳ್ಳಬೇಕಾಗಿಲ್ಲ.

ಹಿಂದೂಧರ್ಮದಲ್ಲಿನ ಜಾತಿವಿಭಜನೆ, ಮತ್ತು ಜಾತ್ಯಾಧಾರಿತ ರಾಜಕೀಯದಿಂದ ಶ್ರೀಮಾನ್ ಭೈರಪ್ಪ ನವರಿಗೆ ಬಾಲ್ಯ, ಯೌವನಗಳಲ್ಲಿ, ಶಿಕ್ಷಣದಲ್ಲಿ ಭಾರಿ ಅನ್ಯಾಯವಾಗಿರುವುದು ಅವರ ಆತ್ಮಚರಿತ್ರೆ (ಭಿತ್ತಿ) ಯಿಂದ ತಿಳಿಯುತ್ತದೆ. ಅಂದಿನ ಕಹಿನೆನಪುಗಳು ಅವರಲ್ಲಿ ಉಳಿದೇಬಿಟ್ಟಿವೆ. ಈ ಪ್ರೇರಣೆಯಲ್ಲಿಯೇ ಅವರ ಕೆಲವು ಕಾದಂಬರಿಗಳು ಸೃಷ್ಟಿಯಾಗಿದ್ದರೆ ಇನ್ನೂ ಕೆಲವು ಕಡೆಗಳಲ್ಲಿ ಪ್ರಾಸಂಗಿಕವಾಗಿಯಾದರೂ ಜಾತಿ ಸಮಸ್ಯೆಯ ಕಹಿ ಅನುಭವಗಳು ತಲೆಹಾಕುತ್ತವೆ. ಪ್ರಸ್ತುತ ಕಾದಂಬರಿಯ ಮುಖ್ಯ ಉದ್ದೇಶ ಔರಂಗಜೇಬ ನಂತಹ ಮತಾಂಧ ಮುಸಲ್ಮಾನನ ಆಳ್ವಿಕೆಯಲ್ಲಿ ಸಮಸ್ತ ಹಿಂದೂಧರ್ಮೀಯರಿಗೆ ಆದ ಅನ್ಯಾಯ, ನೋವು ಗಳನ್ನು ಶ್ರುತಪಡಿಸುವುದಾಗಿದೆ. ಅದರಲ್ಲಿಯೇ ಸಾಂದರ್ಭಿಕವೆನ್ನುವಂತೆ ಬ್ರಾಹ್ಮಣ ಜಾತಿಗೆ ಹಿಂದೆ ಆದ, ಈಗಲೂ ಆಗುತ್ತಿರುವ ಅನ್ಯಾಯವನ್ನು ಎತ್ತಿಹೇಳಲು ವಿಶೇಷ ಅವಕಾಶ ಕಲ್ಪಿಸಿಕೊಳ್ಳುತ್ತಾರೆ. ಅಂತಹ ಅವಕಾಶ ಒದಗುವುದು, ಕಾಶಿಕ್ಷೇತ್ರಕ್ಕೆ ಬಂದ ರಜಿಯಾ, ಬಿಸ್ವನಾಥ್ ಸರ್ಮಾನ ಸೈಕಲ್‌ರಿಕ್ಷಾದಲ್ಲಿ ಕುಳಿತು ಸುತ್ತಾಡುವಾಗ ನಡೆಯುವ ಸಂಭಾಷಣೆಯ ಮೂಲಕ. ''ಬ್ರಾಹ್ಮಣರಾಗಿಯೂ ರಿಕ್ಷಾ ತುಳೀತಿದೀಯಲ್ಲ?'' ಎಂಬ ರಜಿಯಾಳ ಪ್ರಶ್ನೆ ಬಿಸ್ವನಾಥ ಸರ್ಮಾನಿಗೆ ಬ್ರಾಹ್ಮಣರ ಸ್ಥಿತಿಗತಿಗಳನ್ನು ವಿವರಿಸಲು ಪ್ರೇರಣೆ ಯಾಯಿತು. ''ಬಡತನವನ್ನು ಅಪ್ಪಿ ಬದುಕಬೇಕು ಅನ್ನೋದೆ ಬ್ರಾಹ್ಮಣ ಜಾತಿಯ ಧರ್ಮ ಅಲ್ಲವೆ? ಮೊದಲಿನಿಂದ ಕಾಡಿನಲ್ಲಿ ಪರ್ಣಕುಟಿ ಕಟ್ಟಿಕೊಂಡು ವಿದ್ಯೆ ಕಲಿತು ವಿದ್ಯಾದಾನ ಮಾಡಿಕೊಂಡಿದ್ದ ಜಾತಿ ಯಲ್ಲವೆ ಇದು ? ಈ ಜಾತಿಯನ್ನು ನಾಶಮಾಡಿದರೆ ಮಾತ್ರ ಹಿಂದೂಗಳನ್ನು ಸಂಪೂರ್ಣವಾಗಿ ಮುಸಲ್ಮಾನರಾಗಿ ಪರಿವರ್ತಿಸಬಹುದು ಅಂತ ನವಾಬರು ಸುಲ್ತಾನರು ಸುಬೇದಾರರು ಬಾದಶಾಹರು ನಮ್ಮನ್ನು ಸೆರೆಹಿಡಿಸಿದರು. ಇಕ್ಕಳದಲ್ಲಿ ಬಾಯಿ ಅಗಲಿಸಿ ಅದರೊಳಕ್ಕೆ ಕ್ಯಾಕರಿಸಿ ಉಗಿದು ಜಾತಿ ಕೆಡಿಸಿದರು.

ಕತ್ತಿಯಿಂದ ಕುತ್ತಿಗೆ ಕತ್ತರಿಸಿ ಕೊಂದರು. ನಮ್ಮ ಪೂರ್ವಿಕರು ಹಳ್ಳಿಗಳಿಗೆ ಓಡಿಹೋಗಿ ಪುರಾಣ ಪುಣ್ಯಕಥೆ ಪ್ರವಚನಮಾಡಿ ನಮ್ಮ ಧರ್ಮ ಉಳಿಸಿದೆವು. ಅಂಗ್ರೇಜಿಗಳು ಬಂದಮೇಲೆ ಈ ಜಾತಿಯನ್ನು ಮುರಿದರೆ ಹಿಂದೂಸ್ತಾನೀಯರನ್ನು ಕಿರಿಸ್ತಾನ ಮಾಡಭೌದು ಅಂತ ಹಿಕಮತ್ತು ಮಾಡಿದರು. ಅಂಗ್ರೇಜಿಗಳು ಹೋದಮೇಲೆ ಹಿಂದೂಸ್ತಾನೀ ರಾಜಕಾರಣಿಗಳೇ ನಮ್ಮ ಮೇಲೆ ದ್ವೇಷದ ಉರಿ ಹಚ್ಚುತ್ತಾ ಓಟು ಕಮಾಯಿಸ್ತಾರೆ, ಎಂದು ಹೇಳಿ ಬಾಯಿಯ ತಂಬುಲವು ತುಳುಕುವಂತೆ ನಕ್ಕ.'' – ಈ ಮಾತುಗಳ ಹಿಂದಿರುವ ವೈಯಕ್ತಿಕ ನೋವನ್ನಾಗಲಿ ಅಥವಾ ಯಾವುದೇ ಒಂದು ಜಾತಿಯ ಜನ ಅನುಭವಿಸುವ ಸಂಕಟವನ್ನು ಬಿಡಿಯಾಗಿ ಚರ್ಚಿಸುವುದಾಗಲಿ ನಮ್ಮ ಉದ್ದೇಶವಲ್ಲ. ಮುಂದೆ ಒಂದು ಕಡೆ ''ಇತಿಹಾಸದುದ್ದಕ್ಕೂ ತಮ್ಮ ಶ್ರದ್ಧೆಗಾಗಿ ಸಾವಿರ ಸಾವಿರ ಸಂಖ್ಯೆಯಲ್ಲಿ ಬಲಿದಾನ ಮಾಡಿಕೊಂಡ ಬ್ರಾಹ್ಮಣರ ಪರಂಪರೆಯಿದ್ದೂ ಆಗಿನ ಬನಾರಸಿ ಬ್ರಾಹ್ಮಣರು ಯಾಕೆ ಹೇಡಿಗಳಾದರು ?'' – ಎಂಬ ಪ್ರಶ್ನೆ ಬರುತ್ತದೆ. ಈ ಪ್ರಶ್ನೆಗೆ ಉತ್ತರ ಕೊಡುವುದಾಗಲಿ, ಚಾರಿತ್ರಿಕ ಆಧಾರಗಳನ್ನು ಹುಡುಕುವುದಾಗಲಿ ಕಷ್ಟಸಾಧ್ಯ.

ಹಿಂದೂಧರ್ಮದ ಪುನರುದ್ಧಾರಕ್ಕಾಗಿ ನಡೆದ ಯಾವ ಕ್ಷುಲ್ಲಕ ಸಾಹಸವೂ ಕೂಡ ಕಾದಂಬರಿಯಲ್ಲಿ ಮಹತ್ವದ ಚಾರಿತ್ರಿಕ ಮೌಲ್ಯ ಪಡೆಯುತ್ತದೆ. ಮರಾಠಾ ಅಧಿಪತಿಗಳು, ಪೇಶ್ವೆಗಳು ನಡೆಸಿದ ಪ್ರಯತ್ನಗಳನ್ನು, ಛತ್ರಪತಿ ಶಿವಾಜಿಯ ಯುದ್ಧತಂತ್ರಗಳನ್ನು ಕಾದಂಬರಿಕಾರರು ಬಹುವಾಗಿ ಮೆಚ್ಚಿ ಪ್ರಶಂಸಿಸುತ್ತಾರೆ. ಈ ಸಂದರ್ಭದಲ್ಲಿ ಶ್ರೀಮಾನ್ ಎಸ್. ಎಲ್. ಭೈರಪ್ಪನವರ ಬದುಕು ಬರಹಗಳ ಕುರಿತು ಪುಸ್ತಕ (ನವಕರ್ನಾಟಕ ಸಾಹಿತ್ಯ ಸಂಪದ) ಬರೆದ ವಿಮರ್ಶಕರು ಹೇಳುವ ಸ್ವಾರಸ್ಯಕರವಾದ ಒಂದು ಮಾತನ್ನು ನೆನೆಯಬೇಕು. ಭೈರಪ್ಪನವರ ಕಾದಂಬರಿಗಳನ್ನು ಅನುವಾದದ ಮೂಲಕ ತಮ್ಮ ಭಾಷೆಯಲ್ಲೇ ಓದಿ ಮೆಚ್ಚಿಕೊಂಡವರು ದೇಶದ ಎಲ್ಲ ಕಡೆ ಇದ್ದಾರಷ್ಟೆ. ''ಮಹಾರಾಷ್ಟ್ರದಲ್ಲಿಯಂತು ಭೈರಪ್ಪನವರನ್ನು ಕನ್ನಡದಲ್ಲಿ ಬರೆಯುವ ಅತ್ಯಂತ ಜನಪ್ರಿಯ ಮರಾಠೀ ಲೇಖಕರು ಎಂದು ತುಸು ವಿನೋದದಲ್ಲಿ ಪರಿಗಣಿಸಿ ಅಲ್ಲಿಯ ರಸಿಕರು ಪ್ರಶಂಸಿಸಿದ್ದಾರೆ'' (ದೇಶ ಕುಲಕರ್ಣಿ, ಪು. ೧೦೩). ವಿನೋದ ಏನೇ ಇರಲಿ; ಕನ್ನಡಿಗರಿಗೂ ಮರಾಠಿಗರಿಗೂ ಹಿಂದೆ ನಡೆದ, ಈಗಲೂ ನಡೆಯುತ್ತಿರುವ ಸಂಘರ್ಷಗಳ ಹಿನ್ನೆಲೆಯಲ್ಲಿ ಈ ಪ್ರಶಂಸೆಯು ಭೈರಪ್ಪನವರ ಕಟ್ಟಾ ಅಭಿಮಾನಿಗಳಿಗೆ ಕೂಡ ಸಾಕಷ್ಟು ಮುಜುಗರ ಉಂಟುಮಾಡುವುದು ಸಹಜ.

ಮಾನ್ಯ ಭೈರಪ್ಪನವರಂತಹ ಶ್ರದ್ಧಾವಂತ ಲೇಖಕರಿಗೆ ಮಾತ್ರ ಸಾಧ್ಯವಾಗುವ ಅಪಾರ ಪರಿಶ್ರಮದಿಂದ ಚರಿತ್ರೆಯ ಅಧ್ಯಯನವನ್ನು ಮುಂದುವರಿಸಿ ಮೊಘಲರ ಆಳ್ವಿಕೆಯಲ್ಲಿ ನಡೆದಿರಬಹುದಾದ ಹಿಂದೂ ಧರ್ಮದ್ರೋಹವನ್ನು ಅನಾವರಣಗೊಳಿಸಿದ ಸಾಹಸವನ್ನು ಮೆಚ್ಚಲೇಬೇಕು. ಆದರೆ ಇತಿಹಾಸದ ಈ ಸತ್ಯ ಶೋಧನೆಯು ಕೇವಲ ಜ್ಞಾನಾಸಕ್ತಿಯಿಂದ, ನಿರ್ವಿಕಾರಚಿತ್ತದಿಂದ ನಡೆದಿದೆಯೆಂದು ಯಾರಾದರೂ ಭಾವಿಸಿದರೆ ಅದು ಹುಂಬತನವಾದೀತು. ಇತಿಹಾಸದ ಗೋರಿಗಳನ್ನು ಅಗೆದು ಅಸ್ಥಿಪಂಜರಗಳನ್ನು ಹೊರಗೆಳೆಯುವುದರ ಹಿಂದೆ ಒಂದು ನಿರ್ದಿಷ್ಟ ಉದ್ದೇಶವಿದೆ ಎಂಬುದನ್ನು ಅಲಕ್ಷಿಸಬಾರದು. ಆ ಉದ್ದೇಶವು ಸ್ಪಷ್ಟವಾಗುವುದು ಲೇಖಕರು ಇತಿಹಾಸದ ಉಲ್ಲೇಖಗಳಿಗೆ ಕಾದಂಬರಿಯ ರೂಪವನ್ನು ಕೊಟ್ಟು ಮೊಘಲರ ಕಾಲದ ಇತಿಹಾಸದ ಪುಟಗಳಿಗೂ ಸಮಕಾಲೀನ ಘಟನೆಗಳಿಗೂ ಸಂಬಂಧ ಕಲ್ಪಿಸುವುದರಲ್ಲಿ; ರಾಮ ಜನ್ಮಭೂಮಿ - ಬಾಬ್ರಿ ಮಸೀದಿ ವಿವಾದ; ಟಿಪ್ಪುವಿನ ಚರಿತ್ರೆ, ಮರಾಠರಿಂದ ಹಿಂದೂಧರ್ಮದ ಪುನರುತ್ಥಾನ, ಮೊದಲಾದವನ್ನು ಗಮನಿಸಬಹುದು.

೧೯೯೨ನೇ ಡಿಸೆಂಬರ್ ೬ರಂದು ಹಿಂದೂ ಉಗ್ರಗಾಮಿ ಚಳುವಳಿಗಾರರು ಅಯೋಧ್ಯೆಯ ಬಾಬ್ರಿ ಮಸೀದಿಯನ್ನು ಧ್ವಂಸ ಮಾಡುವ ಮೂಲಕ ಮೊಘಲರ ಆಡಳಿತ ಕಾಲದಲ್ಲಿ ಹಿಂದೂಗಳ ಮೇಲೆ ನಡೆದ ದೌರ್ಜನ್ಯದ ಕಹಿ ನೆನಪುಗಳನ್ನು ಇತಿಹಾಸದ ಪುಟಗಳಿಂದ ಅಳಿಸಿಹಾಕಲಾಯಿತೆಂದು ಭಾವಿಸಿದರು. ಮತ್ತು ೧೯೯೩ ಜನವರಿ ೮ರಂದು ಸಂಜೆ, ಬಾಬ್ರಿ ಮಸೀದಿಯಿದ್ದ ಸ್ಥಳದಲ್ಲಿ 'ರಾಮಲಲ್ಲಾ' ವಿಗ್ರಹವನ್ನು ಇರಿಸಿ ತಾತ್ಕಾಲಿಕ ಕಟ್ಟಡವೊಂದರ ಕೆಲಸವನ್ನು ಆರಂಭಿಸುವ ಮೂಲಕ ಈಗಿನ 'ಮತಧರ್ಮ ನಿರಪೇಕ್ಷ ಸಂವಿಧಾನಬದ್ಧ ಭಾರತ'ಕ್ಕೆ ಪ್ರತಿಯಾಗಿ ಅಪ್ಪಟ ಹಿಂದೂರಾಷ್ಟ್ರ ನಿರ್ಮಾಣದ ಮೊದಲ ಹೆಜ್ಜೆ ಇಟ್ಟಿರುವುದಾಗಿ ಭಾಜಪ ಮತ್ತು ಅದರ ಮಿತ್ರಪಕ್ಷಗಳು ಘೋಷಿಸಿಕೊಂಡವು.

ಆದರೆ ಕೇಂದ್ರ ಸರ್ಕಾರದಲ್ಲಿ ಭದ್ರವಾದ ಅಧಿಕಾರವನ್ನು ಹಿಡಿಯದೆ ರಾಮಮಂದಿರ ಕಟ್ಟುವುದು ಮತ್ತು ಹಿಂದೂರಾಷ್ಟ್ರ ನಿರ್ಮಾಣ ಅಸಾಧ್ಯವೆಂದು ಅರಿತಿದ್ದ ಹಿಂದುತ್ವವಾದಿಗಳು 'ಇಟ್ಟಿಗೆ ಯಾತ್ರೆ' (ವಾಸ್ತವವಾಗಿ ರಾಮಮಂದಿರ ನಿರ್ಮಾಣ ಚಳುವಳಿಯನ್ನು ಜೀವಂತವಾಗಿಡುವ ಹುನ್ನಾರದಿಂದ ಭಾಜಪ ನಡೆಸಿದ 'ಇಟ್ಟಿಗೆ ಯಾತ್ರೆ'ಯನ್ನು

## ಒಂದು ಹಿಡಿ ಬೆಳಕಿಗಾಗಿ

ಬಾಗಿಲ ಸಂದಿನಿಂದ
ಒಂದು ಬೆಳಕಿನ ಕಿರಣವೂ
ನುಸುಳಲಾರದ ಕಗ್ಗತ್ತಲೆಯಲ್ಲೇ
ನನ್ನ ಕನಸುಗಳನ್ನೆಲ್ಲಾ ಹರಡಿಕೊಂಡು
ತಡಕಾಡುತ್ತಿದ್ದೇನೆ ಒಂದು ಹಿಡಿ ಬೆಳಕಿಗಾಗಿ

ತಾತ ಮುತ್ತಾತರ
ಹರಕು–ಮುರುಕು ಬಟ್ಟೆಗಳ ಕೌದಿ
ಅಮ್ಮ ಅಮ್ಮಮ್ಮ ಮುತ್ತಮ್ಮರ
ಹರಳೆಣ್ಣೆ ಮೆತ್ತಿದ ಹೆರಳಿನ
ಜಿಗುಟು ಚಿತ್ತಾರದ ಗಂಟು

ಹರಿದ ಚಾಪೆಯ ಕೆಳಗೆ
ಸಗಣಿ ತೀಡಿದ ನೆಲ
ಹಾಕಿದ ಕರುಗಳೆಲ್ಲ ಕಣ್ಣೆದುರೆ ಸತ್ತಾಗ
ಕೆಂಪಿಯ ಕಣ್ಣಂಚಿನಲ್ಲಿ ನಿಂತ
ಕಣ್ಣೀರ ಕರೆ.

ಬೆದೆಯೆದ್ದ ಎಮ್ಮೆ
ಕೂಗಿ–ಕೂಗಿ ಕುಣಿದರೂ
ಒಂದೇ ಒಂದು ಕೋಣ ಕೊಬ್ಬಿಲ್ಲ
ಅಕ್ಕ–ಪಕ್ಕದ ಕೊಟ್ಟಿಗೆಯ
ತಟ್ಟಿಯಂಚಿನಲ್ಲಿ ಹೊರಡುವ ಕರೆಗೆ
ಕಣ್ಣೆ ಬಿಚ್ಚಲು ಏಕೋ ಮನಸಾಗುತಿಲ್ಲ.

ಎಣ್ಣೆಯಿಲ್ಲದ ಚಿಮಣಿ
ತೂತು ತುಂಬಿದ ಛಾವಣಿ
ಹರಕು–ಮುರುಕು ಸೋಗೆಯ
ಮಧ್ಯದಿಂದ ಬರಬಾರದೆ
ಒಂದು ಬೆಳಕಿನ ಕಿಡಿ.

ಹಳೆಯ ಕಮಟುಗಳೆಲ್ಲ ಸುಟ್ಟು
ಛಾವಣಿ ಹರಿದು, ಗೋಡೆ ಮುರಿದು
ಬೆಳಕು ಧಿಗ್ಗನೆ ನುಗ್ಗಿ,
ಬಯಲಾಗಬಾರದೆ ಬದುಕ ಬಟ್ಟೆ!



ಅರ್ಪಿತಾ ಮೇಗರವಳ್ಳಿ
೮೮/೪ಎ, ೩ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಬನಶಂಕರಿ ೩ನೇ ಘಟ್ಟ, ಭುವನೇಶ್ವರಿನಗರ, ಬೆಂಗಳೂರು - ೫೬೦.೦೮೫

'ಆವರಣ'ದಲ್ಲಿ 'ಇಟ್ಟಿಗೆ ನಾಟಕ'ವಾಗಿಸಿ ವಿಚಾರವಾದಿಗಳ ತಲೆಗೆ ಕಟ್ಟಲಾಗಿದೆ)ಯನ್ನು ನಡೆಸಿ, ರಾಮಮಂದಿರ ನಿರ್ಮಾಣವು ಶತಸ್ಸಿದ್ಧವೆಂದು ಎಷ್ಟೇ ಪ್ರಚಾರ ಮಾಡಿದರೂ, ಈ ದೇಶದಲ್ಲಿ ಮತಧಾರ್ಮಿಕ ಬಹುಸಂಖ್ಯಾತರು ಹಿಂದೂಗಳೇ ಆಗಿದ್ದರೂ ಎಲ್ಲರೂ ಭಾಜಪದ ಘನವಾದ ಉದ್ದೇಶಕ್ಕೆ ಬೆಂಬಲ ನೀಡಲಿಲ್ಲ. ಈ ನಡುವೆ ಕೆಲವು ಕಾಲ ಸಮಾನ ಮನಸ್ಕ ರಾಜಕೀಯ ಪಕ್ಷಗಳ ಸಹಾಯದಿಂದ ಕೇಂದ್ರ ಸರ್ಕಾರದ ಲಗಾಮು ಹಿಡಿದಿದ್ದಾಗ ಭಾಜಪ ತನ್ನ 'ಸ್ವಂತ ಶಕ್ತಿವರ್ಧನೆ'ಗೆ ಅಡ್ಡಿಯಾಗಿರುವವರು ಯಾರೆಂದು ಹುಡುಕ ತೊಡಗಿತು. ಆಗ ಹಿಂದುತ್ವ ಧುರೀಣರ ವಕ್ರದೃಷ್ಟಿ ಬಿದ್ದುದು ಈ ದೇಶದ ಬುದ್ಧಿಜೀವಿಗಳು, ವಿಚಾರವಾದಿಗಳು, ಮಾರ್ಕ್ಸಿಸ್ಟರು ಮತ್ತು ಉದಾರವಾದಿ ಚರಿತ್ರಕಾರರು ಹಾಗೂ ಚರಿತ್ರೆಯ ಶಿಕ್ಷಣದ ಮೇಲೆ. (ಎಸ್. ಎಲ್. ಭೈರಪ್ಪನವರು 'ಚರಿತ್ರೆಯನ್ನು ನೋಡುವ ವರ್ತಮಾನದ ಕ್ರಮದಲ್ಲೇ ದೋಷವಿದೆ' ಎಂಬ ತತ್ವವನ್ನು ಆಧಾರವಾಗಿಟ್ಟುಕೊಂಡು ಚಾರಿತ್ರಿಕ ಕಾದಂಬರಿಯನ್ನು ರಚಿಸಿದ ಮೂಲ ಕಾರಣವನ್ನು ನಾವು ಇಲ್ಲಿ ಗುರುತಿಸಬೇಕಾಗಿದೆ.) ಭಾಜಪ ನೇತೃತ್ವದ ಕೇಂದ್ರ ಸರ್ಕಾರದಲ್ಲಿ ಮಾನವ ಸಂಪನ್ಮೂಲ ಸಚಿವರಾಗಿದ್ದ ಡಾ|| ಮುರಳಿ ಮನೋಹರ ಜೋಷಿಯವರು ಒಂದು ಸಭೆಯಲ್ಲಿ ಪ್ರಖ್ಯಾತ ಚರಿತ್ರಕಾರರಾದ ಆರ್. ಎಸ್. ಶರ್ಮಾ, ಸುಮಿತ್ ಸರ್ಕಾರ್, ಇರ್ಫಾನ್ ಹಬೀಬ್ ಮತ್ತು ರೋಮಿಲಾ ಥಾಪರ್ ಮೊದಲಾದವರನ್ನೆಲ್ಲ ಒಟ್ಟುಗೂಡಿಸಿ, ಸಾರಾಸಗಟಾಗಿ ಇವರು 'ಭಯೋತ್ಪಾದಕರಿಗಿಂತ ಹೀನರು' ಎಂದು ಖಂಡಿಸಿದರು; ಅಷ್ಟು ಮಾತ್ರ ವಲ್ಲದೆ, ಇನ್ನು ಮುಂದೆ ಇತಿಹಾಸ ಪಠ್ಯಗಳನ್ನು ಸಾಧುಗಳು ಮತ್ತು ಇಮಾಂಗಳಂಥ ಮತೀಯ ಮುಖಂಡರು ಪರಿಶೀಲಿಸಬೇಕೆಂದು ಸೂಚಿಸುವ ವರೆಗೂ ಹೋದರಂತೆ. ಇಲ್ಲಿ ಒಂದು ಸ್ವಾರಸ್ಯಕರ ಪ್ರಸಂಗವನ್ನು ನೆನೆಯಬೇಕು.

ಮಾನ್ಯ ಸಚಿವರ ಭಾಷಣವು ಪತ್ರಿಕೆಗಳಲ್ಲಿ ಪ್ರಕಟವಾದ ದಿನಗಳಲ್ಲಿ ನೊಬೆಲ್ ಪ್ರಶಸ್ತಿ ವಿಜೇತರೂ, ಅಂತರರಾಷ್ಟ್ರೀಯ ಪ್ರಖ್ಯಾತಿ ಹೊಂದಿದ ಅರ್ಥ ಶಾಸ್ತ್ರಜ್ಞರೂ ಆದ ಡಾ|| ಅಮರ್ತ್ಯ ಸೇನ್ ಭಾರತ ದಲ್ಲಿಯೇ ಇದ್ದರು. ಒಂದು ಸಂದರ್ಶನದಲ್ಲಿ ಪತ್ರಿಕೆಗಳ ವರದಿಯನ್ನು ಸೇನ್ ಅವರ ಗಮನಕ್ಕೆ ತಂದಾಗ, ಅವರು ಪ್ರತಿಕ್ರಿಯಿಸಿದ್ದು ಹೀಗೆ :

''ಈ ವರದಿಯು ನಿಜವೇ ಆಗಿದ್ದ ಪಕ್ಷದಲ್ಲಿ ನಾವೆಲ್ಲ ಥರಥರ ನಡುಗಬೇಕು. ಇತಿಹಾಸಕಾರರನ್ನು ಭಯೋತ್ಪಾದಕರೊಂದಿಗೆ ಜೋಡಿಸುವುದು, 'ತಪ್ಪು ವರ್ಗೀಕರಣ'ವೆಂಬ (category mistake) ತರ್ಕ ದೋಷವಾಗುತ್ತದೆ. ಇಲ್ಲಿ ಹೆಸರಿಸಿದ ಇತಿಹಾಸಕಾರರು ಇಡೀ ಜಗತ್ತಿನ ಮನ್ನಣೆಗೆ ಪಾತ್ರರಾದವರು. ಅವರ ಬಗ್ಗೆ ಇಂಥ ಟೀಕೆಯನ್ನು ಯಾರಾದರೂ – ಅದರಲ್ಲೂ ಶಿಕ್ಷಣ ಖಾತೆ ಹೊಣೆ ಹೊತ್ತಿರುವ ಕೇಂದ್ರ ಸಚಿವರು – ಮಾಡಿಯಾರೆಂದು ನಾನು ನಂಬಲಾರೆ. ಪ್ರಾಯಶಃ ತಪ್ಪು ವರದಿಯಾಗಿರಬೇಕು. ತಿದ್ದುಪಡಿ ಕೊಡುವರೆಂದು ಆಶಿಸುತ್ತೇನೆ'' ಎಂದರು. ಮುಂದುವರಿದು ''ಈ ಸಲಹೆಯನ್ನು (ಸಾಧುಗಳು ಮತ್ತು ಇಮಾಂಗಳ ಪರಿಶೀಲನೆಗೆ ಒಪ್ಪಿಸುವ ಸಲಹೆಯನ್ನು ) ಕೇಳಿಯೇ ನನಗೆ ಗಾಬರಿಯಾಗಿದೆ. ನನ್ನ ಈ ಸಂದರ್ಶನವನ್ನು ನೀವು ಯಾವುದೇ ಸಾಧು ಅಥವಾ ಇಮಾಮರ ಪರಿಶೀಲನೆಗೆ ಕಳಿಸಲಾರಿರಷ್ಟೆ'' ಎಂದು ತಮಾಷೆ ಮಾಡಿದರಂತೆ (ಔಟ್‌ಲುಕ್ - ವಾರಪತ್ರಿಕೆ - ಜನವರಿ ೨೧, ೨೦೦೨).

ಮಾನ್ಯ ಸಚಿವರು ಪತ್ರಿಕಾ ವರದಿಗೆ ತಿದ್ದುಪಡಿಯನ್ನೇನೂ ಕೊಟ್ಟಂತೆ ಕಾಣಲಿಲ್ಲ. ಇನ್ನು ಡಾ|| ಜೋಷಿಯವರು ಸಾಧುಗಳ ಜೊತೆಗೆ ಇಮಾಮ್‌ಗಳನ್ನು ಸೇರಿಸಿಕೊಂಡದ್ದರ ರಾಜಕೀಯ ರಹಸ್ಯವೇನೆಂಬುದನ್ನು ಬಲ್ಲವರೇ ಬಲ್ಲರು.

ಭೈರಪ್ಪನವರ ಹಲವು ಕಾದಂಬರಿಗಳಲ್ಲಿ ಕಾಣುವ ಒಂದು ಸಾಮಾನ್ಯ ತಂತ್ರವನ್ನು ಕುರಿತು ಎರಡು ಮಾತು ಹೇಳಬಹುದು. ಸಾಮಾನ್ಯವಾಗಿ ಒಂದಾನೊಂದು ತತ್ವಕ್ಕೆ ಬದ್ಧವೆನ್ನುವಂತಹ ಮುಖ್ಯ ಪಾತ್ರಗಳನ್ನು ಇವರು ಸೃಷ್ಟಿಸುತ್ತಾರೆ. ವಿಚಾರ ಮಂಡನೆಯ ಸಂದರ್ಭದಲ್ಲಿ ವಾದ ಪ್ರತಿವಾದಗಳೆರಡನ್ನೂ ತಾವೇ ನಿರ್ವಹಿಸಿ ಕಥೆಯನ್ನು ಮುಂದುವರಿಸುತ್ತಾರೆ. ಇವರು ಪೂರ್ವ ಪಕ್ಷವಾಗಿಟ್ಟುಕೊಳ್ಳುವ ವಾದದಲ್ಲಿಯೂ ಒಮ್ಮೊಮ್ಮೆ ತರ್ಕಬದ್ಧತೆ, ಸತ್ಯದ ಹೊಳಹುಗಳು ಗೋಚರಿಸುತ್ತವೆ. ಪ್ರಸ್ತುತ ಕಾದಂಬರಿ 'ಆವರಣ'ದಲ್ಲಿನ ನಾಯಕಿ ಲಕ್ಷ್ಮಿ ಉರುಫ್ ರಜಿಯಾ ಮತ್ತು ಖಳನಾಯಕ ಪ್ರೊ|| ಶಾಸ್ತ್ರಿ (ಲಕ್ಷ್ಮಿಯನ್ನು ಮತಾಂತರಗೊಳಿಸುವವನೂ, ಮದುವೆ ಯಾಗುವವನೂ ಅಮೀರ್ ಆಗಿದ್ದರೂ ಇದೆಲ್ಲದರ ಹಿಂದಿನ ಸೂತ್ರಧಾರಿ ಪ್ರೊ|| ಶಾಸ್ತ್ರಿ. ಇದು ವಾಕ್ಚತುರರಾದ ಬುದ್ಧಿಜೀವಿಗಳೇ ನಿಜವಾಗಿ ಹಿಂದೂಧರ್ಮದ ಶತ್ರುಗಳು – ಎಂಬ ಲೇಖಕರ ನಿಲುವಿಗೆ ಅನುಗುಣವಾಗಿದೆ) ಇವರ ವಾದವಿವಾದದ ಒಂದೆರಡು ತುಣುಕುಗಳನ್ನು ಗಮನಿಸಬಹುದು :

ಪ್ರೊ|| ಶಾಸ್ತ್ರಿಯು ಲಕ್ಷ್ಮಿ ಉರುಫ್ ರಜಿಯಾಳಿಗೆ ಬರೆದ ಒಂದು ಪತ್ರವನ್ನು 'ಇತಿಹಾಸದ ಗುರಿಯು ಮಾನವ ಕುಲದ ಪ್ರಗತಿಯನ್ನು ಪ್ರಚೋದಿಸುವುದೇ ಅಲ್ಲವೆ ?' ಎಂಬ ಪ್ರಶ್ನೆಯಿಂದ ಮುಗಿಸಿದ್ದಾರೆ.

''ಈ ಕಾಗದವು ಅವಳ ಆಲೋಚನೆಯನ್ನು ತುಸು ಪ್ರಚೋದಿಸಿದರೂ ಅದರ ವಿಚಾರದಲ್ಲಿ ನಂಬಿಕೆ ಹುಟ್ಟಲಿಲ್ಲ. ಪ್ರಗತಿಪರ ಇತಿಹಾಸ ಎಂಬ ಕಲ್ಪನೆ ಯಲ್ಲಿಯೇ ಅವಳ ನಂಬಿಕೆ ಕಡಿಮೆಯಾಗಿತ್ತು. ಆದ್ದರಿಂದ ಪ್ರೊ|| ಶಾಸ್ತ್ರಿಗಳ ಕಾಗದವನ್ನು ಹಾಗೆಯೇ ಮಡಿಸಿಟ್ಟು ತನ್ನ ಅಪ್ಪ ಸಿದ್ಧಪಡಿಸಿಟ್ಟಿದ್ದ ಟಿಪ್ಪಣಿಗಳ ಕಡೆಗೆ ತಿರುಗಿದಳು. ಆಮೇಲೆ 'ಇತಿಹಾಸಕ್ಕೆ ಗುರಿ ಇದೆಯೇ ಇಲ್ಲವೇ ಎಂಬುದು ತತ್ವಶಾಸ್ತ್ರಕ್ಕೆ ಸಂಬಂಧಿಸಿದ (ಜೀವನಕ್ಕೆ ಸಂಬಂಧಿಸಿದ್ದಲ್ಲವೇ) ಕೇವಲ ತರ್ಕದ ಬೆನ್ನು ಹತ್ತಿ ಹಾರಾಡುವ ಪ್ರಶ್ನೆ. ಆದರೆ ಇತಿಹಾಸದ ಅಧ್ಯಯನಕ್ಕಂತೂ ಸತ್ಯವನ್ನು ಕಂಡುಹಿಡಿಯುವ ನಿಶ್ಚಿತವಾದ ಗುರಿ ಇದೆ' ಎಂಬ ತೀರ್ಮಾನಕ್ಕೆ ಬಂದಳು.

ಇನ್ನೊಮ್ಮೆ ''ಮಾನವೀಯ ಸಂಬಂಧಕ್ಕಿಂತ ಒಂದು ಪ್ರಾಣಿಯ ಮಾಂಸ ತಿನ್ನುವ ಅಥವಾ ಬಿಡುವ ಸಂಗತಿಗೆ ಬೆಲೆಕೊಡುವ ಧರ್ಮ ಎಂಥದು ?'' ಎಂಬ ಪೂರ್ವ ಪಕ್ಷದ ಪ್ರಶ್ನೆಯನ್ನೆತ್ತುತ್ತಾರೆ. ಸಮರ್ಪಕ ಉತ್ತರ ಹೊಳೆಯುವುದಿಲ್ಲ; ಅಧ್ಯಾಯವನ್ನು ಅಲ್ಲಿಗೆ ಮುಗಿಸುತ್ತಾರೆ (ಪು. ೧೬೨).

ಹೇಗಾದರೂ ಮಾಡಿ ತಮ್ಮ ಪಕ್ಷ ಗೆಲ್ಲುವಂತೆ ಉತ್ತರಿಸುವಾಗಿನ ಭೈರಪ್ಪನವರ ಆತ್ಮವಿಶ್ವಾಸ ಅನುಮಾನ ಪಡುವವರನ್ನು ದಂಗುಬಡಿಸುತ್ತದೆ.

ಕಾದಂಬರಿಯುದ್ದಕ್ಕೂ ಔರಂಗಜೇಬನ ದುರಾಡಳಿತ, ಅವನ ಅಧಿಕಾರಿಗಳು ಮತ್ತು ಬಾದಷಹಾನ ಆಸ್ಥಾನ ಪಂಡಿತರೂ ಧರ್ಮ ಗುರುಗಳೂ ಆದ ಹಾಜಿ ಹಮದುಲ್ಲಾಹ್‌ರು ಮತ್ತು ಅವರ ಶಿಷ್ಯರ ಕ್ರೌರ್ಯವನ್ನು ತೀವ್ರವಾಗಿ ಖಂಡಿಸಲಾಗಿದೆ. ಇಸ್ಲಾಂ ಧರ್ಮದ ತಾತ್ವಿಕ ನಿಲುವು ಮತ್ತು ಆಚಾರದಲ್ಲಿನ ಕಟ್ಟುಪಾಡುಗಳನ್ನು ವಿಡಂಬನೆ ಮಾಡಿ ಟೀಕಿಸಲಾಗಿದೆ. ಆದರೂ ಧಾರ್ಮಿಕ ಕಟ್ಟುಪಾಡುಗಳು ಮತ್ತು ಅದರ ನಿಷ್ಠಾವಂತ ಅನುಸರಣೆಯ ಬಗೆಗೆ ಲೇಖಕರ ಅಂತರಂಗದ ಯಾವುದೋ ಒಂದು ಮೂಲೆಯಲ್ಲಿ ಮೆಚ್ಚುಗೆಯೂ ಇರುವಂತಿದೆ. ಇದು ವಿಚಿತ್ರವಾದರೂ ಸತ್ಯ. ದಿನಕ್ಕೆ ಮೂರು ಹೊತ್ತು ಸಂಧ್ಯಾವಂದನೆ ಮಾಡುವ, ಹೋಮ ಹವನ, ವ್ರತಗಳಂಥ ಪವಿತ್ರ ಕರ್ಮಗಳನ್ನು ಶ್ರದ್ಧೆಯಿಂದ ಆಚರಿಸುವ ಕರ್ಮಠ ಬ್ರಾಹ್ಮಣನು, ನಾಲ್ಕು ಹೊತ್ತು ನಮಾಜು ಮಾಡುವ, ರಂಜಾನ್ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ಕಟ್ಟಾ ಮುಸಲ್ಮಾನನನ್ನು ಮೆಚ್ಚುವಂತೆ !

ಸೌದಿಯಲ್ಲಿ ನೆಲೆಸಿದ್ದ, ರಜಿಯಾ ಮತ್ತು ಅಮೀರ್ ಮಗ ನಜೀರ್ ತಾಯಿಗೆ ಬರೆದ ಪತ್ರದಲ್ಲಿನ ಈ ಕೆಲವು ಮಾತುಗಳನ್ನು ನೋಡಿ : ''ಅರಬ್ ಪ್ರಪಂಚದಲ್ಲೆಲ್ಲ ಅತ್ಯಂತ ಸಂಪ್ರದಾಯನಿಷ್ಠ ದೇಶ ಸೌದಿ. ಪೂಜ್ಯ ಪ್ರವಾದಿ(ಸ)ಗಳು ಹುಟ್ಟಿ ಬೆಳೆದ, ಇಸ್ಲಾಮನ್ನು ಸ್ಥಾಪಿಸಿದ ದೇಶ ಇದು.... ಶರೀಯತ್ ನ್ಯಾಯವಿತರಣೆ; ಕೋರ್ಟು, ವಕೀಲ, ವಿಳಂಬತಂತ್ರ, ಅಪೀಲು, ಸಂಶಯದ ಲಾಭ ಮೊದಲಾದ ಮೂರ್ಖತನಗಳಿಲ್ಲ. ಕೊಲೆ ಮಾಡಿದವನಿಗೂ ಅಷ್ಟೇ, ಹಾದರ ಅತ್ಯಾಚಾರ ಮಾಡಿದವನಿಗೂ ಅಷ್ಟೇ. ಹಿಡಿದು ಶಿಕ್ಷೆ ವಿಧಿಸಿ, ಶುಕ್ರವಾರ ಮಧ್ಯಾಹ್ನ ನಮಾಜ್ ಆದ ನಂತರ ಮಸೀದಿಯ ಹೊರಗೆ ನಿಲ್ಲಿಸಿ ಕಲ್ಲು ಹೊಡೆದು ಸಾಯಿಸಿಬಿಡುತ್ತಾರೆ. ಸಮಾಜದ 'ಸ್ವಾಸ್ಥ್ಯಕ್ಕೆ ಇಂಥ ಕಠಿಣ ನಿಯಮ, ಅನುಷ್ಠಾನಗಳು ಅಗತ್ಯ ಎಂಬುದು ರುಜುವಾತಾಗುತ್ತದೆ.''

ಈ ಉದ್ಧರಣದಲ್ಲಿನ 'ಇಸ್ಲಾಮ್', 'ಶರೀಯತ್' ಗಳಿಗೆ ಪರ್ಯಾಯವಾಗಿ 'ಹಿಂದುತ್ವ', 'ಮನುಸಂಹಿತೆ' ಗಳನ್ನು ಜೋಡಿಸಿಕೊಂಡು ಅನುಷ್ಠಾನಕ್ಕೆ ತಂದರೆ, 'ತಾಲಿಬಾನೀಯತೆ' ಬಂದರೆ ಭಾರತದಲ್ಲಿಯೂ ಸಮಾಜ ಸ್ವಾಸ್ಥ್ಯ ನೆಲೆಸಬಹುದೆಂಬುದು ಮಾನ್ಯ ಕಾದಂಬರಿಕಾರರ ಆಶಯವಿದ್ದೀತೆ ? ಇರಬಹುದು, ಯೋಚಿಸಬೇಕು.

ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ
ಬೆಂಗಳೂರು - ೫೬೦ ೦೭೦




ಬಾಯಿ ತೆರೆಸುವ ಹಾಗೂ ಮುಚ್ಚಿಸುವ ಪವರ್ ಅವರಿಗೆ ಮಾತ್ರ ಇರುತ್ತದೆ'' ಎನ್ನುವ ನಾಗೇಶ್ ಹೆಗಡೆಯವರಿಗೆ ಒಂದು ಅನುಮಾನ! ಅವರು ಭೂವಿಜ್ಞಾನ ಪದವಿಯನ್ನು ಪಡೆಯೋದಿಕ್ಕೆ ಜಗತ್ತಿನಲ್ಲಿರುವ ಎಲ್ಲಾ ಜಾತಿಯ ಶಿಲೆಗಳನ್ನು ಓದಬೇಕಾಯಿತಂತೆ! ಆದರೆ ಈ ದಂತವೈದ್ಯರು ಇರೋ ೩೨ ಹಲ್ಲುಗಳನ್ನು ಅಧ್ಯಯನ ಮಾಡೋಕ್ಕೆ ೪-೫ ವರ್ಷ ಯಾಕೆ ಕಷ್ಟಪಡುತ್ತಾರೆ ಅಂತ! ನಿಮಗೂ ನಾಗೇಶ್ ಹೆಗಡೆ ಅವರಿಗೆ ಬಂದಂತಹ ಅನುಮಾನ ಬಂದರೆ ಅಥವಾ ಬಂದಿದ್ದರೆ, ಖಂಡಿತಾ ಈ ಪುಸ್ತಕವನ್ನು ಓದಿ! ಈ ಪುಸ್ತಕದಲ್ಲಿರುವ ೩೨ ಅಧ್ಯಾಯಗಳು ೩೨ ಹಲ್ಲುಗಳ ನಾನಾ ಮುಖಗಳನ್ನು ನಮ್ಮ ಮುಂದೆ ಅನಾವರಣ ಮಾಡುತ್ತವೆ!

ಡಾ|| ಗುರುರಾಜ ಅರಕೇರಿ ಅವರು ಗುಲ್ಬರ್ಗದ ಹತ್ತಿರ ಇರುವ ಶಹಾಪೂರದವರು. ಅಲ್ಲಿಯೇ ತಮ್ಮ ಚಿಕಿತ್ಸಾಲಯವನ್ನು ತೆರೆದು ವೃತ್ತಿಯಲ್ಲಿ ತೊಡಗಿದ್ದಾರೆ. ವೃತ್ತಿಯ ಜೊತೆ ಬರೆಯುವ ಪ್ರವೃತ್ತಿಯನ್ನು ರೂಢಿಸಿಕೊಂಡು, ದಂತವೈದ್ಯಕೀಯಕ್ಕೆ ಸಂಬಂಧಪಟ್ಟಹಾಗೆ ಇವರು ಪತ್ರಿಕೆಗಳಲ್ಲಿ ಬರೆದ ಲೇಖನಗಳು ಅಪಾರ ಜನಪ್ರಿಯತೆಯನ್ನು ಪಡೆದವು. ಇದನ್ನು ಗಮನಿಸಿದ ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ ಡಾ|| ಪಿ. ಎಸ್. ಶಂಕರ್ ಅವರು ಡಾ|| ಗುರುರಾಜ ಅರಕೇರಿಯವರ ಪ್ರಕಟಿತ ಲೇಖನಗಳನ್ನು ಪುಸ್ತಕರೂಪದಲ್ಲಿ ತಂದು ತಮ್ಮ ಪ್ರತಿಷ್ಠಾನದ ಮೂಲಕ ಹೊರತಂದರು. ಆ ಪುಸ್ತಕ 'ದಂತಾಂತರಂಗ' ಎಂಬ ಹೆಸರಿನಲ್ಲಿ ಪ್ರತಿಷ್ಠಾನದ ೮ನೆಯ ಪುಸ್ತಕವಾಗಿ ೨೦೦೨ರಲ್ಲಿ ಪ್ರಕಟವಾಯಿತು. ಪ್ರಕಟವಾಗಿ ಒಂದು ವರ್ಷದ ಒಳಗೆ ಎಲ್ಲ ಪ್ರತಿಗಳು ಮಾರಾಟವಾದವು. ಇದು ಅವರ ಪುಸ್ತಕದ ಜನಪ್ರಿಯತೆಗೆ ಸಾಕ್ಷಿಯಾಗಿದೆ.

ಡಾ|| ಗುರುರಾಜ ಅರಕೇರಿಯವರು ಈಗ ದಂತವೈದ್ಯಕೀಯದ ಹಲವು ಮುಖಗಳನ್ನು ಪರಿಚಯಿಸುವ 'ಹಲ್ಲಿನ

# ಹಲ್ಲಿನ ರಕ್ಷಣೆ – ಒಂದು ಉಪಯುಕ್ತ ಕೈಪಿಡಿ

**ಮ**ನುಷ್ಯ ಸೌಂದರ್ಯ ಪ್ರಿಯ. ಆಭರಣಗಳನ್ನು ಧರಿಸುವುದರಿಂದ ಸೌಂದರ್ಯ ಹೆಚ್ಚುತ್ತದೆ ಎನ್ನುವುದು ಅವನ ನಂಬಿಕೆ. ಈ ನಂಬಿಕೆ ಪ್ರಪಂಚದ ಇತರ ದೇಶದವರಿಗಿಂತ ಭಾರತೀಯರಲ್ಲಿ ತುಸು ಹೆಚ್ಚು ಎಂದರೆ ತಪ್ಪಾಗಲಾರದು. ನಮ್ಮ ಹೆಣ್ಣುಮಕ್ಕಳು ಕಿವಿ ಹಾಗೂ ಮೂಗುಗಳನ್ನು ಚುಚ್ಚಿಕೊಂಡು ಓಲೆ ಹಾಗೂ ಮೂಗುತಿಗಳನ್ನು ಧರಿಸುವುದು ಸರ್ವೇಸಾಮಾನ್ಯ! ಕೆಲವರು ಕಿವಿಯ ಮೇಲ್ಭಾಗವನ್ನು ಚುಚ್ಚಿ ಬುಗುಡಿಯೆಂಬ ಆಭರಣವನ್ನು ಧರಿಸುವುದುಂಟು. ಆದರೆ ಪಾಶ್ಚಾತ್ಯರಲ್ಲಿ ಸಾಕಷ್ಟು ಲಲನಾಮಣಿಗಳು ಹುಬ್ಬು, ನಾಲಿಗೆ, ತುಟಿ, ಸ್ತನತೊಟ್ಟು, ಹೊಕ್ಕುಳು ಹಾಗೂ ಜನನಾಂಗಗಳನ್ನು ಚುಚ್ಚಿ ವಿಶೇಷ ಆಭರಣಗಳನ್ನು ತೊಡುತ್ತಾರೆ ಎಂಬ ಸುದ್ದಿ ಕೇಳಿದಾಗ, ಬಹುಶಃ ಇವರು ಆಭರಣಗಳನ್ನು ಚುಚ್ಚಲು ಬಳಸದೆ ಇರುವ ಎರಡೇ ಎರಡು ಭಾಗಗಳೆಂದರೆ ಹಲ್ಲು ಮತ್ತು ಕಣ್ಣುರೆಪ್ಪೆ ಎಂದು ಭಾವಿಸಿದ್ದೆ. ಆದರೆ ಈಗ ಹಲ್ಲಿಗೂ ಆಭರಣ ಧರಿಸಬಹುದು ಎಂಬ ವಿಷಯ ತಿಳಿದುಬಂದಿದೆ.

ಡಾ|| ಗುರುರಾಜ ಅರಕೇರಿ ಅವರು ಬರೆದಿರುವ 'ಹಲ್ಲಿನ ರಕ್ಷಣೆ – ಒಂದು ಉಪಯುಕ್ತ ಕೈಪಿಡಿ' ೨೭೫ಕ್ಕೂ ಮೀರಿದ ಪುಟಗಳನ್ನು ಒಳಗೊಂಡ ಈ ಪುಸ್ತಕದ ಬೆಲೆ ನೂರು ರೂಪಾಯಿಗಳು. ಇದು ನವಕರ್ನಾಟಕ ಪಬ್ಲಿಕೇಷನ್ಸ್ ಅವರ ಕೊಡುಗೆ.

ಗುರು ಡಾಕ್ಟರ್ ಬರೆದಿರುವಂತಹ ಈ ಪುಸ್ತಕಕ್ಕೆ ನಾಗೇಶ್ ಹೆಗಡೆ ಅವರು ಲಘು ತೋರಣವನ್ನು ಕಟ್ಟುವೆನೆಂದು ಒಂದು ಉತ್ತಮ ನಗೆತೋರಣವನ್ನು ಕಟ್ಟಿದ್ದಾರೆ. ''ದಂತವೈದ್ಯರೆಂದರೆ ನನಗೆ ಮೊದಲಿನಿಂದಲೂ ವಿಶೇಷ ಗೌರವ. ಒಂಥರಾ ಅಸೂಯೆ ಕೂಡ. ಏಕೆಂದರೆ, ಬೇಕೆಂದಾಗ ಮಹಿಳೆಯರ



ರಕ್ಷಣೆ – ಒಂದು ಉಪಯುಕ್ತ ಕೈಪಿಡಿ' ಎಂಬ ಕೃತಿಯನ್ನು ಬರೆದಿದ್ದಾರೆ. ಇದು ದಂತಾಂತರಂಗಕ್ಕಿಂತ ಎರಡು ಪಟ್ಟು ದೊಡ್ಡದು. ಹಾಗಾಗಿ ಇಲ್ಲಿ ಮಂಡಿತವಾಗಿರುವ ವಿಷಯಗಳ ಆಳ ಹಾಗೂ ವೈಶಾಲ್ಯತೆ ದೊಡ್ಡದಾಗಿದೆ. ಡಾ|| ಗುರುರಾಜ ಅರಕೇರಿಯವರ ಈ ಎರಡು ಪುಸ್ತಕಗಳು, ವಿಶೇಷವಾಗಿ ಈಗ ಪ್ರಕಟವಾಗಿರುವ ಈ ಪುಸ್ತಕ, ಕನ್ನಡ ವೈದ್ಯಕೀಯ ಸಾಹಿತ್ಯಕ್ಕೆ ಒಂದು ಉತ್ತಮ ಕೊಡುಗೆಯಾಗಿದೆ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ. ಗುರುರಾಜ ಅವರು ತಮ್ಮ ಮುನ್ನುಡಿಯಲ್ಲಿ ದಂತ ಇತಿಹಾಸ ಕುರಿತು ಸಚಿತ್ರ ವಿವರಣೆಯನ್ನು ನೀಡುವ ಪುಸ್ತಕ ಇಂಗ್ಲಿಷ್ ಹಾಗೂ ಹಿಂದಿಯನ್ನು ಬಿಟ್ಟಂತೆ, ಉಳಿದ ಯಾವುದೇ ಭಾರತೀಯ ಭಾಷೆಗಳಲ್ಲಿ ಪ್ರಕಟವಾಗದಿರುವ ಬಗೆಗೆ ಉಲ್ಲೇಖವನ್ನು ಮಾಡಿದ್ದಾರೆ. ಪ್ರತಿ ಅಧ್ಯಾಯದ ಆರಂಭದಲ್ಲಿ ದಂತ ವೈದ್ಯಕೀಯ ಬೆಳೆದುಬಂದ ಪ್ರಮುಖ ಘಟ್ಟಗಳನ್ನು ಗುರುತಿಸುವ ಪ್ರಮುಖ ಚಿತ್ರಗಳನ್ನು ಪ್ರಕಟಿಸಿದ್ದಾರೆ. ಇಂತಹ ೧೯ನೆಯ ಶತಮಾನದ ಒಂದು ಚಿತ್ರ, ತಲೆಬುರುಡೆಯ ಹಲ್ಲುಗಳಲ್ಲಿ ಆಭರಣಗಳಿರುವ ಚಿತ್ರವನ್ನು ನೋಡಿದಾಗ, ಕೇವಲ ಇತಿಹಾಸ ಮಾತ್ರವಲ್ಲ, ಫ್ಯಾಶನ್ ಸಹ ಪುನರಾವರ್ತನೆಯಾಗುತ್ತಿರುತ್ತದೆ ಎಂಬುದಕ್ಕೆ ಪುರಾವೆ ದೊರೆಯಿತು. ಈ ಚಿತ್ರಗಳು ಈ ಪುಸ್ತಕದ ಮಹತ್ವವನ್ನು ಹೆಚ್ಚಿಸಿವೆ ಹಾಗೂ ಓದುಗರ ಗಮನವನ್ನು ಸೆಳೆಯುತ್ತವೆ.

ಡಾ|| ಗುರುರಾಜ ಅರಕೇರಿಯವರು ವಿಷಯ ಮಂಡನೆಗೆ ಸೊಗಸಾದ ಭಾಷೆಯನ್ನು ಬಳಸುತ್ತಾರೆ. ತಾವು ಕಂಡ ರೋಗಿಗಳ ಅನುಭವವನ್ನು ಅವರದೇ ಆದ ಗ್ರಾಮೀಣ ಭಾಷೆಯಲ್ಲಿ ವಿವರಿಸುತ್ತಾರೆ.

''ಹೌದೇನಮ್ಮ... ದಿನಾ ಊಟ ಮಾಡಲ್ಲೇನು ?''

''ಇಲ್ಲ ಸರ್. ನನಗ್ ಊಟ ಅಂದ್ರ ಸೇರಂಗಿಲ್ರಿ.''

''ಯಾಕ್ ಹೊಟ್ಯಾಗ್ ಏನಾದ್ರೂ ನೋವಾಗ್ತೈತೇನು ?''

''ಹಾಂಗ್ ಬ್ಯಾನಿ ಏನ್ ಇಲ್ರಿ. ಸುಮ್ನೇ ಸೇರಂಗಿಲ್ರಿ. ಏನೋ ಗೊತ್ತಿಲ್ಲ...''

''ಇದು ನನ್ನ ಪ್ರಶ್ನೆಗೆ ಉತ್ರ ಅಲ್ಲ. ಹೊಟ್ಟೆ ಬ್ಯಾನಿ ಏನೂ ಇಲ್ಲ ಅಂದ್ರ ಊಟ ಮಾಡ್ಲಕ್ ಯಾಕ್ ವಲ್ಲ ಅಂತೀ ?''

''ತಿಂದ್ರ ನನಗ್ ವಾಂತಿ ಬರತೈತ್ರಿ.''

''ಯಾಕ್ ಊಟ ರುಚಿ ಅನ್ಸಂಗಿಲ್ಲೇನ್, ಅಜೀರ್ಣ ಆಗೈತೇನ್ ?''

''ಹಂಗೇನಿಲ್ಲ. ಒಟ್ಟ ವಾಂತಿ ಮಾಡ್ಕೊಳಂಗ್ ಆಗೈತ್ರಿ.''

''ಯಾಕ್ ವಾಂತಿ ಮಾಡ್ಕೋತಿ ?''

''ಅಂಜಿಕೆ ಆಗೇತಿ.''

''ಯಾಕ್ ಅಂಜಿಕೆ ಆಗೇತಿ ?''

''ನಾ ಭಾಳ್ ತಿಂದ್ರ ದಪ್ ಆಗ್ತೀನಿ. ನನ್ನ ಫ್ರೆಂಡ್ಸ್ ಎಲ್ಲ ನೋಡಿ ನಗ್ತಾರ ಅದಕ್ಕ.''

ಇದು 'ಅನೋರೆಕ್ಸಿಯ ನರ್ವೋಸ' ಎಂಬ ಮಾನಸಿಕ ಕಾಯಿಲೆಯಿಂದ ನರಳುವ ಹುಡುಗಿ, ತಾನು ತೀರಾ ದಪ್ಪಕ್ಕಿದ್ದೇನೆ ಎಂಬ ಭ್ರಮೆಗೆ ಒಳಗಾಗಿರುವ ಹುಡುಗಿ, ತಾನು ತಿಂದದ್ದನ್ನೆಲ್ಲ ವಾಂತಿ ಮಾಡಿಕೊಳ್ಳುತ್ತಾ ಇರುತ್ತಾಳೆ. ಜಠರಾಮ್ಲ ಮಿಶ್ರಿತ ಆಹಾರ ಪದೇ ಪದೇ ವಾಂತಿಯ ಮೂಲಕ ಹೊರಬಂದಾಗ, ಅದರಲ್ಲಿರುವ ಹೈಡ್ರೋಕ್ಲೋರಿಕ್ ಆಮ್ಲ ಬಾಯಿಯ ಹಲ್ಲುಗಳ ಒಳಭಾಗವನ್ನು ಕರಗಿಸುತ್ತಿರುತ್ತದೆ. ಸಾಮಾನ್ಯವಾಗಿ ಹಲ್ಲುಗಳ ಹೊರಭಾಗ ಸವೆಯುವುದು ಹಾಗೂ ಕರಗುವುದು ಹೆಚ್ಚು, ಒಳಭಾಗ ಅಪರೂಪ. ಇದನ್ನು ಗಮನಿಸಿದ ಲೇಖಕರು ಕಾರಣವನ್ನು ಮೇಲೆ ತಿಳಿಸಿದ ಸಂಭಾಷಣೆಯ ಮೂಲಕ ಸೊಗಸಾಗಿ ಹೊರಗೆಡವುತ್ತಾರೆ.

ಡಾ|| ಗುರುರಾಜ ಅರಕೇರಿಯವರು ಸುಂದರ ಹಲ್ಲುಗಳ ಮಹತ್ವ ಹಾಗೂ ನೀಲಿಗಟ್ಟಿದ ವಸಡುಗಳ

ಡಾ|| ನಾ. ಸೋಮೇಶ್ವರ




ನಿವಾರಣೆಗೆ ಬಳಸುವ 'ವಸಡು ಸುರೂಪೀಕರಣ ಚಿಕಿತ್ಸೆ'ಯ ಮಹತ್ವವನ್ನು ತಿಳಿಸಲು ಎಂತಹ ಕಾವ್ಯಮಯ ಭಾಷೆಯನ್ನು ಉಪಯೋಗಿಸುತ್ತಾರೆ ಎಂಬುದಕ್ಕೆ ಈ ಉದಾಹರಣೆಯನ್ನು ನೋಡಬಹುದು. ''ಸುಂದರ ನಗು ಎಂಬುದು ಒಂದು ನಾಟ್ಯ ವೇದಿಕೆ. ಅಲ್ಲಿ ಮುಂಭಾಗದ ಬಾಚಿ ಹಲ್ಲುಗಳು ಮುಖ್ಯ ಪಾತ್ರಧಾರಿಗಳು. ಕಿರು ಬಾಚಿ ಹಲ್ಲುಗಳು ಪೋಷಕ ಪಾತ್ರಧಾರಿಗಳು. ಖಳನ ಪಾತ್ರದಲ್ಲಿ ಕೋರೆಹಲ್ಲುಗಳು. ಇವೆಲ್ಲವುಗಳ ಹಿಂದೆ ವಸಡು ಎಂಬ ಪರದೆ. ಈ ಪರದೆ ಅದ್ದೂರಿಯಾಗಿದ್ದಷ್ಟೂ ನಾಟ್ಯ ವೇದಿಕೆಯ ವೈಭವ ಹೆಚ್ಚುತ್ತದೆ. ಇಂತಹ ಪರದೆಯೇ ಕಳಪೆಯಾಗಿದ್ದರೆ ? ನಾಟ್ಯ ವೇದಿಕೆ, ನಾಟಕ ಎಲ್ಲವೂ ಸಪ್ಪೆ ಸಪ್ಪೆ. ಆದರೆ ಈ ವಸಡು ಸುರೂಪೀಕರಣ ಚಿಕಿತ್ಸೆಯು ಕಪ್ಪು ಬಿಳುಪು ನಗುವಿನ ನಾಟ್ಯವೇದಿಕೆಗೆ ಬಣ್ಣ ನೀಡುವಲ್ಲಿ ಯಶಸ್ವಿಯಾಗಿದೆ.'' ಹೀಗೆ ಡಾ॥ ಅರಕೇರಿಯವರು ಬಳಸುವ ಭಾಷೆಯು ಪ್ರತಿಯೊಂದು ಅಧ್ಯಾಯವನ್ನು ತನಗೆ ತಾನೇ ಓದಿಸಿಕೊಂಡು ಹೋಗುತ್ತದೆ.

ಡಾ॥ ಗುರುರಾಜ ಅರಕೇರಿಯವರು ಈ ಪುಸ್ತಕದ ಬಹುಪಾಲು ಅಧ್ಯಾಯಗಳಲ್ಲಿ ದಂತವೈದ್ಯಕೀಯಕ್ಕೆ ಸಂಬಂಧ ಪಟ್ಟ ಹಾಗೆ, ಜನಸಾಮಾನ್ಯರಲ್ಲಿರುವ ತಪ್ಪು ತಿಳುವಳಿಕೆಗಳ ಬಗ್ಗೆ ಪ್ರಸ್ತಾಪಿಸಿ, ಸರಿಯಾದ ಮಾಹಿತಿಯನ್ನು ನೀಡುತ್ತಾರೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಗಮನಿಸಬಹುದು.

* ಪೇಸ್ಟ್‌ಗಳು ಹಾಗೂ ದಂತ ಮಾರ್ಜಕ ದ್ರಾವಣಗಳು ಹಲ್ಲು ಹುಳುಕಾಗಿರುವುದನ್ನು ತಡೆಗಟ್ಟುತ್ತವೆ ಹಾಗೂ ಬಾಯಿಯ ದುರ್ವಾಸನೆಯನ್ನು ನಿವಾರಿಸುತ್ತವೆ ಎಂಬುದು ಹಸಿ ಹಸಿ ಸುಳ್ಳು.
* ದಂತ ಸ್ವಚ್ಛತೆಗೆ ಪೇಸ್ಟ್ ಅಥವಾ ಪುಡಿ ಅನವಶ್ಯ. ಸೂಕ್ತ ಬ್ರಶ್ ಬಳಸಿ ಸರಿಯಾದ ವಿಧಾನದಲ್ಲಿ ಹಲ್ಲುಜ್ಜಿದರೆ ಸಾಕು, ಹಲ್ಲುಗಳು ಆರೋಗ್ಯವಾಗಿರುತ್ತವೆ.
* ಸಾಮಾನ್ಯವಾಗಿ ನಾವು ಬ್ರಶ್ಶಿನ ಕೂದಲಿನ ಮೇಲೆ, ಉದ್ದಕ್ಕೂ ಪೇಸ್ಟನ್ನು ಹಾಕಿ ಹಲ್ಲುಜ್ಜುತ್ತೇವೆ. ಇದು ತಪ್ಪು. ನಡುವೆ ಪೇಸ್ಟನ್ನು ಹಾಕಿ ಉಜ್ಜಿದರೆ ಮಾತ್ರ, ಪೇಸ್ಟಿನ ಗರಿಷ್ಠ ಲಾಭವನ್ನು ಪಡೆಯೋದಿಕ್ಕೆ ಸಾಧ್ಯವಾಗುತ್ತದೆ.
* ಹುಳುಕು ಹಲ್ಲಿನ ಕುಳಿಗಳನ್ನು ಸಿಮೆಂಟಿನಿಂದ ಮುಚ್ಚ ಬಹುದು ಇಲ್ಲವೇ ಬೆಳ್ಳಿಯಿಂದ ತುಂಬಬಹುದು. ಜನಸಾಮಾನ್ಯರು ಹಲ್ಲಿನ ಸಿಮೆಂಟೆಂದರೆ, ಮನೆ ಕಟ್ಟಲು ಬಳಸುವ ಸಿಮೆಂಟು, ಬೆಳ್ಳಿ ಎಂದರೆ ಆಭರಣಗಳನ್ನು ತಯಾರಿಸಲು ಬಳಸುವ ಬೆಳ್ಳಿ ಎಂದು ತಪ್ಪು ತಿಳಿದಿರುವುದುಂಟು. ಇದು ತಪ್ಪು. ವಾಸ್ತವದಲ್ಲಿ ಕೆಲವು ರಾಸಾಯನಿಕ ಸಂಯುಕ್ತಗಳನ್ನು ಬಳಸುತ್ತಾರೆ.
* ಹಲ್ಲುನೋವು ಇರುವವರು ಯಾವುದೇ ರೀತಿಯ ಬಿಸಿ ಪದಾರ್ಥಗಳನ್ನು ತಿನ್ನಬಾರದು ಹಾಗೂ ಕುಡಿಯ ಬಾರದು ಹಾಗೂ ಶಾಖವನ್ನು ನೀಡಬಾರದು. ಇದರಿಂದ ಸೋಂಕು ಮತ್ತಷ್ಟು ಹರಡಲು ನೆರವಾಗುತ್ತದೆ.
* ಗರ್ಭಿಣಿ ಸ್ತ್ರೀಯರು ತಂಬಾಕಿನಿಂದ ವಸಡನ್ನು ಉಜ್ಜಿದರೆ ವಸಡು ಹಾಗೂ ಹಲ್ಲು ಗಟ್ಟಿಯಾಗುತ್ತದೆ ಜೊತೆಗೆ ಪ್ರಸವವೂ ಸುಖವಾಗುತ್ತದೆ ಎಂಬುದು ಮೂಢನಂಬಿಕೆ.

ಡಾ॥ ಅರಕೇರಿಯವರ ಈ ಸುಂದರ ಪುಸ್ತಕವು ದುರದೃಷ್ಟವಶಾತ್ ಕೆಲವು ದೋಷಗಳನ್ನು ಒಳಗೊಂಡಿದೆ. ಮೊದಲನೆಯದು ಹಲ್ಲಿನ ರಕ್ಷಣೆಯ ಬಗ್ಗೆ ಒಂದು ಪುಸ್ತಕವನ್ನು ಬರೆಯಲು ಬೇಕಾಗುವ ಸಿದ್ಧತೆಗಳನ್ನು ಅವರು ಮಾಡಿಕೊಂಡಿಲ್ಲ. ಬದಲಿಗೆ ಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳನ್ನು ಇಲ್ಲಿ ಸಂಕಲಿಸಿದ್ದಾರೆ ಅಷ್ಟೆ. ಹೀಗೆ ಸಂಕಲಿಸುವಾಗ ಕೆಲವು ಎಚ್ಚರಿಕೆಗಳನ್ನು ವಹಿಸ ಬೇಕಾಗುತ್ತದೆ. ಅಂತಹ ಎಚ್ಚರಿಕೆಯನ್ನು ಇಲ್ಲಿ ವಹಿಸಿಲ್ಲ. ಮೊದಲನೆಯದು, ಅಧ್ಯಾಯಗಳ ಜೋಡಣೆ. ಇವು ತರ್ಕಹೀನವಾಗಿವೆ. ೨೧ನೆಯ ಅಧ್ಯಾಯದ ಶೀರ್ಷಿಕೆ 'ಗುಟಖಾ-ಶಾಸನ ವಿಧಿಸಿದ ಎಚ್ಚರಿಕೆ !' ಎಂದಿದ್ದರೆ, ೨೮ನೆಯ ಅಧ್ಯಾಯವು 'ಗುಟಖಾ ಚಟ ವಿಮುಕ್ತಿ ಹೇಗೆ ?' ಎಂಬುದರ ಬಗ್ಗೆ ಚರ್ಚಿಸುತ್ತದೆ. ವಾಸ್ತವದಲ್ಲಿ ಎರಡೂ ಲೇಖನಗಳಲ್ಲಿ ಚರ್ಚಿತವಾಗಿರುವ ಮಾಹಿತಿ ಯನ್ನು ಒಂದೇ ಲೇಖನದಲ್ಲಿ ಅಳವಡಿಸಬಹುದಾಗಿತ್ತು. ಎರಡನೆಯದು, ಒಂದು ಮಾಹಿತಿಯು ಹಲವು ಲೇಖನಗಳಲ್ಲಿ ಮತ್ತೆ ಮತ್ತೆ ಪುನರಾವರ್ತನೆಯಾಗುತ್ತದೆ. ಹೀಗೆ ಪುನರಾವರ್ತನೆಯಾಗುವಾಗ ಯಾವುದೇ ರೀತಿಯ ಹೆಚ್ಚಿನ ಮಾಹಿತಿಯನ್ನೂ ಕೊಡುವುದಿಲ್ಲ. ಉದಾಹರಣೆಗೆ, ಗರ್ಭಿಣಿ ಸ್ತ್ರೀಯರು ತಂಬಾಕನ್ನು ಬಳಸಬಾರದು ಎಂಬ ಮಾಹಿತಿಯು ಕನಿಷ್ಠ ಮೂರು ಸಲ ಪುನರಾವರ್ತನೆ ಯಾಗಿದೆ. ಒಂದೇ ಮಾಹಿತಿ ಮತ್ತೆ ಮತ್ತೆ ಬಂದಾಗ, ಯಾವುದೇ ಹೆಚ್ಚಿನ ಮಾಹಿತಿಯನ್ನು ಕೊಡದಿದ್ದಾಗ, ಅದು ಓದುಗನಿಗೆ ಕಿರಿಕಿರಿಯಾಗುತ್ತದೆ. ಒಬ್ಬ ಲೇಖಕ ಬರೆದಿರುವ ಲೇಖನಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವಾಗ, ಅದನ್ನು ಸಂಕಲಿಸುವ ಜವಾಬ್ದಾರಿಯನ್ನು ಮತ್ತೋರ್ವ ಅರ್ಹ ವೈದ್ಯಲೇಖಕನಿಗೆ ನೀಡುವುದು ಒಳ್ಳೆಯದು. ಈ ಪದ್ಧತಿಯು ವಿದೇಶಗಳಲ್ಲಿದೆ. ಹೀಗೆ ಮಾಡಿದಾಗ ಇಂತಹ ಗೊಂದಲಗಳು ನಿವಾರಣೆಯಾಗಿ ಪುಸ್ತಕದ ಗುಣಮಟ್ಟ ಹೆಚ್ಚುತ್ತದೆ. 'ಅಪರೂಪಕ್ಕೆ ಅಲ್ಲೊಂದು ಇಲ್ಲೊಂದು ಮುದ್ರಣ ದೋಷಗಳಿವೆ. ಪುಸ್ತಕದಲ್ಲಿ ಅಗತ್ಯ ಚಿತ್ರಗಳಿವೆ. ಆದರೆ ಎಲ್ಲವೂ ಕಪ್ಪು-ಬಿಳುಪಿನವು. ಇವು ನಿರೀಕ್ಷಿತ ಪ್ರಮಾಣದಲ್ಲಿ ವಿಷಯ ವನ್ನು ಸಂವಹನ ಮಾಡುವಲ್ಲಿ ವಿಫಲವಾಗಿವೆ. ರೇಖಾಚಿತ್ರ ಗಳನ್ನೆಲ್ಲ ವಿವಿಧ ಮೂಲಗಳಿಂದ ಸಂಗ್ರಹಿಸಿರುವ ಕಾರಣ 'ಏಕರೂಪತೆ' ಇಲ್ಲವಾಗಿ ಕಿರಿಕಿರಿಯೆನಿಸುತ್ತದೆ. ರೇಖಾಚಿತ್ರಗಳನ್ನು ಬರೆಸಿದ್ದರೆ ಚೆನ್ನಾಗಿರುತ್ತಿತ್ತು.

ಈ ಪುಸ್ತಕದಲ್ಲಿ 'ಮೃತ್ಯು ಚುಂಬನ' ಎಂಬ ಅಧ್ಯಾಯ ವಿದೆ. ಒಂದು ಸಮೀಕ್ಷೆಯ ಪ್ರಕಾರ ಶೇಕಡಾ ೬೮ರಷ್ಟು ಲೈಂಗಿಕ ಕಾರ್ಯಕರ್ತೆಯರು ವಸಡಿನ ಉರಿ ಮತ್ತು ಊತದಿಂದ ನರಳುತ್ತಿದ್ದಾರೆ. ಈ ವಸಡು ಸಮಸ್ಯೆಯಲ್ಲಿ ವಸಡಿನಿಂದ ರಕ್ತ-ಕೀವು ಸ್ರಾವವಾಗುತ್ತಿರುತ್ತದೆ. ಇವರು ಚುಂಬಿಸುವಾಗ ರಕ್ತದ ಮೂಲಕ ಎಚ್.ಐ.ವಿ. ಹಾಗೂ ಹೆಪಟೈಟಿಸ್-ಬಿ ನಂತಹ ಸೋಂಕುಕಾರಕ ವೈರಸ್ಸುಗಳು ಗ್ರಾಹಕನಿಗೆ ತಲುಪಿಸಬಲ್ಲರು. ಹಲ್ಲು ಕೀಳಿಸಿಕೊಳ್ಳಲು ಬಂದ ಲೈಂಗಿಕ ಕಾರ್ಯಕರ್ತೆಗೆ 'ಇನ್ನು ೧೦ ದಿನಗಳ ವರೆಗೆ ಯಾರನ್ನೂ ಚುಂಬಿಸಬೇಡಮ್ಮ' ಎಂದಾಗ ಆಕೆ 'ಹಂಗಂದ್ರೆ ಯಾರು ಕೇಳ್ತಾರೆ ಸಾರ್' ಎಂದು ಹೇಳಿ ತನ್ನ ಕಾಯಕದಲ್ಲಿ ತೊಡಗುತ್ತಾಳೆ. ಹಲ್ಲು ಕಿತ್ತ ನಂತರ ಕನಿಷ್ಠ ೧೦ ದಿನಗಳವರೆಗೆ ಸೂಕ್ಷ್ಮ ಪ್ರಮಾಣದಲ್ಲಿ ರಕ್ತಸ್ರಾವ ಆಗುತ್ತಲೇ ಇರುತ್ತದೆ. ಹಾಗಾಗಿ ಆಕೆ ಯಾರು ಯಾರಿಗೆ ದೀರ್ಘ ಚುಂಬನವನ್ನು ಕೊಡುತ್ತಾಳೋ ಅವರಿಗೆಲ್ಲ ಸೋಂಕು ಹರಡುವ ಸಾಧ್ಯತೆಯಿರುತ್ತದೆ. ಎಲ್ಲಾ ಲೈಂಗಿಕ ಕಾರ್ಯಕರ್ತೆಯರಿಗೆ ಎಚ್.ಐ.ವಿ. ಸೋಂಕು ಇರುವುದಿಲ್ಲ, ನಿಜ. ಆದರೆ ಯಾರಿಗೆ ಸೋಂಕು ಇದೆ ಯಾರಿಗೆ ಇಲ್ಲ ಎಂಬುದನ್ನು ಮೇಲುನೋಟಕ್ಕೆ ಹೇಳಲು ಸಾಧ್ಯವಿಲ್ಲವಲ್ಲ! ಹಾಗಾಗಿ ಕಾಂಡಂ ಬಳಸುವುದರ ಜೊತೆಗೆ ದೀರ್ಘ ಚುಂಬನದಲ್ಲಿ ತೊಡಗಬೇಡಿ ಎಂಬ ಕಿವಿಮಾತನ್ನು ಹೇಳಬೇಕಾದ ಅಗತ್ಯವಿರುತ್ತದೆ. ಇದರ ಬಗ್ಗೆ ಹೆಚ್ಚಿನ ಪ್ರಚುರ ಕೊಡಬೇಕು.

ಡಾ॥ ಗುರುರಾಜ ಅರಕೇರಿಯವರ 'ಹಲ್ಲಿನ ರಕ್ಷಣೆ – ಒಂದು ಉಪಯುಕ್ತ ಕೈಪಿಡಿ' ಎಂಬ ಪುಸ್ತಕ ನಮ್ಮ ನಿಮ್ಮ ಮನೆಯಲ್ಲಿರಲು ಯೋಗ್ಯವಾಗಿದೆ. ದಂತ ಆರೋಗ್ಯಕ್ಕೆ ಸಂಬಂಧಪಟ್ಟ ಪ್ರಮುಖ ಮಾಹಿತಿಯೆಲ್ಲವೂ ಇದರಲ್ಲಿದೆ. ಹಾಗಾಗಿ ಇದು ಆಕರಗ್ರಂಥವೂ ಆಗಬಲ್ಲದು. ಇಂತಹ ಪುಸ್ತಕವನ್ನು ಬರೆದ ಲೇಖಕರಿಗೂ ಹಾಗೂ ಪ್ರಕಟಿಸಿದ ನವಕರ್ನಾಟಕದವರಿಗೂ ನಾವು ಕೃತಜ್ಞರಾಗಿರಬೇಕಾಗಿದೆ.

**ಡಾ॥ ನಾ. ಸೋಮೇಶ್ವರ**
ನಂ. ೩/ಕೆ. ೧೮೬, 'ಜನನಿ', ೪೦೭ ಎಸ್ ಎಫ್ ಎಸ್, ೨ನೇ ಮೈನ್
೩ನೇ ಅಡ್ಡರಸ್ತೆ, ಯಲಹಂಕ ನ್ಯೂ ಟೌನ್, ಜಕ್ಕೂರ್ ಫೋನ್,
ಬೆಂಗಳೂರು - ೫೬೦ ೦೬೪





# ಜೀನ್ ಸಂಶೋಧನೆಯ ಹೊಸ ಆವಿಷ್ಕಾರಗಳು

ಜಿ. ಎಸ್. ಜಯದೇವ



ಹೊಸ ಸಹಸ್ರಮಾನದ ಇಂದಿನ ದಿನಗಳಲ್ಲಿ ಮಾಹಿತಿ ತಂತ್ರಜ್ಞಾನ ಅಸಾಧಾರಣ ಪ್ರಗತಿಯನ್ನು ಕಂಡಿದೆ. ಇದರ ಜೊತೆ ಜೊತೆಗೆ ನಾವು ಎಲ್ಲ ವೈಜ್ಞಾನಿಕ ವಲಯಗಳಲ್ಲೂ ಊಹಿಸಲಾರದಷ್ಟು ಪ್ರಗತಿ ಕಂಡಿದ್ದೇವೆ. ಹಾಗೆಯೇ ಜೀವವಿಜ್ಞಾನದ ವಿವಿಧ ಶಾಖೆಗಳಲ್ಲಿ ಹಿಂದೆಂದೂ ಕಂಡರಿಯದ ಪ್ರಗತಿಯನ್ನು ಸಾಧಿಸಿದ್ದೇವೆ. ಜೀನ್ ಸಂಶೋಧನೆಯಲ್ಲಿ ನಾವು ಸಾಧಿಸಿರುವ ಪ್ರಗತಿ ಮತ್ತು ಅದರ ವೈದ್ಯಕೀಯ ಹಾಗೂ ಸಾಮಾಜಿಕ ಪರಿಣಾಮಗಳನ್ನು ಅರಿಯೋಣ. ಹಾಗೆಯೇ ಈ ಸಂಶೋಧನೆ ನಡೆದುಬಂದ ದಾರಿಯನ್ನು ಪರಿಶೀಲಿಸೋಣ.

ಪ್ರಕೃತಿಯಲ್ಲಿ ಪ್ರತಿಯೊಂದು ಜೀವಿಯೂ ತನ್ನಂತೆಯೇ ಇರುವ ಜೀವಿಗಳನ್ನು ಸೃಷ್ಟಿಸುತ್ತದೆ. ಹೊಸ ಪೀಳಿಗೆಯ ಈ ಜೀವಿಗಳು ತಮ್ಮ ಮಾತಾಪಿತೃಗಳಂತೆಯೇ ಇದ್ದರೂ ಸಹ ಅಲ್ಪಸ್ವಲ್ಪ ವೈವಿಧ್ಯತೆಯನ್ನು ತೋರುತ್ತವೆ. ಈ ವೈವಿಧ್ಯತೆಯ ಉಪಯೋಗ ಪಡೆದುಕೊಳ್ಳಲು ಮನುಷ್ಯ ಬಹಳ ಕಾಲದಿಂದ ಅವುಗಳನ್ನು ಸಂಕರಿಸುವ ಕಲೆಯನ್ನು ಬೆಳೆಸಿಕೊಂಡಿದ್ದಾನೆ. ಉದಾಹರಣೆಗೆ, ನಾಲ್ಕು ಸಾವಿರ ವರ್ಷಗಳ ಹಿಂದೆಯೇ ಬ್ಯಾಬಿಲೋನಿಯಾದ ಜನರು ಉತ್ತಮ ತಳಿಯ ಕುದುರೆಯನ್ನು ತಯಾರಿಸಲು ಪ್ರಯತ್ನಿಸಿದರು. ಉತ್ಖನನದಲ್ಲಿ ದೊರೆತ ಕಲ್ಲಿನ ಚಪ್ಪಡಿಯ ಮೇಲೆ ತಮ್ಮ ಪ್ರಯತ್ನದ ಫಲವಾಗಿ ಹುಟ್ಟಿದ ಅನೇಕ ಪೀಳಿಗೆಗಳ ಕುದುರೆಗಳ ಚಿತ್ರವನ್ನು ಕೆತ್ತಿದ್ದಾರೆ. ಹಾಗೆಯೇ ಬಹಳ ಹಿಂದಿನಿಂದಲೂ ಮಾನವ ತನಗೆ ಉಪಯೋಗವಾಗುವ ಹಸುಗಳ ತಳಿಗಳನ್ನು, ವ್ಯವಸಾಯದ ಬೆಳೆಗಳ ತಳಿಗಳನ್ನು ಉದ್ದೇಶಪೂರ್ವಕವಾಗಿ ಸಂಕರಿಸಿ ತಯಾರಿಸಿದ್ದಾನೆ.

ಅನುವಂಶೀಯ ಗುಣಗಳು ಪೀಳಿಗೆಯಿಂದ ಪೀಳಿಗೆಗೆ ವರ್ಗಾವಣೆಯಾಗುತ್ತವೆಂದು ಖಚಿತವಾಗಿ ತಿಳಿದಿದ್ದರೂ ಈ ವಂಶವಾಹಿಗಳು ಯಾವುವು, ಅವು ಸಂತಾನೋತ್ಪತ್ತಿಯ ಸಮಯದಲ್ಲಿ ಹೇಗೆ ವರ್ಗಾವಣೆಯಾಗುತ್ತವೆ ಎಂಬಿತ್ಯಾದಿ ವಿವರಗಳು ಮನುಷ್ಯನಿಗೆ ಬಹಳ ಕಾಲ ತಿಳಿದಿರಲಿಲ್ಲ. ಅರಿಸ್ಟಾಟಲ್‌ನಿಂದ ಹಿಡಿದು ಡಾರ್ವಿನ್‌ವರೆಗೆ ಕೇವಲ ಊಹೆಗಳಿಂದ ಮಾತ್ರ ತೃಪ್ತಿ ಪಡಬೇಕಾಯಿತು. ಅರಿಸ್ಟಾಟಲ್ ಅಂತೂ ಗಂಡು ಉತ್ಪತ್ತಿ ಮಾಡುವ ವೀರ್ಯವೇ ಪ್ರಧಾನವೆಂದು ಈ ಅನುವಂಶೀಯ ಪ್ರಕ್ರಿಯೆಯಲ್ಲಿ ಹೆಣ್ಣಿನ ಪಾತ್ರವನ್ನು ಗೌಣವಾಗಿ ಎಣಿಸಿದನು. ಹತ್ತೊಂಬತ್ತನೆಯ ಶತಮಾನದ ಮೊದಲ ಭಾಗದಲ್ಲಿ ಮೆಂಡಲ್ ಮಹಾಶಯನು ಬಟಾಣಿ ಗಿಡಗಳಲ್ಲಿ ಕಂಡುಬರುವ ಅನುವಂಶೀಯ ಗುಣಗಳ ಚಲನೆಯ ಆಧಾರದ ಮೇಲೆ ಕೆಲವು ಗಮನಾರ್ಹ ಅನುವಂಶೀಯ ಸೂತ್ರಗಳನ್ನು ಕಂಡುಹಿಡಿದನು. ಈ ಸೂತ್ರಗಳು ಇಂದಿಗೂ ಪ್ರಸ್ತುತವಾಗಿವೆ. ಆದ್ದರಿಂದ ಮೆಂಡಲ್‌ನನ್ನು 'ತಳಿಶಾಸ್ತ್ರದ ಪಿತಾಮಹ'ನೆಂದು ಕರೆಯುತ್ತೇವೆ.

ಇಷ್ಟಾದರೂ ಅನುವಂಶೀಯತೆಗೆ ಕಾರಣವಾದ ವಸ್ತು ಯಾವುದು ? ಅದು ದ್ರವರೂಪದಲ್ಲಿದೆಯೋ ಅಥವಾ ಘನ ರೂಪದಲ್ಲಿದೆಯೋ ಎಂಬಿವೇ ಪ್ರಶ್ನೆಗಳಿಗೆ ಉತ್ತರ ಸಿಗಲಿಲ್ಲ. 'ಜೆನಿಟಿಕ್ಸ್' ಎಂಬ ಪದವನ್ನು ವಿಲಿಯಂ ಬೇಟ್‌ಸನ್ ೨೦ನೇ ಶತಮಾನದ ಆದಿಭಾಗದಲ್ಲಿ ಬಳಕೆಗೆ ತಂದನು. ಸುಮಾರು ಇದೇ ಸಮಯದಲ್ಲಿ ಜೋಹಾನ್‌ಸನ್ ಎಂಬ ತಳಿಶಾಸ್ತ್ರಜ್ಞ 'ಜೀನ್' ಎಂಬ ಪದವನ್ನು ಹುಟ್ಟುಹಾಕಿದನು. ಆದರೆ ಜೀನುಗಳು ಕ್ರೋಮೊಸೋಮುಗಳಲ್ಲಿ ಕಂಡುಬರುವ ನಿಯಮಿತ ಸ್ಥಾನವನ್ನು ಆಕ್ರಮಿಸುವ ಸ್ಪಷ್ಟವಾದ ವಸ್ತುಗಳೆಂದು ನಮಗೆ ಗೊತ್ತಾಗಿದ್ದು ಮಾರ್ಗನ್ ಮಹಾಶಯನಿಂದ. ಇವನ ಪೂರ್ಣ ಹೆಸರು ಥಾಮಸ್ ಹಂಟ್ ಮಾರ್ಗನ್ ಎಂದು. ಇವನ ಶಿಷ್ಯರಾದ ಮುಲ್ಲರ್ ಮತ್ತು ಬ್ರಿಡ್ಜಸ್, ಡ್ರಾಸೋ ಫೈಲಾ ಅಥವಾ ಹೆಣ್ಣು ನೊಣಗಳ ಮೇಲೆ ಸಂಶೋಧನೆ ನಡೆಸಿ ಅನುವಂಶೀಯ ಪ್ರಕ್ರಿಯೆಯ ಮೇಲೆ ಹೊಸಬೆಳಕು ಚೆಲ್ಲಿದರು.

ಇಂದು 'ಜೀನ್' ಪದವನ್ನು ಕೇಳದವರೇ ಇಲ್ಲ. ಪ್ರಾಥಮಿಕ ಶಾಲೆಗಳಲ್ಲೇ ಜೀನ್‌ಗಳನ್ನು ಪರಿಚಯಿಸಲಾಗಿದೆ. ಜೀನ್‌ಗಳು ಡಿ.ಎನ್.ಎ. ಅಥವಾ ಡಿ ಆಕ್ಸಿ ರೈಬೋಸ್ ನ್ಯೂಕ್ಲಿಕ್ ಆಮ್ಲ ಎಂಬ ರಾಸಾಯನಿಕ ವಸ್ತುವಿನಿಂದ ಆಗಿವೆ. ಇದೊಂದು ದೊಡ್ಡದಾದ ಸರಪಳಿ ಅಣು. ೧೯೫೩ರಲ್ಲಿ ವ್ಯಾಟ್‌ಸನ್ ಮತ್ತು ಕ್ರಿಕ್ ಎಂಬ ಇಬ್ಬರು ವಿಜ್ಞಾನಿಗಳು ಇದರ ರಚನೆಯ ರಹಸ್ಯವನ್ನು ಭೇದಿಸಿದ್ದು ಒಂದು ರೋಚಕ ಕಥೆ. ಏಣಿಯಂತೆ ರಚನೆಗೊಂಡಿರುವ ಈ ಅಣು ತನ್ನ ಅಕ್ಷದ ಸುತ್ತ ಬಲಮುಖವಾಗಿ ತಿರುಚಿಕೊಂಡಿದೆ. ಇದರ ರಚನೆಯನ್ನು ಭೇದಿಸಿದ್ದೇ ತಡ, ಈವರೆಗೆ ಅಸ್ಪಷ್ಟವಾಗಿದ್ದ ಎಲ್ಲ ಸಂಶೋಧನಾ ಮಾಹಿತಿಗಳಿಗೂ ಇದ್ದ ಅನ್ಯೋನ್ಯ ಸಂಬಂಧ ಒಂದೇ ಬಾರಿಗೆ ಸ್ಪಷ್ಟವಾದ ಅರ್ಥ ಪಡೆದುಕೊಂಡಿತು. ಹಾಗೆಯೇ ರಹಸ್ಯವಾಗಿದ್ದ ಅನುವಂಶೀಯ ಭಾಷೆಯ ಮೂಲತತ್ವವೂ ತಿಳಿದುಬಿಟ್ಟಿತು. ಡಿ.ಎನ್.ಎ. ಸರಪಳಿಯಲ್ಲಿ ನಾಲ್ಕು ಬಗೆಯ ಪ್ರತ್ಯಾಮ್ಲೀಯ ಅಣುಗಳಿವೆ. ಇವು ಅಡಿನೈನ್, ಥಯಮಿನ್, ಸೈಟಾಸಿಸ್ ಮತ್ತು ಗುಅನಿನ್. ಈ ಅಣುಗಳ ಕ್ರಮಬದ್ಧ ಸರಣಿ ಜೋಡಣೆಯೆ ಅನುವಂಶೀಯ ರಹಸ್ಯ ಭಾಷೆ. ಈ ನಾಲ್ಕು ಅಣುಗಳನ್ನು ಈ ರಹಸ್ಯಭಾಷೆಯ ಅಕ್ಷರಗಳೆಂದು ಭಾವಿಸಬಹುದು. ಈ ನಾಲ್ಕು ಅಕ್ಷರಗಳಲ್ಲೇ ಹುಟ್ಟುವ ಮೂರು ಅಕ್ಷರಗಳ ವಿಶಿಷ್ಟ ಸರಪಣಿ ಪದಗಳಿಂದ ಸಮಸ್ತ ಜೀವರಾಶಿಯ ವೈವಿಧ್ಯತೆಯನ್ನು ಬರೆಯಬಹುದು. ಇದನ್ನೇ 'ಜೆನೆಟಿಕ್ ಕೋಡ್' ಎನ್ನುತ್ತಾರೆ. ಇದರ ಆಧಾರದ ಮೇಲೆ ವಿಶಿಷ್ಟವಾದ ಪ್ರೋಟೀನ್‌ಗಳು ಉತ್ಪತ್ತಿಯಾಗುತ್ತವೆ. ಈ ಪ್ರೋಟೀನುಗಳಿಂದಲೇ ವಿವಿಧ ಜೀವ-ಜಂತುಗಳ ವಿಶಿಷ್ಟ ಜೀವಕೋಶಗಳುಂಟಾಗಿ ಬ್ಯಾಕ್ಟೀರಿಯಾಗಳಿಂದ ಹಿಡಿದು ತಿಮಿಂಗಿಲಗಳವರೆಗೆ ಜೀವ ವೈವಿಧ್ಯತೆ ಉಂಟಾಗಿದೆ.

ಸೃಷ್ಟಿಯ ಇಷ್ಟೊಂದು ರಹಸ್ಯಗಳೆಲ್ಲ ತಿಳಿದಮೇಲೆ ಮನುಷ್ಯ ಸುಮ್ಮನಿರುತ್ತಾನೇನು ? ತನ್ನದೇ ಆದ ವಿಶ್ವಾಮಿತ್ರ ಸೃಷ್ಟಿಯ ಪ್ರಯತ್ನ ನಡೆಸಿದ್ದಾನೆ. ಮೊದಮೊದಲು ಕೃತಕ ಸಂಕರದಿಂದ ತನಗೆ ಉಪಯೋಗವಾಗುವ ಹೊಸ ಜೀವ ಜಾತಿಗಳನ್ನು ಸೃಷ್ಟಿಸಲು ಪ್ರಯತ್ನಿಸಿದ. ಉದಾಹರಣೆಗೆ, ಕತ್ತೆ ಮತ್ತು ಕುದುರೆಗಳ ನಡುವೆ ಕೃತಕವಾಗಿ ಸಂತಾನೋತ್ಪತ್ತಿ ನಡೆಯುವಂತೆ

**ಮನುಷ್ಯನ ಅನೇಕ ಆರೋಗ್ಯ ಸಮಸ್ಯೆಗಳಿಗೆ ಈ ಜೀನ್ ತಂತ್ರಜ್ಞಾನ ಒಂದು ವರವೇ ಸರಿ. ಮನುಷ್ಯನಿಗೆ ಬರುವ ಸುಮಾರು ಮೂರು ಸಾವಿರ ಬಗೆಯ ಕಾಯಿಲೆಗಳು ಅನುವಂಶೀಯವಾಗಿ ಬಂದ ವಿಕೃತ ಜೀನುಗಳಿಂದುಂಟಾಗುತ್ತವೆ. ಈ ವಿಕೃತ ಜೀನುಗಳು ಸಮರ್ಪಕವಾದ ಕಿಣ್ವಗಳನ್ನು ತಯಾರಿಸುವುದಿಲ್ಲ. ಇದು ರೋಗಕ್ಕೆ ಕಾರಣವಾಗಿದೆ. ಆದರೆ ಹೊಸ ಜೀನ್ ತಂತ್ರಜ್ಞಾನದಿಂದ ನಾವು ನಮಗೆ ಬೇಕಾದ ಪ್ರೋಟೀನುಗಳನ್ನು ಅಥವಾ ಹಾರ್ಮೋನುಗಳನ್ನು ತಯಾರಿಸಬಹುದು. ಉದಾಹರಣೆಗೆ, ನಮಗೆ ಬರುವ ಡಯಾಬಿಟಿಸ್‌ಗೆ ಇನ್‌ಸುಲಿನ್ ಕೊರತೆಯೇ ಕಾರಣ. ಇನ್‌ಸುಲಿನ್ ಒಂದು ವಿಶಿಷ್ಟವಾದ ಪ್ರೋಟೀನ್. ಈ ಪ್ರೋಟೀನ್‌ಅನ್ನು ಉತ್ಪಾದಿಸುವ ಜೀನನ್ನು ಬ್ಯಾಕ್ಟೀರಿಯಾದೊಳಗೆ ಸೇರಿಸಿ ಈ ಬ್ಯಾಕ್ಟೀರಿಯಾಗಳನ್ನು ಯಥೇಚ್ಛವಾಗಿ ಬೆಳೆಸಿ ಅವುಗಳಿಂದ ಇನ್‌ಸುಲಿನ್‌ಅನ್ನು ಪಡೆಯಲಾಗುತ್ತಿದೆ.**

ಮಾಡಿ ಹೇಸರಗತ್ತೆಯನ್ನು ಸೃಷ್ಟಿಸಿದ. ಹಿಂದೆ ಕಾರ್ಪಚೆಂಕೊ ಎಂಬ ವಿಜ್ಞಾನಿ ಮೂಲಂಗಿ ಮತ್ತು ಕೋಸಿನ ನಡುವೆ ಕೃತಕ ಪರಾಗಸ್ಪರ್ಶ ಮಾಡಿಸಿದ. ಈ ಎರಡೂ ಹತ್ತಿರದ ಜಾತಿಯ ಸಸ್ಯಗಳಾದ್ದರಿಂದ ಪರಾಗಸ್ಪರ್ಶ ಸಾಧ್ಯವಾಗಿ ಬೀಜಗಳು ಹುಟ್ಟಿದವು. ಇವನ ಉದ್ದೇಶ ಈ ಹೊಸ ಗಿಡ ಕೆಳಗೆ ಮೂಲಂಗಿ, ಮೇಲೆ ಕೋಸು ಬಿಡಲಿ ಎಂಬುದಾಗಿತ್ತು. ಆದರೆ ಈ ಹೊಸಜಾತಿ ಗಿಡ ಎರಡನ್ನೂ ಬಿಡಲಿಲ್ಲ. ಈ ಬಗೆಯ ಪ್ರಯತ್ನಗಳಲ್ಲಿ ಮುಂಬರುವ ಪ್ರಯೋಗ ಪರಿಣಾಮಗಳ ಬಗ್ಗೆ ಯಾವುದೇ ಹಿಡಿತ ಇರಲಿಲ್ಲ. ಆದರೆ ಇಂದು ಜೀನ್ ಸಂಶೋಧನೆ ಎಷ್ಟು ಮುಂದುವರೆದಿದೆ ಎಂದರೆ ನಮಗೆ ಬೇಕಾದ ಜೀನನ್ನು, ಅದು ಯಾವುದೇ ಜೀವಿಯಲ್ಲಿರಲಿ ಅದನ್ನು ತೆಗೆದು ಮತ್ತಾವುದೋ ಜೀವಿಯ ಅನುವಂಶೀಯ ವ್ಯವಸ್ಥೆಗೆ ಸೇರಿಸಿಬಿಡಬಹುದು. ಹೀಗೆಂದ ಮಾತ್ರಕ್ಕೆ ಎಲ್ಲವೂ ಸಾಧ್ಯವಾಗಿದೆ ಎಂದೇನಲ್ಲ. ಆದರೆ ಈ ರೀತಿ ಜೀನುಗಳನ್ನು ಒಂದು ಜೀವಿಯಿಂದ ತೆಗೆದು ಮತ್ತೊಂದು ಜೀವಿಗೆ ಸೇರಿಸುವ ತಂತ್ರಜ್ಞಾನದಲ್ಲಿ ನಾವು ಸಾಕಷ್ಟು ಪರಿಣತಿಯನ್ನು ಪಡೆದಿದ್ದೇವೆ. ಇದೇ ಗತಿಯಲ್ಲಿ ಸಂಶೋಧನೆ ಮುಂದುವರಿದರೆ ನಾವು ಚಹಾಕ್ಕೆ ಚಮಚದಿಂದ ಸಕ್ಕರೆ ಹಾಕುವಷ್ಟು ಸರಳವಾಗಿ ಜೀನ್‌ಗಳನ್ನು ಒಂದು ಜೀವಿಯಿಂದ ಮತ್ತೊಂದು ಜೀವಿಗೆ ವರ್ಗಾಯಿಸ ಬಹುದೆಂದು ತೋರುತ್ತದೆ. ಇದನ್ನು ಜೆನಿಟಿಕ್ ಎಂಜಿನಿಯರಿಂಗ್ ಎನ್ನುತ್ತಾರೆ. ಜೆನಿಟಿಕ್ ಎಂಜಿನಿಯರಿಂಗ್ ತಂತ್ರಜ್ಞಾನವನ್ನು ಮನುಷ್ಯ ತನ್ನ ಲಾಭಕ್ಕಾಗಿ ಬಳಸುತ್ತಿದ್ದಾನೆ. ೧೯೪೦ರಲ್ಲಿ ಬಾರ್ಬರ ಮ್ಯಾಕ್ ಕ್ಲಿಂಟಾಕ್ ಎಂಬ ಅಮೆರಿಕಾದ ತಳಿಶಾಸ್ತ್ರಜ್ಞೆ ಮೆಕ್ಕೆಜೋಳದಲ್ಲಿ 'ಚಲಿಸುವ ಜೀನ್' ಅಥವಾ 'ನೆಗೆಯುವ ಜೀನ್'ಗಳನ್ನು ಕಂಡುಹಿಡಿದಳು. ಆಕೆಯ ಸಂಶೋಧನೆಯ ಮಹತ್ವವನ್ನು ಗುರುತಿಸಲು ಬಹಳ ಕಾಲವೇ ಹಿಡಿಯಿತು. ಕೊನೆಗೆ ೧೯೮೩ರಲ್ಲಿ ಆಕೆಗೆ ನೊಬೆಲ್ ಪ್ರಶಸ್ತಿ ದೊರೆಯಿತು. ಇವುಗಳನ್ನು ಟ್ರಾನ್ಸ್‌ಪೋಸಾನ್‌ಗಳು ಎನ್ನುತ್ತೇವೆ. ಈ ಡಿ.ಎನ್.ಎ. ಅಣುಗಳು ಒಂದೇ ಜೀವಕೋಶದಲ್ಲಿ ಆಗಾಗ ತನ್ನ ಸ್ಥಾನ ಬದಲಿಸುತ್ತದೆ. ಹೀಗೆ ಚಲಿಸಿದಾಗಲೆಲ್ಲ ಮ್ಯುಟೇಶನ್ ಅಥವಾ ವಿಕೃತಿಯನ್ನುಂಟುಮಾಡಬಹುದು ಅಥವಾ ಜೀನ್‌ಗಳ ಒಟ್ಟು ಮೊತ್ತವನ್ನು ಹೆಚ್ಚಿಸಬಹುದು. ಹಾಗೆಯೇ ಬ್ಯಾಕ್ಟೀರಿಯಾಗಳ ಟ್ರಾನ್ಸ್‌ಪೋಸಾನ್‌ಗಳು ಬ್ಯಾಕ್ಟೀರಿಯಾಗಳ (ಪ್ಲಾಸ್‌ಮಿಡ್)ಗಳಿಗೆ ಸೇರ್ಪಡೆಯಾಗಿ ಒಂದು ಬ್ಯಾಕ್ಟೀರಿಯಾದಿಂದ ಮತ್ತೊಂದು ಬ್ಯಾಕ್ಟೀರಿಯಾಕ್ಕೆ ಚಲಿಸಬಹುದು. ಪ್ಲಾಸ್‌ಮಿಡ್ ಗಳೆಂದರೆ ಬ್ಯಾಕ್ಟೀರಿಯಾಗಳಲ್ಲಿರುವ ಹೆಚ್ಚುವರಿ ಡಿ.ಎನ್.ಎ. ಹೀಗೆ ಜೀವಕೋಶದ ಒಳಗೇ ಸ್ಥಾನ ಬದಲಿಸುವ ಟ್ರಾನ್ಸ್‌ಪೋಸಾನ್‌ಗಳಿಂದ ಹಿಡಿದು ಜೀವಕೋಶದಿಂದ ಮತ್ತೊಂದು ಜೀವಕೋಶಕ್ಕೆ ವರ್ಗಾವಣೆಯಾಗುವ ಟ್ರಾನ್ಸ್‌ಪೋಸಾನ್‌ಗಳ ಬಗ್ಗೆ ಮೂಡಿದ ತಿಳುವಳಿಕೆ ಜೀನ್ ತಂತ್ರಜ್ಞಾನದ ಹೊಸ ಬಾಗಿಲನ್ನು ತೆರೆಯಿತು.

ರಿಸ್ಟ್ರಿಕ್ಷನ್ ಎನ್‌ಜೈಮ್‌ಗಳೆಂಬ ವಿಶೇಷ ಕಿಣ್ವಗಳ ಸಹಾಯದಿಂದ ಇಂದು ನಾವು ನಮಗೆ ಬೇಕಾದ ಜೀನ್‌ಗಳನ್ನು ಡಿ.ಎನ್.ಎ. ಅಣುವಿನಿಂದ ಕತ್ತರಿಸಿ ಹೊರತೆಗೆಯಬಹುದು. ನಂತರ ಇವುಗಳನ್ನು ನಮಗೆ ಬೇಕಾದ ಜೀವಕೋಶಕ್ಕೆ ಸೇರಿಸಬಹುದು. ಹೀಗೆ ಜೆನಿಟಿಕ್ ಎಂಜಿನಿಯರಿಂಗ್ ಮಾಡಲಾದ ಬ್ಯಾಕ್ಟೀರಿಯಾಗಳು ನಮ್ಮ ವೈದ್ಯಕೀಯ ಕ್ಷೇತ್ರದಲ್ಲಿ ಬಹಳ ಸಹಕಾರಿಯಾಗಿವೆ. ಹಾಗೆಯೇ ಔದ್ಯೋಗಿಕ ಕ್ಷೇತ್ರದಲ್ಲಿ ಇದರ ಬಳಕೆ ಯಥೇಚ್ಛವಾಗಿದೆ. ಉದಾಹರಣೆಗೆ, ಆನಂದ ಚಕ್ರವರ್ತಿ ಎಂಬ ಅಮೆರಿಕಾದ ವಿಜ್ಞಾನಿ ಮೂರು ಬಗೆಯ ಪ್ಲಾಸ್‌ಮಿಡ್‌ಗಳನ್ನು ಬೆಸೆದು ಅದನ್ನು ಸೂಡೊಮೊನಾಸ್ ಎಂಬ ಬ್ಯಾಕ್ಟೀರಿಯಾಕ್ಕೆ ಸೇರಿಸಿ ಬಿಟ್ಟರು. ಈ ಬ್ಯಾಕ್ಟೀರಿಯಾಗಳು ಯಥೇಚ್ಛವಾಗಿ ವಿಭಜನೆ ಹೊಂದಿ ಕಚ್ಚಾ ಪೆಟ್ರೋಲಿಯಂ ಎಣ್ಣೆಯನ್ನು ಜೀರ್ಣಿಸಿ ಹಾನಿರಹಿತವಾಗಿ ಮಾಡಬಲ್ಲವು. ಸಮುದ್ರದಲ್ಲಿ ಹಡಗುಗಳ ಅಪಘಾತದಿಂದ ಸೋರಿದ ಕಚ್ಚಾತೈಲವನ್ನು ನಾವು ಈ ಬ್ಯಾಕ್ಟೀರಿಯಾಗಳ ಸಹಾಯದಿಂದ ಸ್ವಚ್ಛ ಮಾಡಬಹುದು. ಇದೇ ಕ್ರಿಯೆಯನ್ನು ಯಂತ್ರಗಳಿಂದ ಮಾಡಲು ಹರಸಾಹಸ ಪಡಬೇಕಾದೀತು. ಇದಲ್ಲದೆ ಕೈಗಾರಿಕೆಗಳಿಗೆ ಬೇಕಾದ ರೆನಿನ್ ಮುಂತಾದ ಕಿಣ್ವಗಳನ್ನು ಸಹ ನಾವು ಜೆನಿಟಿಕ್ ಎಂಜಿನಿಯರ್ ಮಾಡಿದ ಬ್ಯಾಕ್ಟೀರಿಯಾಗಳಿಂದ ತಯಾರಿಸಬಹುದು.

ಮನುಷ್ಯನ ಅನೇಕ ಆರೋಗ್ಯ ಸಮಸ್ಯೆಗಳಿಗೆ ಈ ಜೀನ್ ತಂತ್ರಜ್ಞಾನ ಒಂದು ವರವೇ ಸರಿ. ಮನುಷ್ಯನಿಗೆ ಬರುವ ಸುಮಾರು ಮೂರು ಸಾವಿರ ಬಗೆಯ ಕಾಯಿಲೆಗಳು ಅನುವಂಶೀಯವಾಗಿ ಬಂದ ವಿಕೃತ ಜೀನುಗಳಿಂದುಂಟಾಗುತ್ತವೆ. ಈ ವಿಕೃತ ಜೀನುಗಳು ಸಮರ್ಪಕವಾದ ಕಿಣ್ವಗಳನ್ನು ತಯಾರಿಸುವುದಿಲ್ಲ. ಇದು ರೋಗಕ್ಕೆ ಕಾರಣವಾಗಿದೆ. ಆದರೆ ಹೊಸ ಜೀನ್ ತಂತ್ರಜ್ಞಾನದಿಂದ ನಾವು ನಮಗೆ ಬೇಕಾದ ಪ್ರೋಟೀನುಗಳನ್ನು ಅಥವಾ ಹಾರ್ಮೋನುಗಳನ್ನು ತಯಾರಿಸಬಹುದು. ಉದಾಹರಣೆಗೆ, ನಮಗೆ ಬರುವ ಡಯಾಬಿಟಿಸ್‌ಗೆ ಇನ್‌ಸುಲಿನ್ ಕೊರತೆಯೇ ಕಾರಣ. ಇನ್‌ಸುಲಿನ್ ಒಂದು ವಿಶಿಷ್ಟವಾದ ಪ್ರೋಟೀನ್. ಈ ಪ್ರೋಟೀನ್‌ಅನ್ನು ಉತ್ಪಾದಿಸುವ ಜೀನನ್ನು ಬ್ಯಾಕ್ಟೀರಿಯಾದೊಳಗೆ ಸೇರಿಸಿ ಈ ಬ್ಯಾಕ್ಟೀರಿಯಾಗಳನ್ನು ಯಥೇಚ್ಛವಾಗಿ ಬೆಳೆಸಿ ಅವುಗಳಿಂದ ಇನ್‌ಸುಲಿನ್‌ಅನ್ನು ಪಡೆಯಲಾಗುತ್ತಿದೆ. ಹಾಗೆಯೇ ಮನುಷ್ಯನ ಬೆಳವಣಿಗೆಯನ್ನು ನಿಯಂತ್ರಿಸುವ 'ಹ್ಯೂಮನ್ ಗ್ರೋತ್ ಹಾರ್ಮೋನ್' ಅಥವಾ ಎಚ್.ಜಿ.ಎಚ್.ನ ಕೊರತೆಯಿಂದ ಬೆಳವಣಿಗೆ ಕುಂಠಿತ ವಾಗುತ್ತದೆ. ಎಚ್.ಜಿ.ಎಚ್. ನಮ್ಮ ಮೆದುಳಿನ ಬಳಿ ಇರುವ ಪಿಟ್ಯುಟರಿ ಗ್ರಂಥಿಯಲ್ಲಿ ಉತ್ಪತ್ತಿ ಯಾಗುತ್ತದೆ. ಈ ಕೊರತೆಯನ್ನು ನೀಗಿಸಲು ಸಂಬಂಧಪಟ್ಟ ಜೀನನ್ನು ಬ್ಯಾಕ್ಟೀರಿಯಾಕ್ಕೆ ಸೇರಿಸಿ ಈ ಬ್ಯಾಕ್ಟೀರಿಯಾಗಳಿಂದ ಹಾರ್ಮೋನ್‌ಅನ್ನು ಪಡೆಯಲಾಗುತ್ತಿದೆ. ಇಂದು ವಿಜ್ಞಾನಿಗಳು ಇ-ಕೋಲೈ ಬ್ಯಾಕ್ಟೀರಿಯಾಗಳನ್ನು ಎಚ್.ಜಿ.ಎಚ್. ಉತ್ಪತ್ತಿ ಮಾಡಲು ಬಳಸುತ್ತಿದ್ದಾರೆ.

ಜೀನ್ ತಂತ್ರಜ್ಞಾನ ಮುಂದುವರೆದಂತೆ 'ಜೀನ್ ಥೆರಪಿ' ಎಂಬ ಹೊಸ ವೈದ್ಯಕೀಯ ಅಧ್ಯಾಯ ಪ್ರಾರಂಭವಾಗುತ್ತಿದೆ. ಉದಾಹರಣೆಗೆ, ಪಾರ್ಕಿನ್‌ಸನ್ ಎಂಬ ನರರೋಗದ ಕಾಯಿಲೆಗೆ ಮೆದುಳಿನಲ್ಲಿ ಅಸಮರ್ಪಕವಾಗಿ ರಾಸಾಯನಿಕಗಳು ಉತ್ಪತ್ತಿಯಾಗುವುದೇ ಕಾರಣ. ಇದನ್ನು ಸರಿಪಡಿಸಲು ಸಂಬಂಧಪಟ್ಟ ಆರೋಗ್ಯವಂತ ಜೀನುಗಳನ್ನೇ ಮೆದುಳಿಗೆ ನೇರವಾಗಿ ತುಂಬಲು ವಿಜ್ಞಾನಿಗಳು ಪ್ರಯತ್ನಿಸಿದ್ದಾರೆ. ಲಾಸ್ ಎಂಜೆಲಿಸ್‌ನ ಸಂಶೋಧಕರ ತಂಡ ಪಾಲಿಎಥಿಲಿನ್ ಗ್ಲೈಕಾಲ್ ಎಂಬ ರಾಸಾಯನಿಕದೊಡನೆ ಜೀನನ್ನೂ ಬೆಸೆದು ಮೆದುಳಿನ ಜೀವಕೋಶಗಳಿಗೆ ಸೇರಿಸುವಲ್ಲಿ ಸ್ವಲ್ಪ ಮಟ್ಟಿಗೆ ಸಫಲರಾಗಿದ್ದಾರೆ. ಆದರೂ ಈ ದಿಕ್ಕಿನಲ್ಲಿ ಹೆಚ್ಚಿನ ಸಂಶೋಧನೆಗಳ ಅಗತ್ಯವಿದೆ. ಇಲಿಗಳ ಸಿಕಲ್‌ಸೆಲ್ ರೋಗವನ್ನೂ ಜೀನ್‌ಥೆರಪಿಯಿಂದ ಸಮರ್ಪಕವಾಗಿ ನಿವಾರಿಸಲಾಗಿದೆ.

ಜೀನ್ ತಂತ್ರಜ್ಞಾನದಿಂದ ಅನೇಕ ಉಪಯೋಗಗಳನ್ನು ಮಾನವ ಕಂಡುಕೊಳ್ಳುತ್ತಿರುವ ಈ ಸಮಯದಲ್ಲೇ ನಮಗೆ ಎಚ್.ಐ.ವಿ. ಪಿಡುಗು ಎದುರಾಗಿದೆ. ಇದು ಪ್ರಕೃತಿ ಸ್ವಾಭಾವಿಕವಾಗಿ ತನ್ನ ಜೀನ್ ತಂತ್ರವನ್ನು ಮನುಷ್ಯನ ಮೇಲೆ ಪ್ರಯೋಗಿಸಿದಂತಿದೆ. ಎಚ್.ಐ.ವಿ.ಯನ್ನು ಉಂಟುಮಾಡುವ ವೈರಸ್‌ಅನ್ನು ರೆಟ್ರೊವೈರಸ್ ಎನ್ನುತ್ತೇವೆ. ಇದು ಆರ್.ಎನ್.ಎ. ಅಥವಾ ರೈಬೊಸ್ ನ್ಯೂಕ್ಲಿಕ್ ಆಮ್ಲವನ್ನು ಹೊಂದಿದೆ. ಡಿ.ಎನ್.ಎ. ದ್ವಿಸರಪಳಿಯಾದರೆ ಆರ್.ಎನ್.ಎ. ಏಕಸರಪಳಿ ಅಣು. ಈ ಆರ್.ಎನ್.ಎ. ತನ್ನಲ್ಲಿ ಸಂಗ್ರಹವಾಗಿರುವ ಜೀನ್ ಪರಿಭಾಷೆಯ ಆಧಾರದ ಮೇಲೆ ದ್ವಿಸರಪಳಿಯ ಡಿ.ಎನ್.ಎ.ಯನ್ನು ತಯಾರಿಸಿ ತನ್ನ ಆತಿಥೇಯ ಜೀವಕೋಶದೊಳಗೆ ಸೇರಿಸಿಬಿಡುತ್ತದೆ. ಮನೆಯೊಡೆಯನೇ ಕಳ್ಳನಾದರೆ ಹಿಡಿಯುವುದು ಹೇಗೆ ಎಂಬಂತೆ ಈ ಎಚ್.ಐ.ವಿ. ಸಮಸ್ಯೆಯನ್ನು ಪರಿಹರಿಸಲು ಸಾಧ್ಯವಾಗಿಲ್ಲ. ಭಾರತ ದಂತಹ ನಿರಕ್ಷರಸ್ಥರನ್ನುಳ್ಳ ವಿಪರೀತ ಜನಸಂಖ್ಯೆಯನ್ನುಳ್ಳ ರಾಷ್ಟ್ರದಲ್ಲಿ ಎಚ್.ಐ.ವಿ. ಪಿಡುಗು ದಿನೇ ದಿನೇ ಹೆಚ್ಚುತ್ತಿರುವುದು ಆತಂಕಕಾರಿ. ಪ್ರಪಂಚದ ಅತ್ಯಧಿಕ ಎಚ್.ಐ.ವಿ. ಸೋಂಕು ತಗುಲಿದ ರಾಷ್ಟ್ರಗಳಲ್ಲಿ ಭಾರತ ಎರಡನೇ ಸ್ಥಾನ ಪಡೆದಿದೆ. ಇಂದು ಭಾರತದಲ್ಲಿ ನಾಲ್ಕು ಮಿಲಿಯನ್ ಎಂದರೆ ೪೦ ಲಕ್ಷ ಜನ ಎಚ್.ಐ.ವಿ. ಸೋಂಕಿನಿಂದ ಬಳಲುತ್ತಿದ್ದಾರೆ. ನಮ್ಮ ದೇಶದಲ್ಲಿ ಲಭ್ಯವಿರುವ ಚಿಕ್ಕಪುಟ್ಟ ತಂತ್ರಜ್ಞಾನವನ್ನೇ ನಾವು ದುರ್ಬಳಕೆ ಮಾಡುತ್ತಿದ್ದೇವೆ. ಗರ್ಭಸ್ಥ ಶಿಶುವಿನ ಲಿಂಗವನ್ನು ಗುರುತಿಸಿ ಹೆಣ್ಣು ಸಂತತಿಯನ್ನು ಮೊಟಕುಗೊಳಿಸುತ್ತಿದ್ದೇವೆ. ಹಾಗಾಗಿ ಗಂಡು-ಹೆಣ್ಣಿನ ಅನುಪಾತ ಪ್ರಪಂಚದ ಸರಾಸರಿಗೆ ಹೋಲಿಸಿದರೆ ವಿಪರೀತ ಏರುಪೇರಾಗಿರುವುದು ಕಾಣುತ್ತದೆ. ಸ್ವಾತಂತ್ರ್ಯಾನಂತರ ಕಾಣೆಯಾದ ೫೦ ಮಿಲಿಯ ಹೆಣ್ಣುಮಕ್ಕಳ ಬಗ್ಗೆ ನಾವು ಯಾವ ವಿವರಣೆ ನೀಡಲು ಸಾಧ್ಯ ?

ಅಂತರರಾಷ್ಟ್ರೀಯ ಮಟ್ಟದಲ್ಲೂ ಜೀನ್ ತಂತ್ರಜ್ಞಾನ ದುರ್ಬಳಕೆಯಾಗುವ ಸಾಧ್ಯತೆ ಇದೆ. ನಮ್ಮ ರೈತ ಸಮುದಾಯ ಇತ್ತೀಚೆಗೆ ಹತ್ತಿ ಬೀಜಗಳ ಬಗ್ಗೆ ನಡೆಸಿದ ಚಳುವಳಿ ನಮಗೆಲ್ಲಾ ನೆನಪಿದೆ.

ಜೀನ್ ಸಂಶೋಧನೆಯ ಕೊನೆಯ ಮತ್ತು ಅತ್ಯಂತ ಮಹತ್ವದ ಮೈಲಿಗಲ್ಲು ಎಂದರೆ 'ಹ್ಯೂಮನ್ ಜೀನೋಮ್ ಪ್ರಾಜೆಕ್ಟ್', ಎಂದರೆ ಮನುಷ್ಯನಲ್ಲಿರುವ ಸಮಸ್ತ ಜೀನುಗಳ ಜೆನಿಟಿಕ್ ಕೋಡ್‌ಅನ್ನು ಭೇದಿಸಿ ಅದರ ಮಾಹಿತಿಯನ್ನು ಸುರಕ್ಷಿತವಾಗಿಡುವುದು. ಇದಕ್ಕೆ ಡೇಟಾಬೇಸ್ ಎನ್ನುತ್ತಾರೆ. ಮನುಷ್ಯನಲ್ಲಿ ಸುಮಾರು ೨೦ರಿಂದ ೨೫ ಸಾವಿರ ಜೀನುಗಳಿವೆ. ಇವುಗಳ ಜೆನೆಟಿಕ್ ಕೋಡ್‌ಗಳನ್ನೆಲ್ಲ ಪಟ್ಟಿಮಾಡಲು ತಗಲುವ ಅಪಾರ ಹಣವನ್ನು ಅಮೆರಿಕಾದ ರಾಷ್ಟ್ರೀಯ ಆರೋಗ್ಯ ಮತ್ತು ಶಕ್ತಿ ಇಲಾಖೆ ಧನಸಹಾಯ ಒದಗಿಸಿತು. ವಿಜ್ಞಾನಿಗಳು ೧೯೯೦ರಲ್ಲಿ ಕೆಲಸ ಪ್ರಾರಂಭಿಸಿದರು. ಅಂದಾಜು ೧೫ ವರ್ಷಗಳ ಅವಧಿ ಬೇಕೆಂದು ಭಾವಿಸಿದ್ದರು. ಆದರೆ ಮಾಹಿತಿ ತಂತ್ರಜ್ಞಾನದ ಜೊತೆಗೆ, ಇತರೆಲ್ಲ ತಂತ್ರಜ್ಞಾನದ ಮುನ್ನಡೆಯಿಂದಾಗಿ ೧೩ ವರ್ಷಗಳಲ್ಲೇ ಈ ಬೃಹತ್ ಯೋಜನೆಯನ್ನು ಪೂರ್ಣಗೊಳಿಸ ಲಾಯಿತು. ಇದರ ಜೊತೆಗೆ ನಮ್ಮ ಮುಖ್ಯ ಆಹಾರದ ಬೆಳೆ ಭತ್ತದ ಜೀನ್‌ಗಳ ಜೆನಿಟಿಕ್ ಕೋಡ್ ಅನ್ನೂ ಸಹ ಪಟ್ಟಿ ಮಾಡಲಾಗಿದೆ.

ಈ ಎಲ್ಲ ತಂತ್ರಜ್ಞಾನವನ್ನೂ ಜವಾಬ್ದಾರಿಯುತವಾಗಿ ಬಳಸುವ ಹೊಣೆ ನಮ್ಮೆಲ್ಲರಿಗೂ ಸೇರಿದ್ದು, ಹೊಸ ತಂತ್ರಜ್ಞಾನಕ್ಕೆ ಅನುಗುಣವಾಗಿ ಹೊಸಬಗೆಯ ನೀತಿ ನಿಯಮಗಳು ಜಾರಿಗೆ ಬರಬೇಕಾದ್ದು ಅನಿವಾರ್ಯ. ಈ ಹೊಸ ತಂತ್ರಜ್ಞಾನ ಮಾನವನ ಪ್ರಗತಿಗೆ ಕಾರಣವಾಗಲಿ ಎಂದು ಹಾರೈಸೋಣ.

ಜಿ. ಎಸ್. ಜಯದೇವ
ದೀನಬಂಧು ಮಕ್ಕಳ ಮನೆ, ಅರಣ್ಯ ಇಲಾಖೆ ನರ್ಸರಿ ಹಿಂಭಾಗ, ಚಾಮರಾಜನಗರ - ೫೭೧ ೩೧೩




# ದೇವರು ಭೂಮಿಗೆ ಬಂದಿದ್ದ!!!

ಒಂದು ಸಲ ಮಾನವರ ವೇಷ ಧರಿಸಿ ದೇವರು ಭೂಮಿಗೆ ಬಂದಿಳಿದ. ಇಲ್ಲಿ ಎಲ್ಲ ಜೀವರಾಶಿಗಳು ಎಷ್ಟು ಸಂತೋಷದಿಂದಿದ್ದಾರೆ ಎಂದು ತಿಳಿದುಕೊಳ್ಳುವ ಆಶೆ ಅವನಿಗೆ. ಒಂದು ವಿಶಾಲ ಕೆರೆ ಕಂಡಿತು. ನಿಶ್ಚಲ ವಾತಾವರಣವಿತ್ತು. ಸುತ್ತಲೂ ಹಚ್ಚಹಸಿರು ಹಬ್ಬಿತ್ತು. ಹಕ್ಕಿಗಳ ಚಿಲಿಪಿಲಿ ನಾದ ಗುನುಗುತ್ತಿತ್ತು. ಮುಂಜಾನೆಯ ಹೊಂಬಿಸಿಲು ಹಿತವಾಗಿತ್ತು. ತಂಗಾಳಿ ನಿಧಾನವಾಗಿ ಸುಳಿಯುತ್ತಿತ್ತು. ಅಲ್ಲಿಯೇ ಒಂದು ಕಲ್ಲಿನ ಆಸನವಿತ್ತು. ಕುಳಿತು ನಿಸರ್ಗದ ಸವಿ ಸವಿಯುತ್ತಿದ್ದ.

ಅಷ್ಟರಲ್ಲಿ ಒಂದು ಚಿಟ್ಟೆ ಹಾರುತ್ತ ಹತ್ತಿರ ಬಂತು. ಹೂವಿನಿಂದ ಹೂವಿಗೆ ಹಾರುತ್ತಿತ್ತು. ಮಧು ಹೀರುತ್ತಿತ್ತು. ಅದೇಕೋ ಅದಕ್ಕೆ ಸಂಭ್ರಮವೋ ಸಂಭ್ರಮ. ದೇವರಿಗೆ ಮರುಕ ಹುಟ್ಟಿತು. ದೇವರು ಕೇಳಿದ, ''ಚಿಟ್ಟೆ ಚಿಟ್ಟೇ ಹೇಗಿದ್ದೀಯಾ ?'' ಚಿಟ್ಟೆ ಉಲ್ಲಾಸದಿಂದ ಉತ್ತರಿಸಿತು: ''ನನ್ನನ್ನು ನೋಡಿದರೆ ನಿನಗೇನನಿಸುತ್ತೆ? ನಾನು ಮಜವಾಗಿಯೇ ಇದ್ದೀನಿ ಅಲ್ಲವೇ ?'' ದೇವರೆಂದ, ಪಾಪ, ಈ ಚಿಟ್ಟೆಗೆ ಎರಡೇ ದಿನ ಬದುಕುವೆನೆಂದು ತಿಳಿದೂ ಇಷ್ಟೊಂದು ಸಂಭ್ರಮ ಪಡುತ್ತಿದೆಯಲ್ಲಾ!! ಎಂದು ಸುಮ್ಮನಾದ.

ಕೋಗಿಲೆಯ ಕೂಗು ಕೇಳಿತು. ಮೇಲೆ ನೋಡಿದ. ಒಂದು ಕೋಗಿಲೆ ಹಾಡುತ್ತ ಗಿಡದೊಂದು ಟೊಂಗೆಯ ಮೇಲೆ ಕುಳಿತಿತ್ತು. ತನ್ನದೇ ಆದ ಲೋಕದಲ್ಲಿ ಅದು ತನ್ಮಯವಾಗಿತ್ತು. ''ಕೋಗಿಲೆ, ನೀನು ಹೇಗಿದ್ದೀಯಾ ?'' ದೇವರು ಪ್ರಶ್ನಿಸಿದ. ''ಎಲೋ ಮಾನವ, ದೇವರು ನನಗೆ ಹಾಡುವ ಭಾಗ್ಯ ಕೊಟ್ಟಿದ್ದಾನೆ. ಹಾಯಾಗಿ ಹಾಡುತಾ ಆನಂದವಾಗಿದ್ದೀನಿ. ನಿನಗೆ ಕೇಳತಾ ಇಲ್ಲವಾ ?'' ಎಂಬ ಉತ್ತರ ಕೇಳಿ ದೇವರಿಗೆ ನಾಚಿಕೆಯಾದಂತಾಯಿತು. ತಲೆ ತಗ್ಗಿಸಿದ.

ನೀರು ತಿಳಿಯಾಗಿತ್ತು. ತಳದಲ್ಲಿಯ ಬಣ್ಣ ಬಣ್ಣದ ಕಲ್ಲಿನ ತುಣುಕುಗಳು ಸ್ಪಷ್ಟವಾಗಿ ಕಾಣುತ್ತಿದ್ದವು. ಮೀನೊಂದು ಈಜುತ್ತ ಮೇಲೆ ಬಂತು. ಕೆಳಗೆ ಹೋಯಿತು. ಮತ್ತೆ ಮೇಲೆ ಬಂತು. ಅದರ ಸಂತಸ ಕಂಡು ದೇವರು ಅದಕ್ಕೂ ಪ್ರಶ್ನೆ ಕೇಳಿಯೇ ಬಿಟ್ಟ. ''ಮೀನ, ಮೀನ ಹೇಗಿದ್ದೀಯಾ ?'' ಒಂದು ಕ್ಷಣ ಮೀನು ತನ್ನ ಚಲನೆಯನ್ನು ನಿಲ್ಲಿಸಿತು. ಕೆಳಗೆ ಓಡಿಹೋಗಿ ತಿರುಗಿ ಬಂದು ಉತ್ತರಿಸಿತು, ''ಅಯ್ಯಾ, ನಾನು ದೇವರಿಗೆ ಚಿರಋಣಿ, ನನಗೆ ಯಾವಾಗಲೂ ಈ ತಣ್ಣಗಿನ ನೀರಿನಲ್ಲಿಯೇ ಇರು ಎಂದು ಹೇಳಿ ಆತ ಪುಣ್ಯ ಕಟ್ಟಿಕೊಂಡಿದ್ದಾನೆ. ಬಿಸಿಲಿನ ಬಾಧೆ ಇಲ್ಲ, ಬಿರುಗಾಳಿಯ ಭಯವಿಲ್ಲ. ಹಾಯಾಗಿದ್ದೀನಿ. ನಿನಗೆ ಕಾಣತಾ ಇಲ್ಲವಾ ?'' ಎಂದು ಮರುಪ್ರಶ್ನೆ ತಿರುಗಿ ಬಂದಿತ್ತು.

ಅಷ್ಟರಲ್ಲಿ ಒಬ್ಬ ಮಾನವ ಅಲ್ಲಿಗೆ ಬಂದ. ಲಕ್ಷಣವಾದ ಮೈಕಟ್ಟು, ಆರೋಗ್ಯವಂತ. ಮೈಮೇಲಿನ ಬಟ್ಟೆಯಿಂದಲೇ ಅವನು ಸಾಕಷ್ಟು ಶ್ರೀಮಂತನೆಂದು ದೇವರಿಗೆ ಅರಿವಾಯಿತು. ಆದರೆ ಕ್ಷಣಾರ್ಧದಲ್ಲಿ ಚಿಟ್ಟೆ ದೂರ ಜಿಗಿಯಿತು. ಕೋಗಿಲೆ ಕೂಗು ನಿಲ್ಲಿಸಿ ಪುರ್ರೆಂದು ಹಾರಿತು. ಮೀನು ಭರಾಟೆಯಿಂದ ಈಜುತ್ತ ತಳ ಮುಟ್ಟಿತು. ಅದನ್ನು ಕಂಡ ದೇವರು ಒಂದು ಕ್ಷಣ ಆಶ್ಚರ್ಯಚಕಿತನಾದ. ಬಂದ ಮಾನವನಿಗೆ ಈ ಬದಲಾವಣೆಯ ಅರಿವಾಗದಿದ್ದುದನ್ನು ದೇವರು ಗಮನಿಸಿದ.

ದೇವರು ಸಹಜವಾಗಿ, ''ಅಯ್ಯಾ, ಹೇಗಿದ್ದೀಯಾ ? ಎಲ್ಲಾ ಸೌಖ್ಯ ತಾನೆ ?'' ಎಂದು ಲೋಕಾರೂಢವಾಗಿ ಪ್ರಶ್ನಿಸಿದ. ಅದಕ್ಕೆ ಆ ಮಾನವ ತಕ್ಷಣ, ''ಯಾಕಪ್ಪ, ನನ್ನ ಸುಖ ದುಃಖ ತಗೊಂಡು ನೀನೇನು ಮಾಡತೀಯಾ ? ನೀನೇನಾದರೂ ಸ್ವಲ್ಪ ಹಂಚಿಕೋತಿಯಾ ?'' ಎಂತೆಲ್ಲ ಮರುಪ್ರಶ್ನೆ ಹಾಕಿದ. ದೇವರು ಮುಗುಳ್ನಗುತ್ತ, ''ನಿನ್ನ ಕಷ್ಟ ಕಾರ್ಪಣ್ಯಗಳೇನಾದರೂ ಇದ್ದರೆ ಪ್ರಯತ್ನ ಮಾಡಬಹುದು'' ಅಂದ. ಹಾಗಾದರೆ ಕೇಳಪ್ಪಾ, ಹೇಳತೀನಿ ಅಂತ ಒಂದೇ ಉಸಿರಿನಲ್ಲಿ ಬಾಯಿಬಿಟ್ಟ.

''ನನಗೋ ಊರಲ್ಲಿ ಒಂದೇ ಮನೆ ಇದೆ. ಅದೂ ಮೂರೇ ಅಂತಸ್ತಿಂದು. ಬರೀ ನೂರೆಕರೆ ಮಾತ್ರ ಜಮೀನಿದೆ. ಸುಂದರವಾದ ಹೆಂಡತಿ ಇದ್ದರೂ ಅವಳ ತೂಕದಷ್ಟು ಬಂಗಾರ ಕೊಡಿಸಿದರೂ ಅವಳಿಗೆ ಸಮಾಧಾನವಿಲ್ಲ. ಇಬ್ಬರು ಗಂಡುಮಕ್ಕಳಿದ್ದರೂ ಒಬ್ಬರೂ ನನ್ನ ಹತ್ತಿರ ಇಲ್ಲ. ಒಬ್ಬ ಅಮೇರಿಕಾದಲ್ಲಿದ್ದಾನೆ. ಇನ್ನೊಬ್ಬ ದಿಲ್ಲಿಯಲ್ಲಿದ್ದಾನೆ. ಮಗಳಿಗೆ ಎಷ್ಟು ಹೊರಿಸಿ ಕಳಿಸಿದರೂ ಅವಳ ಗಂಡನ ಮನಿಯವರಿಗೆ ಸಾಕಾಗಿಲ್ಲ. ನಾನು ನಾಲ್ಕು ಸಲ ಎಮ್ಮೆಲ್ಲೇ ಆದರೂ ಮುಖ್ಯಮಂತ್ರಿ ಆಗಲಿಲ್ಲ, ಹೇಳಪಾ, ಈಗ ನೀನೇನಾದರೂ ನನ್ನನ್ನ ಮುಖ್ಯಮಂತ್ರಿ ಮಾಡತೀಯಾ ?...'' ಅಂತ ಇನ್ನೂ ಹೇಳತಾನೆ ಇದ್ದ.

ದೇವರು ಅಲ್ಲಿಂದ ಆಗಲೇ ಕಾಲುಕಿತ್ತಿದ್ದ. ಓಡೋದನ್ನ ಕಂಡು ಆ ಮಾನವ ಹಿಂದಿಂದ ಓಡತಾ ಓಡತಾ ಬರೋದು ದೇವರಿಗೆ ಕಂಡಿತು. ದೇವರು ಮನಸ್ಸಿನೊಳಗೆ ವಿಚಾರ ಮಾಡತಾ ಇದ್ದ. ಎರಡೇ ದಿನ ಜೀವ ಇರೋ ಆ ಚಿಟ್ಟೆ, ಮನೆ ಮಠ ಇಲ್ಲದೆ ಆನಂದದಿಂದ ಹಾಡಿ, ಹಾರಾಡಿ, ಹಾಯಾಗಿ ಜೀವನ ಮಾಡೋ ಆ ಕೋಗಿಲೆ, ನೀರಿನಲ್ಲೇ ಇರಬೇಕಾಗಿದ್ದ ಆ ಮೀನು, ಹೀಗೆ ನಿಸರ್ಗದಲ್ಲಿಯ ಅನೇಕ ಪ್ರಾಣಿ, ಪಕ್ಷಿ, ಜೀವ ಜಂತುಗಳನ್ನು ಕಂಡು ಪಾಠ ಕಲಿಯದ ಮಾನವರನ್ನು ಕಂಡು ಅಸಹ್ಯಪಡುವಂತಾಗಿದೆ ಎಂದು ಮರುಗಿದ. ಮಾನವರ ಕಣ್ಣಿಗೆ ಕಾಣದ ಹಾಗೆ ಅದೃಶ್ಯವಾಗಿರೋದೇ ಮೇಲು ಎಂದು ಮಾಯವಾದ.

**ಪ್ರೊ॥ ಆರ್. ಪಿ. ಪುನಗಿನ**
ಶ್ರೀ ಜಗದ್ಗುರು ಚಂದ್ರಶೇಖರನಾಥ ಸ್ವಾಮೀಜಿ ತಾಂತ್ರಿಕ ಮಹಾವಿದ್ಯಾಲಯ, ಚಿಕ್ಕಬಳ್ಳಾಪುರ

## ಸೂರ್ಯನ ಅಶ್ವಗಳು

ಸೂರ್ಯನ ಅಶ್ವಗಳು
ಸೂರ್ಯನಿಗಿಂತ ಬಲು ಧಿಮಾಕು

ಮಿರಿಮಿರಿ ಮಿಂಚುವ ಅಶ್ವಗಳು
ಹಿಗ್ಗಾಮುಗ್ಗಾ ಜಗ್ಗುತ ರಥವ
ಸೀಮೋಲ್ಲಂಘನೆ ಮಾಡುತ್ತಿವೆ

ಈ ಕ್ಷಣ ಸೂರ್ಯ ಎಚ್ಚರವಹಿಸಿದರೆ
ಎಲ್ಲ, ಸಪ್ತಾಶ್ವಗಳ ಗತಿಯನ್ನು
ಮೋಪಾಗಿ ನಿಯಂತ್ರಿಸಬಹುದು

ಮನಸೊ ಇಚ್ಛೆ ನಾಗಾಲೋಟದ
ಖುರಪುಟಧ್ವನಿ ದಶದಿಕ್ಕಿಗೂ ವ್ಯಾಪಿಸಿ
ತಲ್ಲಣಗೊಂಡಿದೆ ಮೂಜಗ

ಸೂರ್ಯನ ಆರಾಧಕರು ಗರಬಡಿದು
ಬರಿದೆ ಕೈಕಟ್ಟಿ ನಿಂತಿದ್ದಾರೆ.

ಉಮೇದಿನ ಅಶ್ವಗಳು
ಏನನ್ನ ತೊತ್ತಳ ತುಳಿಯುತ್ತವೊ
ಮತ್ತೇನನ್ನ ಧ್ವಂಸ ಮಾಡುತ್ತವೊ
ಬಲ್ಲವರಾರು

ಬರುವ ಸೂರ್ಯೋದಯದಿ
ಇಡೀ ಜಗದ ಜಂಘಾಬಲವೆ ಕುಸಿದು
ಅವುಗಳ ಸಾಹಸದ ನಿಗೂಢತೆಯನ್ನ
ಆದ ಅನಾಹುತವನ್ನ
ಈ ಲೋಕ ಗ್ರಹಿಸಬಹುದು.



ಮೂಲ : ಸತ್ಯನಾರಾಯಣ
ಭಾವಾನುವಾದ : ಕೆ. ನ. ಶಿವತೀರ್ಥನ್
೪೩, ಎಂ. ಬ್ಲಾಕ್, ಎರಡನೇ ಹಂತ, ಕುವೆಂಪು ನಗರ
ಮೈಸೂರು - ೨೩



ಮುನಿಯಮ್ಮ ಮತ್ತು ಸುಶೀಲಮ್ಮ

# 'ಸ್ತ್ರೀಶಕ್ತಿ'ಯೇ ಬಂಡವಾಳ

ನಗರಗಳ ಮಹಿಳೆಯರಂತೆ ಹಳ್ಳಿಯ ಮಹಿಳೆಯರಿಗೆ ಆಡಂಬರದ ಬಳೆ ಅಂಗಡಿ ಹುಡುಕಿಕೊಂಡು ಹೋಗುವಷ್ಟು ಬಿಡುವಿರುವುದಿಲ್ಲ. ಚಿಲ್ಲರೆ ಅಂಗಡಿಗಳೇ ಅಪರೂಪಕ್ಕಿರುವ ಹಳ್ಳಿಗಳಲ್ಲಿ ಬಳೆ ಮಲಾರ ಸಹಿತ ಅಂಗಡಿಗಳೇ ಅವರ ಬಳಿಗೆ ಬರುತ್ತವೆ! ಇವು ತಿರುಗಾಡುವ ಬಳೆ ಅಂಗಡಿಗಳು.

ಚಿತ್ರದಲ್ಲಿರುವ ಬಳೆಗಾರ್ತಿ ಮುನಿಯಮ್ಮ ಮತ್ತು ಆಕೆಯ ಜೊತೆಗಾರ್ತಿ ಸುಶೀಲಮ್ಮ ಇವರು ಮಂಡ್ಯ ಜಿಲ್ಲೆಯ ಹಿಟ್ಟಿನಹಳ್ಳಿ ಕೊಪ್ಪಲು ವಾಸಿಗಳು. ಬೀದಿಯಲ್ಲಿ 'ಬಳೆ ಬೇಕ್ರಮ್ಮ ಬಳೇ...' ಎಂಬ ರಾಗ ಕೇಳಿದಾಗ, ಹೊಲ-ಮನೆ ಕೆಲಸ ಮಾಡುವಾಗ ಬಳೆ ಒಡೆದು ಚೂರಾಗಿ ತಾವು ಬರಿಗೈಲಿರುವುದು ನೆನಪಾಗಿ ಮನೆ ಹೆಂಗಸರು ಹಜಾರಕ್ಕೆ ಬರುತ್ತಾರೆ. ಸುಖ ದುಃಖ ಹಂಚಿಕೊಳ್ಳುತ್ತ ತಮಗೆ ಮೆಚ್ಚಿದ ಬಳೆ ತೊಡಿಸಿಕೊಳ್ಳುತ್ತಾರೆ. ಕೆಲವೊಮ್ಮೆ ತಗ್ಗಿದ ಸ್ವರದಲ್ಲಿ ಬಸಿರು ಬಾಣಂತನದ ವಿಷಯ ಮಾತಾಡುವಷ್ಟು ಆತ್ಮೀಯತೆ! ಹೆಂಗಸರಿಗೆ ಬಳೆ ತೊಡಿಸಲು ಜಿಪುಣತನ ತೋರಿಸುವ ಗಂಡಸರನ್ನು ಹೊಗಳಿ ಪುಸಲಾಯಿಸಿ ಗಂಟು ಬಿಚ್ಚಿಸಲು ಇವರು ಸಹಕರಿಸುತ್ತಾರೆ. ಬಳೆ ತೊಡಿಸಿಕೊಳ್ಳುವುದನ್ನು ಸೌಭಾಗ್ಯದ ಸಂಕೇತವೆಂದು ಭಾವಿಸುವ ನಮ್ಮ ಹೆಂಗಸರು ಬಳೆ ತೊಡಿಸಿಕೊಂಡ ನಂತರ ಅದೊಂದು ಪವಿತ್ರ ಕಾರ್ಯ ಎನ್ನುವಂತೆ, ಮಲಾರಕ್ಕೆ ಶರಣು ಮಾಡುತ್ತಾರೆ. ಮದುಮಗಳಿಗೆ, ಬಸುರಿಗೆ, ಋತುಮತಿಯಾದ ಹುಡುಗಿಗೆ ಬಳೆ ತೊಡಿಸಿದಾಗ ಇವರಿಗೆ 'ಗೌರವದ ಕಾಣಿಕೆ' ಸಲ್ಲುತ್ತದೆ. ಹಿಂದೆ ಬಳೆಗಾರರೆಂದರೆ ಗಂಡಸರು ಮಾತ್ರ. ಈಗ ಹೆಂಗಸರೂ ಈ ಕಾಯಕದಲ್ಲಿ ತೊಡಗಿಕೊಂಡಿದ್ದಾರೆ.

ಗರೀಬಿ ಸೈಟಿನ ಮನೆಗಳಲ್ಲಿ ವಾಸ. ಜಮೀನಿಲ್ಲ. ಗಂಡಸರು ಹೊಲಗದ್ದೆಗಳಲ್ಲಿ ಕೂಲಿನಾಲಿ ಮಾಡುತ್ತಾರೆ. ಹೆಂಗಸರು ಸ್ತ್ರೀಶಕ್ತಿ ಸಂಘ ಸ್ಥಾಪಿಸಿಕೊಂಡಿದ್ದಾರೆ. ಈ ಸಂಘಗಳು ಈಗ ಪ್ರತಿಯೊಂದು ಹಳ್ಳಿಯಲ್ಲಿಯೂ ಕಾರ್ಯಪ್ರವೃತ್ತವಾಗಿವೆ. ಹೆಂಗಸರು ಸ್ವ-ಉದ್ಯೋಗಗಳಲ್ಲಿ, ಸಣ್ಣಪುಟ್ಟ ವ್ಯಾಪಾರಗಳಲ್ಲಿ ತೊಡಗಿಕೊಳ್ಳಲು, ಎಮ್ಮೆ-ಹಸು ಸಾಕಿ ಸಂಸಾರದ ಭಾರ ಕಡಿಮೆ ಮಾಡಲು ಸಹಾಯಕವಾಗುವಂತೆ ಸದಸ್ಯರಿಗೆ ಬಹಳ ಕಡಿಮೆ ಬಡ್ಡಿ ದರದಲ್ಲಿ ಸಾಲ ನೀಡುತ್ತವೆ. ಇವರು ಬಳೆ ವ್ಯಾಪಾರಕ್ಕೆ ಬೇಕಾದ ಬಂಡವಾಳವನ್ನು ಸಾಲ ರೂಪದಲ್ಲಿ ಪಡೆದು, ತಿಂಗಳಿಗೆ ಬಡ್ಡಿ ಸಹಿತ ನಿರ್ದಿಷ್ಟ ಮೊತ್ತವನ್ನು ಪಾವತಿ ಮಾಡುತ್ತ ಸಾಲ ತೀರಿಸುತ್ತಾರೆ. ಹಬ್ಬ ಹರಿದಿನಗಳ, ಮದುವೆಗಳ ಸಂದರ್ಭಗಳಲ್ಲಿ ವ್ಯಾಪಾರದ ಭರಾಟೆ ಹೆಚ್ಚು. ಪ್ರತಿದಿನ ಐದಾರು ಹಳ್ಳಿಗಳಲ್ಲಿ ತಿರುಗಾಡಿ ಬಳೆ ವ್ಯಾಪಾರ ಮಾಡುತ್ತಾರೆ. ಕೆಲವೊಮ್ಮೆ ಬರೀ ಅಲೆದಾಟ. ತಿಂಗಳಿಗೆ ಇನ್ನೂರರಿಂದ ಇನ್ನೂರೈವತ್ತು ರೂಪಾಯಿ ಉಳಿತಾಯವಾಗುತ್ತದೆ. ಗಂಡಸರಿಗೆ ಕೂಲಿ ಸಿಗದಿದ್ದರೆ ಈ ಉಳಿತಾಯ ಮನೆಯ ಖರ್ಚಿಗೆ.

ಮುನಿಯಮ್ಮ ಮೂರು ಮಕ್ಕಳ ತಾಯಿ. ಇಬ್ಬರು ಹೆಣ್ಣು ಮಕ್ಕಳಿಗೆ ಮದುವೆಯಾಗಿದೆ. ಗಂಡು ಮಗ ಶಾಲೆ ಕಲಿಯುತ್ತಿದ್ದಾನೆ. ಸುಶೀಲಮ್ಮನಿಗೂ ಎರಡು ಮಕ್ಕಳಿವೆ.

*ಚಿತ್ರ-ಲೇಖನ :* ***ಕೆ. ಪಿ. ಸ್ವಾಮಿ***, *೧೬೭, ೧೦ನೇ ಮೇನ್, ೩ನೇ ಹಂತ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೮*





Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna

**HOSATHU** Kannada Monthly / June 2007 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.